# ಹಳ್ಳಿಯ ಸಮಾಜ

ಶ್ರೀ. ಆರ್. ವ್ಯಾಸರಾವ

ಮನೋಹರ ಗ್ರಂಥ ಪ್ರಕಾಶನ ಸಮಿತಿ
ಧಾರವಾಡ

ಮನೋಹರ ಗ್ರಂಥಮಾಲೆಯ ೩೩ನೆಯ ಕುಸುಮ

೪ ನೆಯ ವರುಷದ ೪ ನೆಯ ಕುಸುಮ

# ಹಳ್ಳಿಯ ಸಮಾಜ

ಅನುವಾದಕರು --

ಶ್ರೀ. ಆರ್. ವ್ಯಾಸರಾಯರು



ಮನೋಹರ ಗ್ರಂಥ ಪ್ರಕಾಶನ ಸಮಿತಿ
ಧಾರವಾಡ

ಏಪ್ರಿಲ ೧೯೩೭] [೦—೧೨—೦

ಸಂಪಾದಕರು .

ಜಿ ಬಿ ಜೋಶಿ

ಜಿ ಸಿ ಚುಳಿಕಿ

ಮುದ್ರಕರು

ಶೇಷಗಿರಿರಾವ ಗೋವಿಂದರಾವ

ಕುಲಕರ್ಣಿ,

ಸಾಧನ ಪ್ರೆಸ್, ಧಾರವಾಡ

ಪ್ರಕಾಶಕರು

ಜಿ. ಬಿ ಜೋಶಿ

ಮನೋಹರ ಗ್ರಂಥಮಾಲಾ

ಧಾರವಾಡ

ಸಾಹಿತ್ಯ ವಿಷಯದಲ್ಲಿ ಸಲಹೆಗಾರರು

ಶ್ರೀ. ದ ರಾ ಬೇಂದ್ರೆ, ಎಂ ಎ

,, ರಂ ಶ್ರೀ ಮುಗಳಿ, ಎಂ ಎ ಬಿ. ಟಿ

,, ವಿ ಕೃ ಗೋಕಾಕ, ಎಂ ಎ ( ಇಂಗ್ಲಂಡದಲ್ಲಿ

# ನಮ್ಮ ಮಾತು

ನಮ್ಮ ಮಾಲೆಯ ನಾಲ್ಕನೆಯ ವರುಷದ ನಾಲ್ಕನೆಯ ಕುಸುಮವು "**ಮಾನಸಪುತ್ರ**" ವೆಂದು ನಮ್ಮ ೩ನೆಯ ಕುಸುಮದಲ್ಲಿ ಜಾಹೀರು ಪಡಿಸಿದ್ದೆವು. ಆದರೆ ಅದನ್ನು ಪ್ರಕಟಿಸುವ ವಿಚಾರ ಮುಂದೆ ಬಿದ್ದುದರಿಂದ ಅದರ ಬದಲು ಈ "ಹಳ್ಳಿಯ ಸಮಾಜ" ವನ್ನು ಪ್ರಕಟಿಸಿದ್ದೇವೆ. ಇದಾದರೂ ಫೆಬ್ರುವರಿಯಲ್ಲಿ ಚಂದಾದಾರರ ಕೈಸೇರಬೇಕಿತ್ತು; ಆದರೆ ಕೆಲವೊಂದು ಅನಿವಾರ್ಯ ಕಾರಣಗಳಿಗಾಗಿ ತಡೆಯಾಗಿ ಹೊರಬಂದುದಕ್ಕಾಗಿ ಚಂದಾದಾರರು ಕ್ಷಮಿಸಬೇಕೆಂದು ಬಿನ್ನವಿಸಿಕೊಳ್ಳುವೆವು. ಈ ವರುಷದ ಉಳಿದಿನ್ನೆರಡೂ ಕುಸುಮಗಳನ್ನು ಬೇಗನೆ ಪ್ರಕಟಿಸುವ ಸಾಹಸ ಮಾಡುತ್ತಿದ್ದೇವೆ. ಈ "ಹಳ್ಳಿಯ ಸಮಾಜ" ವು ವಂಗಸಾಹಿತ್ಯದಲ್ಲಿ ಒಳ್ಳೆ ಹೆಸರಾದ ಶ್ರೀ. ಶರಚ್ಚಂದ್ರ ಚಟರ್ಜಿಯವರ ಕೃತಿಯಾದ "ಪಲ್ಲಿ ಸಮಾಜ" ಎಂಬುದರ ಅನುವಾದವು. ಮೊನ್ನೆ ಮೊನ್ನೆ ಡಾಕಾ ಯುನಿವ್ಹರ್ಸಿಟಿಯವರು ಶ್ರೀ. ಶರಚ್ಚಂದ್ರರಿಗೆ ಡಾಕ್ಟರ್ ಎಂಬ ಪದವಿಯನ್ನು ಕೊಟ್ಟು ಇವರನ್ನು ಗೌರವಿಸಿದ್ದಾರೆ. ಇಂಥವರ ಕೃತಿಗಳ ಬಗ್ಗೆ ನಾವೇನಾದರೂ ಹೊಗಳಬೇಕೆಂಬ ಅವಶ್ಯಕತೆಯಿಲ್ಲ. ಇಷ್ಟು ಪ್ರಸಿದ್ಧಿಯನ್ನು ಪಡೆದುಬಿಟ್ಟಿವೆ ಇವರ ಎಲ್ಲ ಕೃತಿಗಳು. ಈ ಮೊದಲು ಇವರ "ಜಾಮುನೇರ ಮೇಯೇ" "ಬ್ರಾಹ್ಮಣರ ಹುಡುಗಿ" ಯನ್ನು ಮಾಲೆಯ ಮೊದಲ ವರುಷದ ೫ನೆಯ ಕುಸುಮವೆಂದು ಪ್ರಕಟಿಸಿದ್ದೆವು. ಅದನ್ನು ಅನುವಾದ ಮಾಡಿದವರೇ ಆದ ಶ್ರೀ. ಆರ್. ವ್ಯಾಸರಾಯರು ಇದನ್ನು ಅನುವಾದಿಸಿದ್ದಾರೆ. ಹಳ್ಳಿಯ ಸಮಾಜಗಳ ಪ್ರತ್ಯಕ್ಷ ಚಿತ್ರವನ್ನು ಇಲ್ಲಿ ಕಣ್ಣಾರೆ ಕಾಣಬಹುದಾಗಿದೆ.

ತಮ್ಮ ಈ ಕೃತಿಯನ್ನು ನಮ್ಮ ಮಾಲೆಯಲ್ಲಿ ಪೋಣಿಸಲು ಅನುಮತಿಯನ್ನಿತ್ತ ಶ್ರೀ. ಆರ್. ವ್ಯಾಸರಾಯರಿಗೆ ನಾವು ತುಂಬಾ ಉಪಕೃತರಾಗಿರುವೆವು.

ಸಂಪಾದಕರು,

**ಮ. ಗ್ರ. ಮಾಲಾ, ಧಾರವಾಡ**

# ಹಳ್ಳಿಯ ಸಮಾಜ

## ೧

ವೇಣೀಮಾಧವನು ಕಳ್ಳಂಬಯುವರ ಮನೆಯೊಳಗಿನ ಅಂಗಳಕ್ಕೆ ಕಾಲಿಟ್ಟೊಡನೆಯೆ ಎಳೆಹರಯದ ಹೆಂಗುಸೊಬ್ಬಳನ್ನು ಕಂಡು ಕೇಳಿದನು.

"ಇಗೋ, ಚಿಕ್ಕಿ, ರಮೆ ಎಲ್ಲಮ್ಮಾ?"

ಚಿಕ್ಕಿ ಜಪಮಾಡುತ್ತಿದ್ದಳು. ಸನ್ನೆಮಾಡಿ ಅಡುಗೆಮನೆಯ ಕಡೆ ತೋರಿಸಿದಳು. ವೇಣೀಮಾಧವನು ಅಲ್ಲಿಗೆ ಹೋಗಿ ಬಾಗಿಲ ಹೊಸ್ತಿಲ ಹೊರಗೇ ನಿಂತು, "ಹಾಗಿದ್ದರೆ ರಮೆ, ಏನು ಮಾಡೋದು ಗೊತ್ತು ಮಾಡಿದ್ದೀಯಾ?" ಎಂದನು. ಉರಿಯುತ್ತಿರುವ ಒಲೆಯ ಮೇಲಿನಿಂದ ಬಡಬಡಿಸುವ ಬಾಂಡಲೆಯನ್ನು ಕೆಳಕ್ಕೆ ಇಳುಹಿಸಿಟ್ಟು ರಮೆ ತಲೆಯೆತ್ತಿ ನೋಡಿ ಕೇಳಿದಳು.

"ಯಾವ ವಿಚಾರ ದೊಡ್ಡಣ್ಣಾ?"

ವೇಣೀಮಾಧವನು 'ತಿಮ್ಮ-ಚಿಕ್ಕಪ್ಪನ ಶ್ರಾದ್ಧದ ಮಾತು, ತಂಗಿ! ರಮೇಶ ನಿನ್ನೆ ಬಂದು ಹಾಜರಾಗಿದ್ದಾನೆ. ಅಪ್ಪನ ಶ್ರಾದ್ಧಾನ ಒಳ್ಳೇ ಬಡಾಯಿಯಾಗಿಯೇ ಮಾಡುತ್ತಾನೆಂತ ಕಾಣುತ್ತೆ; ಹೋಗುತ್ತೀಯೋ ಇಲ್ಲವೋ!' ಎಂದನು.

ರಮೆ ಕಣ್ಣುಗಳೆರಡನ್ನೂ ಅಚ್ಚರಿಯಿಂದ ಅಗಲಿಸಿ ಮಾತನಾಡಿದಳು. "ನಾನೆ, ಹೋಗೋದು, ತಿಮ್ಮಣ್ಣನ ಮನೆಗೆ?"

ವೇಣಿಯು ನಸು ನಾಚಿ ಹೇಳಿದನು. "ಅದು ಒಳ್ಳೆ ಅಕ್ಕ; ಇನ್ನೇನು ಬೇಕಾದರೂ ಆಗಲಿ, ನೀವಂತೂ ಏನು ಮಾಡಿದರೂ ಅಲ್ಲಿಗೆ ಹೋಗುವವರಲ್ಲ. ಆದರೆ ಕಿವಿಗೆ ಬಿತ್ತು, ಆ ಪೋಟ ಎಲ್ಲಾರನ್ನೂ ತಾನೇನೆ ಮನೆಮನೆಗೆ ಹೋಗಿ ಕರೀತಾನಂತೆ—ಆ ಕುಲಗೇಡಿ, ಬುದ್ಧೀಲಿ ಅವರಪ್ಪನನ್ನೂ ಮೀರಿಸಿದಾನೆ—ಬಂದರೆ-ಗಿಂದರೆ, ಆವಾಗ ನೀನೇನಂತೀ?"

ರಮೆ ರೋಷದಿಂದ ಉತ್ತರವಿತ್ತಳು. "ಏನನ್ನೂ ಎನ್ನುವುದಿಲ್ಲ—ಹೊರಗಡೆ ಆಳೇ ಅವನಿಗೆ ಉತ್ತರ ಹೇಳುತ್ತಾನೆ."

ಜಪದಲ್ಲಿ ನಿರತಳಾದ ಚಿಕ್ಕಿಯ ಕಿವಿಯ ಕುಹರದಲ್ಲಿ ಈ ಅತ್ಯಂತ ರುಚಿಕರವಾದ ಜಗಳದ ಆಲೋಚನೆ ತಲುಪಿದ ಮಾತ್ರದಿಂದಲೆ ಜಪವನ್ನು ಬಾರಿಸಿ ಅವಳು ಎದ್ದು ಬಂದಳು. ತಂಗಿಯ ಮಗಳ ಮಾತು ಕೊನೆಯಾಗುವುದಕ್ಕೆ ಮುಂಚೆಯೆ ಕುದಿಯುವ ಎಣ್ಣೆಗೆ ನೀರು ಬಿದ್ದಂತೆ ಜೋರ್‌ಗುಟ್ಟಿ ನುಡಿದಳು.

"ಆಳೇಕೆ? ನನಗೇನು ಮಾತಾಡೋಕೆ ಬಾರದೆ? ನತದೃಷ್ಟ ಮುಂಡೇದಕ್ಕೆ ಎಂಥಾ ಮಾತ ಕೇಳಿಸಿಬಿಡುತ್ತೇನೆ ಅಂತ, ರಾಯ! ಈ ಜನ್ಮದಲ್ಲಿ ಇನ್ನೆಂದಿಗೂ ಕಳ್ಳಂಬಿಯೋರ ಮನೇ ಕಡೆ ಮರೆತೂ ಕೂಡಾ ನೀರಿ ಹಾಕಿರಬಾರದು. ತಿಮ್ಮಣ್ಣನ ಮಗ ತಲೆ ಇಕ್ಕುತ್ತಾನೆಯೇ ಔತನ ಹೇಳೋದಕೆ ನಮ್ಮ ಮನೆಗೆ? ನಾನು ಕೂಂಚಾನು ಮರೆತಿಲ್ಲ, ವೇಣೀ ಮಾಧೂ! ತಿಮ್ಮಣ್ಣ, ಇಗೋ ಇವನೆ, ತನ್ನ ಮಗನಿಗೆ ನಮ್ಮ ರಮಾನ ತಕ್ಕೊಂಡು ಮದುವೆ ಮಾಡಿಕೋಬೇಕೂ ಅಂತ ಇದ್ದ. ಆಗ್ಗೆ ನಮ್ಮ ಜಯ ಇನ್ನೂ ಹುಟ್ಟಿರಲಿಲ್ಲ—ಅಂದುಕೊಂಡಿದ್ದ, ಕಳ್ಳಂಬಿ ವಾಸನ್ನೋರ ಆಸ್ತಿಯೆಲ್ಲ ತನ್ನ ಬೊಗಸಿಗೆ ಬೀಳುತ್ತೆ ಅಂತ—ತಿಳೀಲಿಲ್ಲವೆ ಅಪ್ಪಾ-ವೇಣಿ! ಅದು ಆಗದೆ ಹೋಯಿತು ನೋಡು, ಆಗ ಇಗೋ ಈ ಭುಜಂಗಾಚಾರೀನ ಹಿಡಿದು ಏನೆನೋ ಜಪತಪ ಮಾಟಮಂತ್ರ ಮಾಡಿಸಿ ನಮ್ಮ ರಮ್ಮನ ಹಣೆಗೆ ಬೆಂಕಿ ಇಟ್ಟು ಬಿಟ್ಟ ನೋಡು! ಇನ್ನೂ ಆರು ತಿಂಗಳು ಕಳೆದಿಲ್ಲ, ಅಷ್ಟರಲ್ಲೆ ಮಗುವಿನ ಕೊರಳ ಕರಿಮಣಿ, ಹಣೆ ಕುಂಕುಮ ಎಲ್ಲಾ ತೊಡೆದು ಹೋದವಲ್ಲಾ! ತನ್ನದು ಮನೆತನ ಕೇಳು, ಉತ್ತಮರ ಮನೆ ಕಳ್ಳಂಬಿ ವಾಸನ್ನೋರ ಮಗಳ್ನ ಮಗನಿಗೆ ತಂದುಕೋಬೇಕೂ ಅಂತ ಹಾರೈಸಿದನಲ್ಲಾ. ಅಂಥ ಮುಂಡೇಮಗನೂ ಸತ್ತ. ಮಗನ ಕೈಯ ಬೆಂಕಿ ಕೂಡಾ ಸಿಗಲಿಲ್ಲ. ಹೀನಜಾತಿಗೆ ಬೆಂಕಿಯಾಕ!"

ಹೀಗೆಂದು ಚಿಕ್ಕಿ ಕುಸ್ತಿಯನ್ನು ಮುಗಿಸಿ ಮೇಲುಸಿರಿಕ್ಕುತ್ತಿದ್ದಳು. ಬಾರಿಬಾರಿಗೂ ಕೀಳುಜಾತಿಯನ್ನು ಎತ್ತಿ ಹೇಳುದರಿಂದ ವೇಣಿಯ ಮೊಗ ಬಾಡಿಹೋಗಿತ್ತು. ಏಕೆಂದರ ತಿಮ್ಮಣ್ಣ ತನ್ನ ಸ್ವಂತ

ಚಿಕ್ಕಪ್ಪ. ರಮೆ ಇದನ್ನು ನೋಡಿ ಚಿಕ್ಕಮ್ಮನನ್ನು ಗದರುವ ದನಿಯಲ್ಲಿ "ಏಕೆ ಚಿಕ್ಕಿ, ನೀನು ಮನುಷ್ಯರ ಜಾತಿ ಎತ್ತಿ ಆಡೋದು? ಜಾತಿ ಯಾರೂ ತಮ್ಮ ಕೈಯಿಂದ ಮಾಡಿಕೊಳ್ಳುವಂಥಾದ್ದಲ್ಲವಲ್ಲಾ? ಯಾರು ಎಲ್ಲಿ ಹುಟ್ಟುತ್ತಾರೋ ಅದೇ ಅವರಿಗೆ ಒಳ್ಳೆಯದು." ಎಂದು ನುಡಿದಳು.

ವೇಣೀಮಾಧವನು ನಾಚಿದವನಂತೆ ತುಸು ನಕ್ಕು ಎಂದನು.

"ಅಲ್ಲವೆ ರಮೆ, ಚಿಕ್ಕಿ ಸೆಟ್ಟಗೇನೆ ಅಂತಾಳೆ. ನೀನು ಎಷ್ಟು ದೊಡ್ಡ ಕುಲೀನರ ಹೆಣ್ಣು, ನಿನ್ನನ್ನು ನಾವುಗಳು ಮನಗೆ ತರಲಾದೀತೆ, ತಂಗಿ! ಚಿಕ್ಕಪ್ಪನ ಈ ಮಾತನ್ನು ಬಾಯಲ್ಲಿ ತರುವುದು ಸಹ ಮಾನಕ್ಕೆ ಸಲ್ಲದ ಮಾತು. ಅದರ ಮೇಲೆ ಮಾಟಮಂತ್ರದ ಮಾತಂತೀಯೋ, ಅದು ನಿಜ! ದೇವಲೋಕದಲ್ಲ ಚಿಕ್ಕಪ್ಪ, ಈ ಭುಜಂಗಾಚಾರಿ, ಇವರಿಬ್ಬರಿಗೆ ಅನಾಥ್ಯ ಎನ್ನೋದು ಇಲ್ಲವೆ ಇಲ್ಲ. ಈ ಭುಜಂಗನೇ ಈಗ ಆಗಿದ್ದಾನೆ ರಮೇಶನಿಗೆ ಮನೇದೇವರು!" ಚಿಕ್ಕಿ, ಕೇಳಿದಳು. "ಅದನ್ನು ಎಲ್ಲರೂ ಬಲ್ಲರು ವೇಣಿ. ಈ ಪೈಕಳ ಹತ್ತು ಹನ್ನೆರಡು ವರ್ಷ ಆಯಿತು, ದೇಶಕ್ಕೆ ಬಂದವನೆ ಅಲ್ಲ–ಇಷ್ಟು ದಿನ ಇವನು ಇದ್ದನೆಲ್ಲಿ?"

"ನನಗೆ ತಿಳಿಯುವ ಬಗೆ ಹೇಗೆ, ಚಿಕ್ಕಿ? ಚಿಕ್ಕಪ್ಪನ ಸಂಗಡ ನಿಮ್ಮ ನಡವಳಿಯಂತೆಯೆ ನಮ್ಮದೂ ಕೂಡ; ಕೇಳಿದೆ, ಇಷ್ಟು ದಿನಾನೂ ಬೊಂಬಾಯಿಯೊ, ಎಲ್ಲೋ ಇದ್ದನಂತೆ. ಯಾರೊ ಅಂದುಕೊಂಡರು, ಡಾಕ್ಟರ ಪರೀಕ್ಷೆ ಕೊಟ್ಟು ವ್ಯಾಸಂಗ ಮಾಡಿಕೊಂಡು ಬಂದಿದಾನಂತ; ಇನ್ನ್ಯಾರೊ ಅಂದರು, ವಕೀಲನಾಗಿದ್ದಾನೆ ಅಂತ; ಮಗದೊಬ್ಬರು ಅಂತಾರೆ, ಎಲ್ಲಾ ಬುರುಡೆ–ಹುಡುಗ ಪೂರಾ ಕುಡಕ! ಮನೆಗೆ ತಲುಪಿದಾಗ ಎರಡು ಕಣ್ಣುಗಳೂ ಎರಡು ದಾಸಿವಾಳದ ಹೂಗಳಂತೆ ಕೆಂಪಗಿದ್ದವಂತೆ."

"ಸರಿ, ಸರಿಯೆ? ಹಾಗಿದ್ದರೆ ಅವನನ್ನು ಮನೆಯೊಳಕ್ಕೆ ಬರಗೊಡೋದು ವುದೇ ಸರಿಯಲ್ಲ" ಚಿಕ್ಕಿಯೆಂದಳು.

ವೇಣಿ ಉತ್ಸಾಹದಿಂದ ತಲೆಯನ್ನೊಂದು ಸಲ ಅಲುಗಾಡಿಸಿ

ಕೇಳಿದನು. "ಅಲ್ಲವಷ್ಟೆ! ಹೌದು, ರಮೆ, ನಿನಗೆ ರಮೇಶನ ಜ್ಞಾಪಕ ಪಿದೆಯಷ್ಟೆ?"

ತನ್ನ ಸ್ವಂತ ದುರದೃಷ್ಟದ ಪ್ರಸಂಗ ಬಂದುದರಿಂದ ರಮೆ ಮನಸಿನಲ್ಲಿಯೆ ನಾಚಿಗೊಂಡಳು. ಲಜ್ಜೆಬೆರೆತ ನಸುನಗೆಯನ್ನು ಮುಖದ ಮೇಲೆ ಮೂಡಿಸಿ ಎಂದಳು. "ಜ್ಞಾಪಕವಿರದೆ ಏನು. ಅವನು ನನಗಿಂತ ಬಹಳ ದೊಡ್ಡವನೇನೂ ಅಲ್ಲ. ಅದಲ್ಲದೆ ವೆಂಕಟರಮಣನಪ್ಪನ ಗುಡಿ ಹತ್ತಿರದ ಮಠದಲ್ಲಿ ಇಬ್ಬರೂ ಓದುತ್ತಿದ್ದೆವಷ್ಟೆ. ಆದರೆ ಅವನ ತಾಯಿ ಸತ್ತದ್ದು ಮಾತ್ರ ನನಗೆ ಚೆನ್ನಾಗಿ ಮನಸ್ಸಿನಲ್ಲಿದೆ. ಚಿಕ್ಕಮ್ಮನಿಗೆ ನನ್ನ ಕಂಡರೆ ಎಷ್ಟೋ ಪ್ರೀತಿ."

ಚಿಕ್ಕಿ ಮತ್ತೊಂದು ಸಲ ಹಾರಿಬಿದ್ದು ಹೇಳಿದಳು. "ಅವಳ ಆ ಪ್ರೀತಿ ಮುಖಕ್ಕೆ ಬೆಂಕಿಹಾಕ! ಆ ಪ್ರೀತಿ ಬರಿ ತನ್ನ ಕೆಲಸ ಸಾಧಿಸಿಕೊಳ್ಳೋದಕ್ಕೇನೆ. ಹೇಗಾದರೂ ಮಾಡಿ ನಿನ್ನನ್ನು ಕೈಗೆಹಾಕಿಕೊಳ್ಳಬೇಕೆಂತಲೆ ಅವಳ ಮನೋಗತ."

ವೇಣಿ ಅತ್ಯಂತ ವಿಜ್ಞನಂತೆ ದನಿಗೊಟ್ಟು ಹೇಳಿದನು. "ಇನ್ನೂ ಅದರಲ್ಲಿ ಸಂದೇಹವೇನುಂಟು, ಚಿಕ್ಕಿ! ಕಿರಿಚಿಕ್ಕಮ್ಮನೂನೂ...."

ಆದರೆ ಅವನ ಮಾತು ಮುಗಿಯುವುದಕ್ಕೆ ಮುಂಚೆಯೇ ರಮೆ ಅಪ್ರಸನ್ನಭಾವದಲ್ಲಿ ಚಿಕ್ಕಿಯನ್ನು ಗದ್ದರಿಸಿದಳು "ಅದೆಲ್ಲಾ ಪುರಾಣ ಕಟ್ಟಿಕೊಂಡು ಈಗೇನು ಚಿಕ್ಕಿ?"

ರಮೇಶನ ತಂದೆಯೊಡನೆ ರಮೆಗೆ ವಿವಾದ ಬೇಕಾದಷ್ಟು ಇದ್ದರೂ ಅವನ ತಾಯಿಯ ವಿಷಯದಲ್ಲಿ ಅವಳಿಗೆ ಎಲ್ಲೋ ಕೊಂಚ ಬೇನೆ ಮರೆಮಾಚಿಕೊಂಡು ಇತ್ತು. ಇಷ್ಟು ದಿವಸಗಳಾದರೂ ಅದು ಸಂಪೂರ್ಣವಾಗಿ ಹಿಮ್ಮೆಟ್ಟಿರಲಿಲ್ಲ. "ಅದು ಸರಿಯೆ, ಅದು ಸರಿ. ಕಿರಿಚಿಕ್ಕಮ್ಮ ಒಳ್ಳೆ ಮನೆತನದ ಮಗಳು, ಅವಳ ಮಾತೆತ್ತಿದರೆ ಈಗಲೂ ಅಮ್ಮ ಕಣ್ಣೀರಿಡುತ್ತಾಳೆ" ಎಂದು ವೇಣಿಯು ತತ್‌ಕ್ಷಣವೇ ಆ ಮಾತಿಗೆ ದನಿಗೊಟ್ಟನು.

ಯಾವ ಮಾತಿನಿಂದ ಯಾವ ಮಾತಿಗೆ ಇಳಿಯಿತು ಎಂಬುದನ್ನು ಅರಿತು ವೇಣಿಯು ತತ್‌ಕ್ಷಣದಲ್ಲಿ ಈ ಎಲ್ಲಾ ಪ್ರಸಂಗಗಳನ್ನು

ತಡೆದು ಹಾಕಿ ಮತ್ತೆ ಅಂದನು. 'ಹಾಗಿದ್ದರೆ ಇದು ದೃಢವಾಯಿತು, ಅಕ್ಕ, ನೋಡೋಣ ಬಿಡೋಣ ಇನ್ನೇನೂ ಇಲ್ಲವಷ್ಟೆ?"

ರಮೆ ನಕ್ಕು ಹೇಳಿದಳು. "ತಂದೆಯವರು ಅನ್ನುತ್ತಿದ್ದರು, 'ಬೆಂಕಿಶೇಷ, ಋಣಶೇಷ, ಮತ್ತು ಶತ್ರುಶೇಷ ಎಂದೆಂದಿಗೂ ಉಳಿಯಿಸಬಾರದಮ್ಮಾ.' ಕೊನೆ ಕೊನೆಗೆ ತಿಮ್ಮಣ್ಣ ನನಗೇನು ಕಮ್ಮಿ ಜಗಳ ಕೊಡಲಿಲ್ಲವಲ್ಲಾ—ತಂದೆಯವರನ್ನೂ ಜೈಲಿಗೆ ಸಹ ಕಳಿಸಬೇಕಂತ ಮಾಡಿದ್ದ. ನಾನೇನನ್ನೂ ಮರೆತಿಲ್ಲ, ದೊಡ್ಡಣ್ಣ,—ಜನ್ಮ ಇರೋತನಕ ಮರೆಯೆ. ರಮೇಶ ಆ ಶತ್ರುವಿನ ಮಗನಾನೆ! ಇದಲ್ಲದೆ ನಾನು ಏನ ಮಾಡಿದರೂ ಹೋಗುವುದಕ್ಕೆ ಆಗದು. ತಂದೆಯವರು ನಮ್ಮ ಇಬ್ಬರು ಅಕ್ಕತಮ್ಮಂದಿರಿಗೆ ಆಸ್ತಿಯನ್ನು ಹಂಚಿ ಹಾಕಿದಾರಷ್ಟೆ, ಆದರೆ ಆಸ್ತಿಯನ್ನೆಲ್ಲಾ ಜೋಪಾನ ಮಾಡುವ ಭಾರ ನನ್ನ ಮೇಲೆಯೆ ಇದೆಯಲ್ಲ! ನಾನಂತೂ ಇಲ್ಲವೇ ಇಲ್ಲ, ನಮ್ಮ ಸಂಪರ್ಕದಲ್ಲಿರುವವರನ್ನೂ ಕೂಡ ಹೋಗಗೊಡೆ."

ಚಿಕ್ಕ ಕೊಂಚ ಯೋಚಿಸಿ ಅಂದಳು. "ಒಳ್ಳೇದು ದೊಡ್ಡಣ್ಣ, ಹೀಗೆ ಮಾಡೋಕೆ ಆಗುವುದಿಲ್ಲವೆ, ಬ್ರಾಹ್ಮಣನೊಬ್ಬನಾದರೂ ಅವರ ಮನೆಗೆ ಹೋಗಬಾರದು?"!

ವೇಣಿ ಕೊಂಚ ಹತ್ತಿರಕ್ಕೆ ಸರಿದು ಒಂದು ಗಂಟಲನ್ನು ಸರಿಪಡಿಸಿ ಕೊಂಡು ಹೇಳಿದನು. "ಅದೇ ಪ್ರಯತ್ನದಲ್ಲಿದ್ದೇನೆ ತಂಗಿ, ನೀನು ನನ್ನ ಬೆಂಬಲಕ್ಕೆ ನಿಂತರೆ ನನಗೆ ಚಿಂತೆಯೆ ಇನ್ನಿಲ್ಲ. ರಮೇಶನನ್ನು ಈ ಛಾವಿ ಕುಂಟೆಯಿಂದ ಗಡೀಪಾರು ಮಾಡದೇ ಹೋದರೆ ನನ್ನ ಹೆಸರು ವೇಣೀ ಮಾಧವ ಘೋಷಗೇರಿಯಲ್ಲ! ಆಮೇಲೆ ಉಳಿಯುವವರು ನಾನು ಮತ್ತು ಈ ಭುಜಂಗಾಚಾರಿ; ಇನ್ನು ತಿಮ್ಮಣ್ಣ ಘೋಷಗೇರಿಯಿಲ್ಲ, ಆವಾಗ ನೋಡೋಣ ಈ ಭುಜಂಗನಿಗೆ ಹೊಟ್ಟೆಗೆ ಹಾಕುವವರಾರೂ?"

ರಮೆಯೆಂದಳು. "ಹೊಟ್ಟೆಗೆ ಹಾಕುತ್ತಾನೆ ರಮೇಶ ಘೋಷ ಗೇರಿ. ನೋಡಿಕೊ ದೊಡ್ಡಣ್ಣ, ನಾನು ಹೇಳಿರುತ್ತೇನೆ, ಹಗೆ ತೀರಿ ಸೋಕೆ ಇವನೇನೂ ಕಡಮೆ ಮಾಡಲಾರ."

ವೇಣಿ ಇನ್ನೂ ಕೊಂಚ ಹತ್ತಿರ ಸರಿದು ಒಂದು ಒಂದು ಸಲ

ಅತ್ತಿತ್ತ ನಿಟ್ಟಿಸಿ ನೋಡಿಕೊಂಡು ಹೊಸ್ತಿಲ ಮೇಲೆ ಕುಕ್ಕುಟಕಾಲಿನಲ್ಲಿ ಕುಳಿತನು. ಆಮೇಲೆ ದನಿಯನ್ನು ಬಲು ಮೃದುವು ಮಾಡಿ ಎಂದನು. "ರಮೆ, ವಂಶ ತೊಡೆದುಬಿಡಬೇಕಾದರೆ ಇದೆ ಸಮಯ. ಹಿಂಜರಿದರೆ ಇನ್ನು ನಡೆಯದು. ಇಗೊ ಖಂಡಿತ ಹೇಳಿಬಿಟ್ಟಿದ್ದೇನೆ! ಭೂಮಿಕಾಣಿ ಹೇಗೆ ಹೇಗೆ ಮಾಡಿ ಕಮಾಯಿಸಬೇಕೊ ಇನ್ನು ಅದನ್ನು ಅರಿಯ– ಇಷ್ಟರಲ್ಲೆ ಹಗೆಯ ಜಡ್ಡನ್ನು ಕಿತ್ತೊಗೆಯದೆ ಹೋದರೆ ಇನ್ನು ಮುಂದಕ್ಕೆ ಅದು ಆಗುವಂಥಾದ್ದಲ್ಲ; ಈ ಮಾತನ್ನು ನಾವು ಹಗಲಿರುಳು ನೆನಪಿನಲ್ಲಿಟ್ಟಿರಬೇಕು. ಇವನು ಆ ತಿಮ್ಮಣ್ಣ ಘೋಷಗೇರಿಯ ಮಗ– ಇನ್ನಾರೂ ಅಲ್ಲ!"

"ಅದು ನನಗೂ ತಿಳಿಯುತ್ತೆ ದೊಡ್ಡಣ್ಣ."

"ನಿನಗೆ ತಿಳಿಯದೆ ಉಂಟೆ ಅಕ್ಕ! ದೇವರು ನಿನ್ನನ್ನು ಗಂಡುಸಾಗಿ ಮಾಡುತ್ತಾ ಮಾಡುತ್ತಾ ಮರೆತು ಹೆಣ್ಣು ಮಾಡಿ ಬಿಟ್ಟ. ಬುದ್ಧಿಯಲ್ಲಿ ಪಕ್ಕಾ ಜಮೀನ್ದಾರನಂಥವನೂ ಸಹ ನಿನ್ನ ಮುಂದೆ ವಾರೆಯಾಗಿ ದಾರಿ ಬಿಡಬೇಕು. ಒಳ್ಳೇದು, ನಾಳೆಯೊಂದಾವರ್ತಿ ಬರುತ್ತೇನೆ. ಇವತ್ತು ಹೊತ್ತು ಹೋಯಿತು, ಹೊರಟೆ–" ಎಂದು ವೇಣಿ ಎದ್ದು ನಿಂತನು. ರಮೆ ಈ ಪ್ರಶಂಸೆಯಿಂದ ಅತ್ಯಂತ ಪ್ರೀತಿಗೊಂಡು ಎದ್ದು ನಿಂತು ಏನೋ ಒಂದು ಒಗೆಯ ಎದುರುಮಾತನ್ನು ಹೇಳಹೋಗುತ್ತಲೆ ಎದೆ ಝುಗ್ಗೆಂದ ಹಾಗಾಯಿತು. ಅಂಗಳದೊಳಗಡೆಯಿಂದ ಅಪರಿಚಿತ ಗಂಭೀರ ದನಿಯೊಂದು ಕೇಳಬಂದಿತು.

"ರಾಣಿ ಎಲ್ಲಿದ್ದಾಳೆ?"

ರಮೇಶನ ತಾಯಿ ಈ ಹೆಸರಿನಿಂದ ಚಿಕ್ಕತನದಲ್ಲಿ ಇವಳನ್ನು ಕರೆಯುತ್ತಿದ್ದಳು. ಅವಳು ಸಹಿತ ಅದನ್ನು ಮರೆತುಬಿಟ್ಟಿದ್ದಳು. ವೇಣಿಯ ಕಡೆ ಅವಳು ನಿಟ್ಟಿಸಿ ನೋಡಿದಳು. ಅವನ ಮುಖವೆಲ್ಲಾ ಕಪ್ಪಿಟ್ಟು ಹೋಗಿದೆ. ಮರುಕ್ಷಣದಲ್ಲಿಯೆ ಬಿರಿಗೂದಲು, ಬರಿಗಾಲು, ತಲೆಗೆ ಪಾಗು ಕಟ್ಟಿದ ರಮೇಶ ಬಂದು ನಿಂತನು. ವೇಣಿಯ ಮೇಲೆ ಕಣ್ಣು ಬಿದ್ದೊಡನೆಯೆ ಅವನು ಕೂಗಿದನು.

"ಇಗೊ ದೊಡ್ಡಣ್ಣ, ಇಲ್ಲಿಯೆ? ಒಳ್ಳೇದು, ನಡೀರಿ, ನೀವಲ್ಲದೆ

ಹೋದರೆ ಇನ್ನಾರು ಮಾತುವವರು! ಊರಲ್ಲೆಲ್ಲಾ ನಿಮ್ಮನ್ನು ಹುಡುಕಿ ಹುಡುಕಿ ಅಲೆದೆ. ಎಲ್ಲಿ ರಾಣಿ, ಎಲ್ಲಿ ಹೋದಳು!" ಎನ್ನುತ್ತಾ ಬಾಗಿಲ ಎದುರಿಗೆ ಬಂದು ನಿಂತನು. ಓಡಿ ಹೋಗಲು ಯತ್ನವಿಲ್ಲ. ರಮೆ ತಲೆಬಾಗಿ ನಿಂತಳು. ರಮೇಶನು ಒಂದು ಕ್ಷಣಮಾತ್ರ ಅವಳನ್ನು ನೋಡಿ ಮಹಾ ವಿಸ್ಮಯವನ್ನು ತೋರಿ ಕೇಳಹತ್ತಿದನು.

"ಇಗೋ ಇವಳೆ! ಎಲ ಎಲಾ ಎಷ್ಟು ದೊಡ್ಡವಳಾಗಿದ್ದೀಯ! ಚೆನ್ನಾಗಿದ್ದೀಯಷ್ಟೆ?"

ರಮೆ ಹಾಗೆಯೆ ಅಧೋಮುಖಿಯಾಗಿ ನಿಂತಿದ್ದಳು. ಥಟ್ಟನೆ ಬಾಯಿಗೆ ಮಾತೇ ಹಾಯಲಿಲ್ಲ. ಆದರೆ ರಮೇಶ ತುಸು ನಕ್ಕು ಕೇಳಿದನು. "ಗುರುತು ಸಿಕ್ಕಿತೇನೆ? ನಾನು ನಿಮ್ಮ ರಮೇಶಣ್ಣ"

ಇಷ್ಟಕ್ಕೂ ರಮೆ ಮುಖವನ್ನು ಎತ್ತಿ ನೋಡಲಾರದೆ ಹೋದಳು, ಆದರೂ ಸಣ್ಣ ದನಿಯಲ್ಲಿ ಕೇಳಿದಳು.

"ನೀವು ಚೆನ್ನಾಗಿದ್ದೀರಾ?"

"ಹೌದಮ್ಮಾ, ಚೆನ್ನಾಗಿದ್ದೇನೆ. ಆದರೆ ನನಗೆ "ನೀವು" ಎಂತ ಎನ್ನಬಹುದೆ?" ವೇಣಿಯ ಕಡೆ ತಿರುಗಿ ನೋಡಿ ಕೊಂಚ ಮುಖದ ಮೇಲೆ ನಗೆಯುರಳಿಸಿ ಮಾತನಾಡಿದನು:

"ರಮೆಯ ಆ ಮಾತನ್ನು ನಾನು ಎಂದಿಗೂ ಮರೆಯಲಾರೆ, ದೊಡ್ಡಣ್ಣ! ಅಮ್ಮ ಸತ್ತು ಹೋದಲಲ್ಲಾ ಆವಾಗಂತು ಇವಳು ಇನ್ನೂ ಬಹಳ ಸಣ್ಣವಳು. ಆ ವಯಸ್ಸಿನಲ್ಲಿಯೇ ನನ್ನ ಕಣ್ಣೊರಸಿ ಅಂದಿದ್ದಳು, 'ರಮೇಶಣ್ಣ ನೀನು ಅಳಬೇಡ, ನಮ್ಮಮ್ಮನ್ನ ನಾವಿಬ್ಬರೂ ಭಾಗಮಾಡಿ ಕೊಳ್ಳೋಣ.' ನಿನ್ನ ಈ ಮಾತು ನಿನಗೆ ನೆನಪಿಗೆ ಬರದೆ ಇರಬಹುದು. ಒಳ್ಳೇದು, ನಮ್ಮಮ್ಮನ ಜ್ಞಾಪಕವಾದರೂ ಇದೆಯೊ?"

ಮಾತು ಕೇಳಿ ರಮೆಯ ಕೊರಳು ನಾಚಿಕೆಯಿಂದ ಇನ್ನೂ ತಗ್ಗಿ ಹೋಯಿತು. ಅವಳು ಒಂದಾವರ್ತಿಯಾದರೂ ತಲೆಯಲ್ಲಾಡಿಸಿ ತಿಳಿಸದೆ ಹೋದಳು, ಚಿಕ್ಕಮ್ಮನ ಜ್ಞಾಪಕ ತನಗಿದೆಯಂತ. ರಮೇಶ ಹೆಚ್ಚಿಗೆ ರಮೆಯನ್ನೆ ಕುರಿತು ಹೇಳಿದನು:

"ಇನ್ನು ಹೊತ್ತಿಲ್ಲ, ನಡುವೆ ಇನ್ನು ಉಳಿದಿರುವುದು ಮೂರು ದಿನ

ಏನೇನು ಮಾಡಬೇಕೊ ಮಾಡಿಟ್ಟುಕೊಳ್ಳಿಯಮ್ಮಾ. ಸುತರಾಂ ತಬ್ಬಲಿಯಂತಾರಲ್ಲಾ, ಹಾಗೆ, ಆಗಿಹೋಗಿ ನಿಮ್ಮ ಮನೆಬಾಗಲಿಗೆ ಬಂದು ನಿಂತಿದ್ದೇನೆ. ನೀವು ಬಾರದೆ ಹೋದರೆ ಒಂದಿಷ್ಟೂ ಕಟ್ಟುಕಟ್ಲೆ ಮಾಡಲಿಕ್ಕೆ ನಾನರಿಯೆ. ''

ಚಿಕ್ಕಿ ಒಂದು ಸದ್ದು ಮಾಡದೆ ರಮೇಶನ ಹಿಂದುಗಡೆ ನಿಂತಿದ್ದಳು. ವೇಣಿಯಾಗಲಿ ರಮೆಯಾಗಲಿ ಒಂದು ಮಾತಿಗೂ ಉತ್ತರ ಕೊಡದೆ ಹೋಗಲು ಆಗ ತಾನು ಮುಂದೆ ಸರಿದು ಬಂದು ರಮೇಶನ ಮೊಗವನ್ನು ನೋಡಿ ಹೇಳಿದಳು. '' ನೀನು, ಮಗು, ತಿಮ್ಮಣ್ಣ ಘೋಷಗೇರಿ ಮಗನಲ್ಲವೇನೊ ? ''

ರಮೇಶನು ಇದಕ್ಕೆ ಮುಂಚೆ ಈ ಚಿಕ್ಕಿಯನ್ನು ನೋಡಿರಲಿಲ್ಲ; ಕಾರಣವೇನಂದರೆ ಅವನು ಹಳ್ಳಿಯನ್ನು ಬಿಟ್ಟು ಹೋದ ಮೇಲೆ ರಮೆಯ ತಾಯಿಯ ಅಸ್ವಸ್ಥತೆಯ ಕಾರಣದಿಂದ ಈಕೆ ಕಳ್ಳಂಬಿಯವರ ಮನೆಯನ್ನು ಹೊಕ್ಕಳು. ಆಮೇಲೆ ಹೊರಕ್ಕೆ ಬೀಳಲಿಲ್ಲ. ರಮೇಶ ಕೊಂಚ ಅಚ್ಚರಿಯಿಂದ ಅವಳ ಕಡೆ ತಿರುಗಿ ನೋಡುತ್ತಿದ್ದನು. ಚಿಕ್ಕಿ ಎಂದಳು.

'' ಇಲ್ಲದೆ ಹೋದರೆ ಇಂಥಾ ನಾಚಿಕ್ಕೇಡಿನ ಗಂಡಸು ಇನ್ನಾರಾಗಬೇಕು ! ತಂದೆಯಂತೆ ಮಗ. ಹೇಳಲಿಲ್ಲ, ಕೇಳಲಿಲ್ಲ, ಗೃಹಸ್ಥರ ಮನೆಯೊಳಕ್ಕೆ ನುಗ್ಗಿದ್ದಾನೆ, ಉತ್ಪಾತ ಹಚ್ಚೋಕೆ. ನಾಚಿಕೆಯಾಗುವುದಿಲ್ಲವೆ ನಿನಗೆ ! ''

ರಮೇಶ ಬುದ್ಧಿಭ್ರಷ್ಟನಂತೆ ಕಟ್ಟಿಗೆಯಾಗಿ ನೋಡುತ್ತ ನಿಂತನು. '' ನಾನು ಬಂದೆ '' ಎಂದು ವೇಣಿಯು ದಡಬಡನೆ ಜಾರಿಕೊಂಡನು. ರಮೆ ಅಡುಗೆಯ ಮನೆಯೊಳಗಿಂದ ಕೂಗಿದಳು, '' ಆದೇನು ಹರಟುತ್ತೀಯೆ, ಚಿಕ್ಕಿ, ನಿನ್ನ ಕೆಲಸಕ್ಕೆ ನೀ ಹೋಗು ''--ಚಿಕ್ಕಿ ಮನಸ್ಸಿನಲ್ಲಿ ತನ್ನ ಅಕ್ಕನ ಮಗಳ ಇಂಗಿತವನ್ನು ತಿಳಿದಳು. ಆದ್ದರಿಂದಲೆ ದನಿಯಲ್ಲಿ ಇನ್ನೂ ಕೊಂಚ ವಿಷವನ್ನು ಬೆರೆಯಿಸಿ ಎಂದಳು.

'' ಇಲ್ಲವೇ, ರಮೆ, ಹರಟತ್ತಾ ಇಲ್ಲ. ಮಾಡಲೇಬೇಕಾದ ಕೆಲಸಕ್ಕೆ ನಿಮ್ಮಗಳ ಹಾಗೆ ನಾನು ಕಣ್ಣಂಜಿಕೆ ಅರಿತವಳಲ್ಲ. ವೇಣಿ, ಹಾಗೇಕೆ ಗಾಬರಿಬಿದ್ದು ಓಡಿ ಹೋದ ? ಹೇಳಿ ಹೋಗಿದ್ದರೆ ಆಗಿತ್ತು ರಮೇಶನಿಗೆ.

ನಾವು, ಮಗು, ನಿನ್ನ ಗುಮಾಸ್ತೇರೂ ಅಲ್ಲ, ಸ್ವಂತ ಜಾಗೀರಿನ ಒಕ್ಕಲೂ ಅಲ್ಲ, ಬಂದು ನಿನ್ನ ಕರ್ಮಾವಾಡೋ ಮನೆಯಲ್ಲಿ ನೀರು ಹೊರಲಿಕ್ಕೆ,-- ಹೂರಣಾ ರುಬ್ಬಲಿಕ್ಕೆ. ತಿಮ್ಮಣ್ಣಾ ಸತ್ತ, ಹಳ್ಳಿ ಮಂದಿ ಯಲ್ಲಾ ಕೊಂಚ ಸುಧಾರಿಸಿಕೊಂಡರು. ಈ ಮಾತು ನಮ್ಮೇಲೆ ಹೊರಿ ಹೊರಿಸೋ ಬದಲು ತಾನೆ ತನ್ನ ಬಾಯಿಲೇ ಅಂದು ಹೋಗಿದ್ದರೆ ಗಂಡಿಸಿಸಂತೆ ಕೆಲಸ ಆಗುತ್ತಾ ಇತ್ತು."

ರಮೇಶ ಇನ್ನೂ ಎವೆಯಿಕ್ಕದೆ ಮಂಕನಂತೆ ನಿಂತಿದ್ದನು. ವಸ್ತುತಃ ಈ ತರಹದ ಮಾತುಗಳನ್ನು ಅವನು ಸ್ವಪ್ನದಲ್ಲಿಯೂ ಕೇಳಿ ದವನಲ್ಲ. ಒಳಗಡೆಯಿಂದ ಅಡುಗೆಯ ಮನೆಯ ಬಾಗಿಲ ಚಿಲಕ ಝಣ ಝಣವೆಂದು ಅಲುಗಾಡಿತು. ಆದರೆ ಯಾರೂ ಅದನ್ನು ಗಮನಿಸಲಿಲ್ಲ. ಚಿಕ್ಕಿಯು ರಮೇಶನ ಸೊಲ್ಲಿಲ್ಲದ ಬೆಳ್ಳಗಾದ ಮುಖವನ್ನು ನೋಡಿ ತಿರುಗಿ ಹೇಳಿದಳು.

"ಏನೇ ಆಗಲಿ, ಬ್ರಾಹ್ಮಣರ ಹುಡುಗನ್ನ ಆಳುಕಾಳುಗಳ ಕೈಲ ಮಾನ ತೆಗೆಯಿಸಲಾರೆ, ಕೊಂಚ ಎಚ್ಚರಿಕೆಯಿಂದ ಕೆಲಸಮಾಡಬೇಕು, ಮಗು, ಹೋಗು, ನೀನೇನು ಹಸುಳೆಯಲ್ಲವಲ್ಲ, ದೊಡ್ಡವರ ಮನೆಯಲ್ಲ ನುಗ್ಗಿ ಜೇರಿಸುತ್ತಾ ಓಡಿಯಾಡೋದಕ್ಕೆ! ನಿಮ್ಮ ಮನೆಗೆ ಕಾಲು ತೊಳೆಯೋದಕ್ಕೆ ಕೂಡಾ ಎಂದೆಂದಿಗೂ ನಮ್ಮ ರಮೆ ಹೋಗೋದಕ್ಕೆ ಆಗವಲ್ಲದು. ಇದನ್ನು ನಿನಗೆ ನಾನೇ ಹೇಳಿಬಿಟ್ಟಿದ್ದೇನೆ."

ರಮೇಶ ನಿದ್ರೆಯಿಂದ ಥಟ್ಟನೆ ಎಚ್ಚರಗೊಂಡವನಂತೆಯಾಗಿ ಮುಂದಿನ ಕ್ಷಣದಲ್ಲಿಯೆ ಅವನ ವಿಶಾಲವಾದ ವಕ್ಷದೊಳಗಿಂದ ಆಳವಾ ದೊಂದು ನಿಟ್ಟುಸಿರು ಹೊರಬಿದ್ದು ಅದರ ದನಿಯನ್ನು ಕೇಳಿ ತಾನೇ ಬೆಚ್ಚಿದನು. ಕೋಣೆಯೊಳಗಿಂದ ಬಾಗಿಲ ಮರೆಯಲ್ಲೆ ನಿಂತು ರಮೆ ಮೊಗವನ್ನು ಎತ್ತಿ ನಿಟ್ಟಿಸಿ ನೋಡಿದಳು. ರಮೇಶ ಒಂದು ಸಲ ಹಿಂದು ಮುಂದು ಮಾಡುವನಂತೆ ಕಂಡನು, ಆ ಮೇಲೆ ಅಡುಗೆಯ ಮನೆಯ ಕಡೆ ಉದ್ದೇಶಿಸಿ ಎಂದನು. "ಹೋಗಲೆ? ಕೂಡದೆ ಇದ್ದಲ್ಲಿ ಇನ್ನು ಯತ್ನವೇನಿದೆ! ಆದರಂತೂ ಈ ಮಾತುಗಳನ್ನು ನಾನರಿಯೆ—ತಿಳಿಯದೆ ಲೂಂದರೆ ಕೊಟ್ಟಿನಲ್ಲಾ, ಅದಕ್ಕಾಗಿ ನನ್ನನ್ನು ಮನ್ನಿಸಬೇಕು ರಾಣಿ!"

ಬಂದು ಮೆಲ್ಲ ಮೆಲ್ಲನೆ ಹೊರಟು ಹೋದನು. ಮನೆಯೊಳಗಿನ ಸದ್ದು ಕೊಂಚವೂ ಹೊರಬೀಳಲಿಲ್ಲ. ಮನ್ನಣೆಯು ಯಾರಲ್ಲಿ ಬೇಡಲಾಯಿತೋ ಅವಳು ಕಣ್ಮರೆಯಲ್ಲಿ ಅವನ ಮೊಗವನ್ನು ಸಿಟ್ಟಿನಿ ನೋಡುತ್ತಿದ್ದ ಳೆಂಬುದು ರಮೇಶನಿಗೆ ತಿಳಿಯಲಿಲ್ಲ. ವೇಣಿಯು ಆ ಕ್ಷಣವೆ ಹಿಂದಿರುಗಿ ಬಂದು ನಿಂತನು. ಅವನು ಪಲಾಯನ ಮಾಡಲಿಲ್ಲ. ಹೊರಗೆ ಅಡಗಿ ಕೊಂಡು ಕಾದಿದ್ದನು ಅಷ್ಟೆ. ಚಿಕ್ಕಿಯ ಜೊತೆಗೆ ಕಣ್ಣುಬೆರೆತೊಡನೆಯೆ ಅವನ ಮೊಗವೆಲ್ಲಾ ಆಹ್ಲಾದದಿಂದಲೂ ನಗೆಯಿಂದಲೂ ತುಂಬಿತುಳು ಕಿತು. ಸರಿದು ಬಂದು ಹೇಳಿದನು.

"ಸೈ, ಸೈ, ಕೇಳಿಸಿದೆಯೆ ಚಿಕ್ಕಿ. ನಮ್ಮಿಂದ ಸಾಧ್ಯವೆ ಇರಲಿಲ್ಲ ಹೀಗೆನ್ನಲಿಕ್ಕೆ. ಇದೇನು ಆಳು-ಕಾಳುಗಳಿಂದ ಆದೀತೆ, ಈ ಕೆಲಸ! ನಾನು ಮರೆಯಲ್ಲಿ ನಿಂತು ನೋಡಿದೆನಲ್ಲವೆ, ರಕ್ತ, ಮಾರೀನ ಅವಮಾನದ ನೋಡ ದಂತೆ ಮಾಡಿಕೊಂಡು ಹೊರಬಿದ್ದು ಹೋದ! ಇದು—ನೆಟ್ಟಗಾಯಿತು!"

ಚಿಕ್ಕಿಯು ಸಿಟ್ಟಿನಿಂದ ಕುಗ್ಗಿದ ದನಿಯಲ್ಲೆಂದಳು. "ತುಂಬ ಅಂತು ಆಯಿತು ಬಲ್ಲೆ; ಆದರೆ ಈ ಇಬ್ಬರು ಹೆಂಗಸರ ಮೇಲೆ ಹೊರೆ ಹಾಕಿ ನೀನು ಜಾರಿಕೊಳ್ಳುವುದಕ್ಕೆ ಬದಲು ನೀನೆ ನಿಂತು ಈ ಕೆಲಸ ಮಾಡಿದ್ದರೆ ಇನ್ನೂ ಚೆನ್ನಾಗಿತ್ತು! ಒಂದು ವೇಳೆ ನಿನ್ನಿಂದ ಆಗದೆ ಹೋಗಿದ್ದರೂ, ನಾನು ತಾನೆ ಏನೆಂದದ್ದು ಅವನಿಗೆ, ನೀನು ನಿಂತು ಕೇಳಬಾರದ್ದು? ಹಾಗೆ ಸರಕ್ಕನೆ ಸರಿದು ಬಿದ್ದೆಯಲ್ಲಾ, ಅದು ಒಳ್ಳೆದಲ್ಲ."

ಚಿಕ್ಕಿಯ ಮಾತಿನ ಚುರುಕಿನಿಂದ ವೇಣಿಯ ಮೊಗದ ನಗೆಯಳಿ ಯಿತು. ಈ ದೋಷಾರೋಪಣೆಗೆ ಏನು ಉತ್ತರ ಕೊಡಬಹು ದೆಂಬುದು ಅವನಿಗೆ ಹೊಳೆಯದೆ ಹೋಯಿತು. ಆದರೆ ಬಹಳ ಹೊತ್ತು ಯೋಚಿಸಬೇಕಾಗಲಿಲ್ಲ. ರಮೆ ಥಟ್ಟನೆ ಅದಕ್ಕೆ ಉತ್ತರಕೊಡುತ್ತ ಒಳಗಿಂದ ನಡೆದಳು. ಇದುವರೆಗೂ ಅವಳು ಮಾತೊಂದನ್ನೂ ಆಡಿರಲಿಲ್ಲ.

"ನೀನೆ ಸ್ವಂತವಾಗಿ ಹೇಳಿದೆಯಲ್ಲಾ ಅದೆ ಎಲ್ಲರಿಗಿಂತ ಚನ್ನಾ ಯಿತು, ಚಿಕ್ಕಿ. ಯಾರೇನಾದರೆನಲಿ, ಇಷ್ಟೊಂದು ವಿಷವನ್ನು ನಾಲಿಗೇಲಿ ಸೇರಿಸಲು ನಿನ್ನ ಮಟ್ಟಿಗೆ ಬಟ್ಟು ಯಾರಿಂದಲೂ ಸಾಧ್ಯವಾಗುತ್ತಿರಲಿಲ್ಲ."

ಚಿಕ್ಕಿ ವೇಣಿ ಇಬ್ಬರೂ ವಿಸ್ಮಯಗೊಂಡರು. ಚಿಕ್ಕಿ ಅಡುಗೆಯ ಮನೆಯ ಕಡೆ ತಿರುಗಿ ಕೇಳಿದಳು. "ಏನೆಂದೆಯೆ ?"

"ಏನೂ ಇಲ್ಲ, ಜಪಕ್ಕೆ ಕೂತೇಳಾವರ್ತಿ ಎದ್ದೆ—ಒಳಕ್ಕೆ ಹೋಗ ಬಾರದೆ, ಅದನ್ನು ಮುಗಿಸಿಹಾಕು, ಅಡುವುದು-ಗಿಡುವುದೇನೂ ಬೇಡವೊ," ಎನ್ನುತ್ತ ರಮೆ ತಾನೂ ಹೊರಗೆ ಬಂದಳು ಮತ್ತು ಯಾರಿಗೂ ಯಾವ ಮಾತನ್ನೂ ಹೇಳದೆ ಒಳಂಗಳವನ್ನು ದಾಟಿ ಅತ್ತಲ ಕೋಣೆಯನ್ನು ಹೊಕ್ಕಳು. ವೇಣಿ ಒಣಮೊಗದಿಂದ ಪಿಸಪಿಸನೆ ವಿಚಾರಿಸಿದನು.

"ಏನು ಸಮಾಚಾರ, ಚಿಕ್ಕಿ ?"

"ನನಗೆ ತಿಳಿಯುವ ಬಗೆ ಹೇಗೆ ಮಗು ? ಆ ರಾಜರಮಣಿಯರ ಮಿಜಾಜು ನಮ್ಮಂಥಹ ದಾಸಿಬಂದಿಯರಿಗೆ ತಿಳಿದೀತೆ ?" ಎಂದು ಸಿಟ್ಟು ಸಿಡಿಮಿಡಿಗಳಿಂದ ಮುಖ ಕಿವುಚಿಕೊಂಡು ಅವಳು ತನ್ನ ಜಪದ ಮಣೆಯ ಮೇಲೆ ಕೂತಳು, ಮತ್ತು—ತೋರುತ್ತೆ—ಮನಸ್ಸಿನಲ್ಲಿ ದೇವರ ನಾಮ ವನ್ನೆ ಜಪಿಸಿದಳು. ವೇಣಿ ಮೆಲ್ಲಮೆಲ್ಲನೆ ಹೊರಟು ಹೋದನು.

೨

ಈ ಭಾವೀಕುಂಟಿ ಆಸ್ತಿಯ ಸಂಪಾದನೆಯ ವಿಷಯವಾಗಿ ಇತಿ ಹಾಸವೊಂದುಂಟು. ಅದನ್ನು ಇಲ್ಲಿ ಹೇಳಲೇಬೇಕು. ಸುಮಾರು ನೂರು ವರುಷಗಳಾದವು, ಬಲರಾಮ ಕಳ್ಳಂಬ ಎಂಬ ಮಹಾ ಆಚಾರಶೀಲ ನೊಬ್ಬನು ಬಲರಾಮ ಘೋಷಗೇರಿ ಎಂಬುವನೊಡಗೂಡಿ ಪೂರ್ವ ಕಡೆಯಿಂದ ಈ ದೇಶಕ್ಕೆ ಬಂದನು. ಕಳ್ಳಂಬಿಯು ಬರಿ ಆಚಾರಶೀಲನು ಮಾತ್ರವೆ ಅಲ್ಲ, ಬುದ್ಧಿವಂತನೂ ಆಗಿದ್ದನು. ಮದುವೆಯಾಗಿ ಆರ್ಕಾಟು ಜಹಗೀರುದಾರರಲ್ಲಿ ಚಾಕರಿ ಮತ್ತೂ ಇನ್ನೂ ಏನೇನನ್ನೊ ಮಾಡಿ ಈ ಮಾನ್ಯಗಳನ್ನು ಕೈವಶ ಮಾಡಿಕೊಂಡನು. ಘೋಷಗೇರಿಯೂ ಇತ್ತ ಕಡೆಯೆ ಮದುವೆಯಾದನು. ಆದರೂ ತಂದೆಯ ಸಾಲವನ್ನು ತೀರಿ ಸಿದ್ದೇ ವಿನಾ ಬೇರೆ ಹೆಚ್ಚಿನ ಸಾಮರ್ಥ್ಯವಿರಲಿಲ್ಲ. ಆದುದರಿಂದ ದುಃಖ ಕಷ್ಟಗಳಿಂದಲೆ ಅವನ ದಿನಗಳು ಕಳೆಯುತ್ತಿದ್ದವು. ಈ ಮದುವೆಯ

ಕಾರಣವಾಗಿಯೆ ಏನೊ ಇಬ್ಬರು ಸಂಗಾತಿಗಳೊಳಗೆ ಮನಸ್ಸು ಮುಸುಕುಮುಚ್ಚಿತು. ಕೊನೆಗೆ ಅವರಿಗೆ ವಿವಾದಹುಟ್ಟಿ ಇಬ್ಬರೂ ಒಂದೇ ಗ್ರಾಮದಲ್ಲಿ ಇದ್ದುಕೊಂಡೂ ಇಪ್ಪತ್ತುವರುಷಗಳಾದರೂ ಒಬ್ಬರ ಮುಖ ಒಬ್ಬರು ನೋಡದಂತಹ ಹಗರಣಹುಟ್ಟಿಕೊಂಡಿತ್ತು. ಬಲರಾಮ ಕಳ್ಳಂಜಿ ಸತ್ತದಿವಸ ಸಹಿತ ಘೋಷಗೇರಿ ಅವರ ಮನೆಯ ಹೊಸ್ತಿಲನ್ನೂ ತುಳಿಯಲಿಲ್ಲ. ಅವನು ಸತ್ತ ಮರುದಿನವೆ ಬಹಳ ಆಶ್ಚರ್ಯವಾದ ವಾರ್ತೆಯೊಂದು ಕೇಳಬಂತು. ಅವನು ತನ್ನ ಸ್ವಂತ ಆಸ್ತಿಯನ್ನೆಲ್ಲ ಚೂರಿಯಿಂದ ಕತ್ತರಿಸಿದಂತೆ ಸಮಾರ್ಧ ಭಾಗ ಮಾಡಿ ತನ್ನ ಮಗನಿಗೆ ಒಂದು ಭಾಗ, ತನ್ನ ಸಂಗಾತಿಯ ಮಕ್ಕಳಿಗೆ ಮತ್ತೊಂದು ಭಾಗ ಬರೆದಿಟ್ಟು ಹೋಗಿದ್ದನು. ಅಂದಿನಿಂದ ಈ ಭಾವೀಕುಂಟೆ ಸರ್ವಮಾನ್ಯವನ್ನು ಕಳ್ಳಂಜಿ ಘೋಷಗೇರಿ ಮನೆತನದವರು ಅನುಭವಿಸುತ್ತಾ ಬಂದಿದ್ದಾರೆ. ಹೀಗೆಂತ ಇವರು ಹೇಳಿಕೊಂಡು ಹೆಮ್ಮೆಪಡುತ್ತಿದ್ದರಲ್ಲದೆ ಹಳ್ಳಿಗರು ಕೂಡ ಇದಲ್ಲವೆಂದು ವಾದಿಸಿದ್ದಿಲ್ಲ. ನಾವು ಹೇಳುತ್ತಿರುವ ಕಾಲದಲ್ಲಿ ಘೋಷಗೇರಿ ವಂಶದಲ್ಲೂ ಭಾಗವಾಗಿತ್ತು. ಆ ವಂಶದ ಕಿರಿಯ ಕಡೆ ತಿಮ್ಮಣ್ಣ ಮೊಕದ್ದಮೆ ಮಾಡಬೇಕೆಂತ ಜಿಲ್ಲೆಗೆ ಹೋಗಿ ಕೆಲದಿನಗಳ ಮುಂಚೆ ಥಟ್ಟನೆ ಒಂದು ದಿನ ಅದಾಲತ್ತಿನ ಚಿಕ್ಕ ದೊಡ್ಡ ಐದು ಆರು ಮೂಲೆಗೆ ಮತ್ತಲಿಸಿದ ಮೊಕದ್ದಮೆಗಳ ಪರಿಣಾಮವೇನಾಯಿತೆಂಬುದರ ಕಡೆ ಹುಬ್ಬುಕೂಡ ತಿರುಗಿಸದೆ ಎಲ್ಲಿಯದೊ, ಯಾವುದೊ, ಅರಿಯದ ಅದಾಲತ್ತಿನ ಮಹಾ ಮಾನ್ಯಸಮನನ್ನು ತಲೆಯ ಮೇಲೆ ಹೊತ್ತು ಸದ್ದಿಲ್ಲದೆ ಹೊರಟು ಹೋದನು. ಆಗ ಅವರ ಭಾವೀಕುಂಟೆ ಗ್ರಾಮದ ಹೊರಗೂ ಒಳಗೂ ಗಲಭೆಯೊಂದು ಹತ್ತಿ ಹೋಯಿತು. ಹಿರಿಯ ಮನೆತನದ ಯಜಮಾನ ವೇಣೀ ಘೋಷಗೇರಿ ಚಿಕ್ಕಪ್ಪನ ಮೃತ್ಯುವಿನಿಂದ ಗುಟ್ಟಾಗಿ ಆರಾಮದ ನಿಟ್ಟುಸಿರಿಟ್ಟು ಮನೆಗೆ ಹಿಂದಿರುಗಿದನು, ಮತ್ತು ಇನ್ನೂ ಗುಟ್ಟಾಗಿ ದಳವೊಂದನ್ನು ಕೂಡಿಸ ತೊಡಗಿದನು. ಏನಾದರೂ ಮಾಡಿ ಮುಂದೆ ಬರಲಿರುವ ಚಿಕ್ಕಪ್ಪನ ಶ್ರಾದ್ಧಕ್ಕೆ ಅಡ್ಡಿತಂದು ಗಡಿಬಿಡಿ ಮಾಡುವದೇ ಇವನ ಉದ್ದೇಶ. ದೊಡ್ಡಪ್ಪ ಚಿಕ್ಕಪ್ಪನ ಮಕ್ಕಳು, ಹತ್ತುವರುಷಗಳಾದರೂ ಒಬ್ಬರಮುಖ

ಒಬ್ಬರು ನೋಡಿಲ್ಲ. ಹತ್ತು ವರುಷಗಳ ಹಿಂದೆ ತಿಮ್ಮಣ್ಣನ ಮನೆ ಬರಿದಾಯಿತು, ಅಂದಿನಿಂದ ರಮೇಶನನ್ನು ಸೋದರಮಾವನ ಮನೆಗೆ ಕಳುಹಿಸಿ ಮನೆಯೊಳಗೆ ಅಡುಗೆಯವನು ಆಳುಕಾಳು, ಹೊರಗಡೆ ನೊಕಪ್ಪನು, ಕಟ್ಟಿಕೊಂಡು ತಿಮ್ಮಣ್ಣ ಕಾಲ ಹಾಕುತ್ತಿದ್ದನು. ರಮೇಶ ರೂರಕಿ ಕಾಲೇಜಿನಲ್ಲಿ ಈ ದುರ್ವಾರ್ತೆಯನ್ನು ಕೇಳಿ ತಂದೆಗೆ ಸಲ್ಲಿಸಬೇಕಾದ ಅಂತ್ಯಕರ್ತವ್ಯವನ್ನು ತೀರಿಸಲು ಬಹುಕಾಲದ ಮೇಲೆ ನಿನ್ನೆಯ ಮಧ್ಯಾಹ್ನ ಅವನ ಬರಿದಾದ ಮನೆಗೆ ಬಂದು ತಲುಪಿದ್ದನು.

ಕರ್ಮದ ಮನೆ, ನಡುವೆ ಎರಡೇ ದಿನಗಳು ಉಳಿದಿವೆ. ಗುರುವಾರ ರಮೇಶನ ತಂದೆಯ ತಿಥಿ. ಒಬ್ಬೊಬ್ಬರು ಬೇರೆ ಬೇರೆ ಹಳ್ಳಿಗಳ ಹಿರಿಯರು ಬಂದು ತಲುಪುತ್ತಿದಾರೆ. ಆದರೆ ತಮ್ಮ ಸ್ವಂತ ಹಳ್ಳಿ ಭಾನೀಕುಂಟೆಯು ದಾರೊಬ್ಬರೂ ಬರಲಿಲ್ಲವೇಕೆಂಬುದನ್ನು ರಮೇಶ ತಿಳಿದಿದ್ದನು. ಕೊನೆಯವರೆಗೆ ಯಾರೂ ಬರದೆಯೇ ಇರಬಹುದು, ಅದನ್ನೂ ಅರಿತಿದ್ದನು. ಬರಿ ಭುಜಂಗಾಚಾರಿ ಮತ್ತು ಅವರ ಮನೆಜನ ಬಂದು ಕೆಲಸಕಾರ್ಯಗಳಲ್ಲಿ ನೆರವಾಗಿದ್ದರು. ಸ್ವಂತ ಗ್ರಾಮದ ಬ್ರಾಹ್ಮಣರ ಪಾದಧೂಳಿಯ ಆಶೆ ಇಲ್ಲದೆ ಹೋದರೂ ಸಜ್ಜುಸರಜರಾಯಿನಲ್ಲಿ ದೊಡ್ಡವರ ಮಾನಕ್ಕೆ ತಕ್ಕಂತೆಯೆ ನಡೆಯಿಸುತ್ತಿದ್ದನು. ಇಂದು ಬಲುಹೊತ್ತಿನವರೆಗೂ ಮನೆಯೊಳಗಿನ ಕೆಲಸಕಾರ್ಯಗಳಲ್ಲಿ ರಮೇಶನು ಮಗ್ನನಾಗಿದ್ದನು. ಆದರೆ ಹೊರಗೇತಕ್ಕೋ ಬರಲು, ಇಬ್ಬರು ಮುದುಕರು, ದೊಡ್ಡ ಮನುಷ್ಯರು, ಒಂದು ಬೈಟಕ್ಖಾನೆಯ ಗದ್ದುಗೆಯ ಮೇಲೆ ಕುಳಿತು ನಶ್ಯವನ್ನು ತೀಡುತ್ತಿದ್ದುದನ್ನು ಕಂಡನು. ಎದುರಿಗೆ ಬಂದು ವಿನಯದಿಂದ ಏನಾದರೂ ಹೇಳ ಹೋಗುವಷ್ಟರಲ್ಲೇ, ಹಿಂದೆ ಸಪ್ಪಳ ಕೇಳಿ ತಿರುಗಿ ನೋಡಿದನು. ಒಬ್ಬ ಅತಿ ಮುದುಕನು ಐದಾರು ಮಕ್ಕಳುಮರಿಗಳಿಂದ ಕೂಡಿ ಕೆಮ್ಮುತ್ತ ಕೆಮ್ಮುತ್ತ ಒಳಹೊಕ್ಕನು; ಹೆಗಲ ಮೇಲೆ ಕೊಳೆ ಅಂಗವಸ್ತ್ರ, ಮೂಗಿನ ಮೇಲೆ ಚಂಡುಗಳಂತಿರುವ ಭಾರಿ ಕನ್ನಡಕ—ಅದೂ ಹಿಂದಕ್ಕೆ ಹುರಿಯಿಂದ ಬಿಗಿದಿದೆ, ಬಿಳಿಗೂದಲು, ಬಿಳೀಮೀಸೆ ನಶ್ಯದ ಬಣ್ಣದಿಂದ ಮಾಸಲಾಗಿದೆ, ಇವನು ಮುಂದೆ ಬಂದು ಆ ಭಯಂಕರವಾದ ಕನ್ನಡಕದೊಳಗಿಂದ ರಮೇಶನ ಕಡೆ ಕ್ಷಣಹೊತ್ತು ನಿಟ್ಟಿಸಿ

ಮಾತುಕಥೆಗಳಿಲ್ಲದೆಯೆ ಗೊಳೋ ಎಂದು ಅತ್ತುಬಿಟ್ಟನು. ರಮೇಶನಿಗೆ ಇವನಾರೆಂಬ ಗುರುತು ಸಿಗಲಿಲ್ಲ. ಯಾರೇ ಆಗಲಿ ದಪಬಪನೆ ಹತ್ತಿರ ಬಂದು ರಮೇಶ ಅವನ ಕೈಹಿಡಿಯುತ್ತಲೆ ಆ ಮುದುಕನು ಬಿಸಕಲು ದನಿಯಲ್ಲಿ ಹೇಳಹತ್ತಿದನು.

"ಇಲ್ಲಪ್ಪ ರಮೇಶ, ತಿಮ್ಮಣ್ಣ ಹೀಗೆ ಮಾಡಿ ಘಾತಿ ಹೊಡೆದು ಪಲಾಯನ ಮಾಡಿಬಿಟ್ಟ. ಹೀಗಾಗುತ್ತೆಂತ ಕನಸಲ್ಲಿ ಸಹ ಕಂಡಿರಲಿಲ್ಲ. ಆದರೆ ನಾವಂತೂ ಅಂತಹ ಚಟ್ಟನ ಹಳ್ಳಿವಂಶದಲ್ಲಿ ಹುಟ್ಟಿದವರಲ್ಲಪ್ಪ, ಅವರಿವರ ಬೆದರಿಕೆಗೆಬಿದ್ದು ಬಾಯಿಯಿಂದ ಸುಳ್ಳು ಬೊಗಳೋಕೆ. ಬರುವ ದಾರಿಯಲ್ಲಿ ನಿಮ್ಮ ವೇಣೀ ಘೋಷಗೇರಿಯ ಮೊಗದ ಮೇಲೆಯೆ ಹೇಳಿ ಬಂದೆ, ನಮ್ಮ ರಮೇಶ ಮಾಡುತ್ತಾ ಇದ್ದಾನಲ್ಲಾ ಶ್ರಾದ್ಧ ಪ್ರಯತ್ನ ಹಾಗೆ ಮಾಡೋದು ತಲೆಗೆ ಹತ್ತುವುದು ಹಾಗಿರಲಿ, ಕಣ್ಣಲ್ಲಿ ಸಹ ಯಾರೂ ಕಂಡಿಲ್ಲ."

ತುಸು ತಡೆದು ಮತ್ತೆ ಎಂದನು, "ನನ್ನ ಹೆಸರನ್ನು ಎತ್ತಿ ಹಲವು ಪೋಕರಿಗಳು ಹಲವು ಬಗೆಯಾಗಿ ನಿನ್ನ ಹತ್ತಿರ ಬೆರೆತುಕೊಳ್ಳುತ್ತಾರೆ. ನೋಡಿಕೊ, ಮಗು, ಆದರೆ ಇದರ ಮಟ್ಟಿಗೆ ನಿಜವಾಗಿ ತಿಳಿ, ಈ ಧರ್ಮ-ದಾಸ ಬರಿ ಧರ್ಮಕ್ಕೆ ದಾಸನೆ ಹೊರತು ಇನ್ನಾರಿಗೂ ದಾಸನಲ್ಲ."

ಹೀಗೆಂದು ಗೋವಿಂದ ಗಂಗಾಳಿಯ ಕೈಯಿಂದ ನಶ್ಯದ ಡಬ್ಬಿಯನ್ನು ಪಟಕ್ಕನೆ ಕಸಿದುಕೊಂಡು ಒಂದು ಚಿಟಿಕೆ ನಶ್ಯವನ್ನು ಏರಿಸಿ ದೊಡನೆಯೆ, ಬಹು ಜೋರಾಗಿ ಕೆಮ್ಮಿದನು.

ಧರ್ಮದಾಸನು ಸುತರಾಂ ಅತ್ಯುಕ್ತಿಯನ್ನೇನೂ ನುಡಿಯಲಿಲ್ಲ. ಸಜ್ಜುಸಡಗರದ ಬಗೆಯನ್ನು ನೋಡಿದರೆ ಈ ಅಂಚಿನಲ್ಲಿ ಹಾಗೆ ಯಾರೂ ಮಾಡಿರಲಿಲ್ಲ. ಮಳೆಯಾಳದಿಂದ ಅಡಿಗೆಯವರು ಬಂದಿದ್ದರು. ಅಂಗಳದ ಒಂದು ಪಕ್ಕಗೆ ವ್ಯಾಪ್ಯಾನ್ನ ಪೇರಿಕೆಯಾಗಿತ್ತು. ಅತ್ತಕಡೆ ಆ ಬೀದಿಯ ಹುಡುಗ ಹುಡುಗಿಯರು ಗುಂಪುಗೂಡಿ ನೋಡುತ್ತ ನಿಂತಿದ್ದರು. ಕಂಗಾಳಿಗಳಿಗೆ ಕೂಡ ಉಡುಗೊರೆಗಳು. ಕೈಸಾಲೆಯ ಅತ್ತಕಡೆ ಭುಜಂಗಾಚಾರಿಯು ಧಾನ್ಯಗಳನ್ನು ಕತ್ತರಿಸಿ ಕತ್ತರಿಸಿ ಮಡಿಕೆ ಹಾಕಿ ಮಾಗೆಮಾಡುತ್ತಿದ್ದನು. ಅತ್ತಲೂ ಕೆಲ ಜನರು ಕೈಮೇಲೆ ಊರಿಕೊಂಡು

ಕೊತು ಈ ಅಪವ್ಯಯದ ಪರಿಮಾಣವನ್ನು ಲೆಕ್ಕ ಮಾಡಿ ಮನಸ್ಸಿನಲ್ಲಿಯೇ ರಮೇಶನಿಗೆ ಒಪ್ಪ ಸಾಲದುದನ್ನು ಕುರಿತು ಅವನಿಗೆ ಬೈಗಳನ್ನು ಉಚ್ಚರಿಸುತ್ತಿದ್ದರು. ಬಡಬಗ್ಗರೂ ದುಃಖಿಗಳೂ ವಾರ್ತೆಯನ್ನು ಅರಿತು ಬಹು ದೂರದ ದಾರಿಗಳನ್ನು ನಡೆದು ಒಟ್ಟುಗೂಡುತ್ತಿದ್ದರು. ಮುಂದೆ, ಒಕ್ಕಲುಗಳೂ, ಹೊಗಳಭಟ್ಟರೂ ಮನೆತುಂಬಾ ತುಂಬಿಕೊಂಡು, ಕೆಲರು ಕಾದಾಡುವರು, ಕೆಲರು ಸುಮ್ಮನೆ ಗಲಭೆ ಮಾಡುವರು, ಹೀಗೆ ನಾಲ್ಕೂ ಕಡೆಯಲ್ಲಿನ ದೊಂಬಿ ಮತ್ತು ಅಪವ್ಯಯದ ಹೆಚ್ಚಳಿಕೆಯನ್ನು ನೋಡಿ ಧರ್ಮದಾಸನ ಕೆಮ್ಮು ಇನ್ನೂ ಉಗ್ಗಲಾಯಿತು.

ಪ್ರತ್ಯುತ್ತರವಾಗಿ ರಮೇಶ ಸಂಕೋಚಪಟ್ಟುಕೊಂಡು ಏನನ್ನೊ ಹೇಳ ಹೋಗುತ್ತಲಿದ್ದನು; ಆದರೆ ಧರ್ಮದಾಸ ಕೈಯಲುಗಿಸಿ ತಡೆದು ಗಡಗಡನೆಂದು ಏನನ್ನೇನೋ ಏನನ್ನೋ ಹೇಳಿ ಬಿಟ್ಟನು, ಕೆಮ್ಮಿನ ಹೊಡೆತದಲ್ಲಿ ಅದರ ಒಂದಕ್ಷರ ಸಹ ತಿಳಿಯಲಿಲ್ಲ.

ಗೋವಿಂದ ಗಂಗಾಳಿ ಮೊಟ್ಟಮೊದಲೇ ಬಂದಿದ್ದನು. ಸುತರಾಂ ಧರ್ಮದಾಸ ಹೇಳಿದುದನ್ನು ಹೇಳಲು ಅವನಿಗೆ ಅನುಕೂಲ ಎಲ್ಲರಿಗಂತೂ ಮುಂಚಿತವಾಗಿಯೆ ದೊರೆತಿದ್ದರೂ ನಷ್ಟವಾಯಿತೆಂದು ಭಾವಿಸಿಕೊಂಡು ಅವನ ಮನಸ್ಸಿನಲ್ಲಿ ಬೇನೆಯೊಂದು ಕಟಕಟನೆನ್ನುತಿತ್ತು. ಅವನು ಈ ಸುಯೋಗವನ್ನು ಕಳೆಯಗೊಡಲಿಲ್ಲ. ಧರ್ಮದಾಸನನ್ನು ಕುರಿತು ಆತುರಾತುರವಾಗಿ ಹೇಳಹತ್ತಿದನು.

“ನಿನ್ನೆ ಬೆಳಗ್ಗೇನೆ ತಿಳಿಯಿತು ಧರ್ಮದಾಸಣ್ಣಾ ಇಲ್ಲಿಗೆ ಬರೋಣವೆಂತ ಹೊರಟರೂ ಬರೋಕಾಗಲಿಲ್ಲ—ವೇಣಿ ಕರೆಕಳುಹಿದ, ‘ಗೋವಿಂದ ಚಿಕ್ಕಪ್ಪ ನಶ್ಯ ಹಾಕಿಕೊಂಡು ಹೋಗು’ ಎಂತ—ಆ ಮೇಲೆ ಮನಸ್ಸಿನಲ್ಲಿ ಮಾಡಿಕೊಂಡ, ವೇಣಿಯನ್ನು ನೋಡಿಯೇ ಹೋಗೋಣ, ಏನಂತಾನೋ ಅಂತ, ತಿಳೀತೆ ಅಪ್ಪ, ರಮೇಶ! ಅಂತಾನೆ ‘ಚಿಕ್ಕಪ್ಪ, ನೀವೆಲ್ಲಾ ರಮೇಶನಿಗೆ ಯಜಮಾನತನಕ್ಕೆ ನಿಂತಿದ್ದೀರೊ, ಎಲ್ಲರೂ ಊಟ ಉಪಚಾರ ಮಾಡುತ್ತೀರಷ್ಟೆ?’”

“ನಾನು ತಾನೆ ಬಿಟ್ಟೇನೆ! ದೊಡ್ಡ ಮನುಷ್ಯ ಹೌದು ಅಲ್ಲವ್ರೆ

ನೀನು, ನಮ್ಮ ರಮೇಶ ಯಾರಿಗೂ ಕಡಮೆ ಇಲ್ಲ–ನಿನ್ನ ಮನೆಯಲ್ಲಿ ಒಂದು ಹಿಡಿ ಅಕ್ಕಿ ಸಹ ಸಿಗುವ ಆಶೆ ಯಾರಿಗೂ ಇಲ್ಲ--ಎಂದೆ, ಇಗೋ ಇದೇ ದಾರಿ, ವೇಣೀರಾಯ್ರು, ಕಂಗಾಳಿಗಳು ಹೋಗಿ ಬರುತಾ ಇದ್ದಾರೆ. ಒಂದು ಬಾರಿ ನಿಂತು ನೋಡು. ನಿನ್ನೆ ಮೊನ್ನೆ ಹುಡುಗ ರಮೇಶ ಆದರೆ ಎದೆ ಬಿಚ್ಚಿ ಹೇಳುತ್ತೇನೆ ಇವನಾರೊ ಅವತಾರಪುರುಷ ಇರಬೇಕು! ಇಷ್ಟೊಂದು ವಯಸ್ಸಾಯಿತು ಇಂಥಾ ಸಜ್ಜುಸರಬರಾಯಿ ಎಂದೆಂದೂ ಕಣ್ಣಿಂದ ಕಂಡದ್ದೇ ಇಲ್ಲ! ಅದೂ ಅಂದು ಬಿಡುತ್ತೇನೆ. ಆದರೆ, ಏ! ಧರ್ಮದಾಸಣ್ಣ, ನಮ್ಮಿಂದ ಸಾಧ್ಯವೇನಯ್ಯಾ! ಕೆಲಸವಾರದೋ ಅವನೆ ಮೇಲಿಂದ ಮಾಡಿಸಿಕೊಳ್ಳುತ್ತಿದ್ದಾನೆ–ತಿಮ್ಮಣ್ಣ ಶಾಪಭ್ರಷ್ಟ ದಿಕ್ಪಾಲಕನೇ ಒಬ್ಬ, ಅಲ್ಲದೆ ಉಂಟೆ!"

ಧರ್ಮದಾಸನ ಕೆಮ್ಮು ನಿಲ್ಲಲೇ ಇಲ್ಲ; ಅವನು ಕೆಮ್ಮುತ್ತಲೇ ಇದ್ದನು.

ಅವನ ಎದುರಿನಲ್ಲೇ ಗಂಗಾಳಿ ಮಹಾಶಯನು ಒಳ್ಳೆಯೊಳ್ಳೆ ಮಾತುಗಳನ್ನು ಈ ಚೆನ್ನಾಗಿ ಪಕ್ವವಲ್ಲದ, ಎಳಸು ಜಹಗೀರುದಾರನಿಗೆ ಹೇಳುತ್ತ ಹೋಗುವುದನ್ನು ನೋಡಿ, ಧರ್ಮದಾಸನು ಇನ್ನೂ ಉತ್ತಮವಾಗಿ ಹೇಳ ಹೋಗುವ ಪ್ರಯತ್ನದಲ್ಲಿ ತುಂಬತುಳುಕುತ್ತಲಿದ್ದನು.

ಗಂಗಾಳಿ ಹೇಳ ಹೋದನು, " ನೀನಂತೂ ನಮಗೆ ಹೊರಗಿನವನಲ್ಲ. ಅತ್ಯಂತ ಸಮೀಪದವ. ನಿಮ್ಮಮ್ಮ ನನಗೆ ಹತ್ತಿರಿನ ಬಳಗ, ' ಸಾಕ್ಷಾತ್ ನಮ್ಮ ಚಿಕ್ಕಮ್ಮನ ಗಂಡನ ತಂಗಿಯ ಮಾವನವರ ತಂಗಿ. ರಾಧಾನಗರದ ಬಾಡುಜ್ಯರಮನೆ–ಅದೆಲ್ಲಾ ತಿಮ್ಮಣ್ಣ ಬಲ್ಲ. ಆದ್ದರಿಂದಲೇ ಏನೊ ಕೆಲಸ ಬಿದ್ದಾಗ ಸಾಕ್ಷಿ ಹೇಳೋದಕ್ಕೆ ಅಂತ ಗೋವಿಂದನಿಗೆ ಬುಲಾವು ಬಿತ್ತು."

ಧರ್ಮದಾಸನು ಜೀವಕ್ಕೆ ಹೊಣೆಗೊಟ್ಟು ಬಲ ತಂದುಕೊಂಡು ಕೆಮ್ಮನ್ನಣಗಿಸಿ ಕಿರಿಚಿದನು–" ಏಕೋ ಕೆಲಸಗಾಣದೆ ಹರಟುತ್ತಿ ಗೋವಿಂದ? ಖಕ್, ಖಕ್, ಖಕ್,–ನಾನು ಈಗಿನವನಲ್ಲ–ನಂಗೆ ತಿಳಿಯದೇನೊ? ಆ ವರುಷ ಸಾಕ್ಷಿ ಕೊಡುವಾಗ ಹೇಳಿದಲ್ಲೊ, ' ನನ್ನ ಕಾಲಿಗೆ ಜೋಡಿಲ್ಲ, ಬರೀ ಕಾಲಲ್ಲಿ ಹೇಗೆ ಹೋಗಲಿ ಅಂತ. ಖಕ್, ಖಕ್,

ಖಕ್–ತಿಮ್ಮಣ್ಣ ಆಗಲೆ ಎರಡೂವರೆ ರೂಪಾಯಿ ಕೊಟ್ಟು ಒಂದು ಜೊತೆ ಜೋಡ ತೆಗೆಸಿಕೊಟ್ಟ. ನೀನು ಅವನ್ನೇ ಮೆಟ್ಟಿ ವೇಣೀ ಕಡೆಗೆ ಹೋಗಿ ಸಾಕ್ಷಿ ಹೇಳಿ ಬಂದೆ! ಖಕ್–ಖಕ್–ಖಕ್–ಖ–.''

ಗೋವಿಂದ ಕಂಗಳಲ್ಲಿ ರಕ್ತಕಾರುತ್ತಾ ಎಂದನು. ''ಬಂದನೇನೊ?',

'' ಬರಲಿಲ್ಲವೆ?''

'' ಸರಿ ಅತ್ತತ್ತ ಸುಳ್ಳು ಬೊಗಳೋ ನಾಯಿ.''

'' ಸುಳ್ಳು ಬೊಗಳೋ ನಾಯಿ, ನಿಮ್ಮಪ್ಪ.''

ಗೋವಿಂದ ಅವನ ಮುರುಕಲು ಕೊಡೆಯನ್ನು ಹಿಡಿದು ನೆವರಿ ನೆಗೆದನು. ''ಹಾಗೇನೊ ಮುಂಡೇದೆ!''— ಧರ್ಮದಾಸನು ತನ್ನ ಬಿದುರುಗೋಲನ್ನು ಮೇಲಕ್ಕೆತ್ತಿ ನಶ್ಯ ತುಂಬುತ್ತಲೆ ಪ್ರಚಂಡವಾಗಿ ಕೆಮ್ಮಿದನು. ರಮೇಶ ಗಾಬರಿ ಬಿದ್ದು ಇಬ್ಬರ ನಡುವೆ ಬಂದು ನಿಂತು ಸ್ತಂಭಿತನಾಗಿಹೋದನು. ಧರ್ಮದಾಸನು ಕೋಲನ್ನು ಇಳಿಸಿ ಕೆಮ್ಮಿ ಕೆಮ್ಮುತ್ತ ಕುಕ್ಕರಿಸಿಬಿದ್ದು ಎಂದನು. ''ಆ ರಂಡೇದಕ್ಕೆ ನಾನು ವಯಸ್ಸಿನಲ್ಲಿ ದೊಡ್ಡಣ್ಣನಷ್ಟು, ಆದರೂ ಮುಂಡೇದರ ಮತಿ ನೋಡು–''

''ಹೌದೊ, ರಂಡೆಗಂಡ ನೀನು ನನಗೆ ದೊಡ್ಡಣ್ಣನೆ!'' ಎಂದು ಗೋವಿಂದ ಗಂಗಾಳಿ ಕೊಡೆಯನ್ನು ಮಡಿಸಿ ಕುಕ್ಕುರಿಸಿದನು.

ಪಟ್ಟಣವಾಸದ ಅಡಿಗೆಯವರು ಭಕ್ಷ್ಯಗಳನ್ನು ಬೇಯಿಸುವುದು ನಿಲ್ಲಿಸಿ ನೋಡುತ್ತ ನಿಂತರು. ನಾಲ್ಕೂ ದಿಕ್ಕುಗಳಲ್ಲಿಯೂ ಗೊತ್ತಾಗಿದ್ದ ಊಳಿಗದವರು ಕಿರಿಚಾಟವನ್ನು ಕೇಳಿ ತಮಾಷೆ ನೋಡುವುದಕ್ಕಾಗಿ ಎದುರಿಗೆ ಓಡಿಬಂದರು. ಆಟವನ್ನು ಮರೆತು ಹುಡುಗ ಹುಡುಗಿಯರು 'ಆ' ಯೆಂತ ಬಾಯ್ದೆರೆದು ಮೋಜನ್ನು ನೋಡುತ್ತಿದ್ದರು. ಈ ಎಲ್ಲಾ ಜನಗಳ ಕಣ್ಮುಂದೆ ರಮೇಶನು ನಾಚಿಕೆ, ವಿಸ್ಮಯಗಳಿಂದ ಮಂಕನಂತೆ ಸುಮ್ಮನೆ ನಿಂತಿದ್ದನು. ಅವನ ಬಾಯಿಂದ ಒಂದು ಮಾತೂ ಬರಲಿಲ್ಲ. ಇದೇನು? ಹಣ್ಣುಮುದುಕರಿಬ್ಬರು, ಉತ್ತಮರು ಬ್ರಾಹ್ಮಣರಲ್ಲಿ ಹುಟ್ಟಿದವರು! ಇಷ್ಟು ಸಾಮಾನ್ಯ ಕಾರಣದಿಂದಲೆ ಇತರರಂತೆ ಹೀಗೆಲ್ಲಾ ಬೈದಾಡಬಲ್ಲರೆ? ಕೈಸಾಲೆಯಲ್ಲಿ ಕೂತು ವಸ್ತ್ರಗಳನ್ನು

ಜೋಡಿಸುತ್ತಿದ್ದ ಭುಜಂಗನು ಎಲ್ಲವನ್ನು ನೋಡುತ್ತ ಕೇಳುತ್ತಲಿದ್ದನು. ಈಗ ಎದ್ದು ಬಂದು ರಮೇಶನನ್ನು ಕುರಿತು ಅವನು ಎಂದನು.

"ಸುಮಾರು ಪಂಚೆಗಳು, ನಾಲ್ಕು ನೂರು ಆದವು ಇನ್ನೂ ಬೇಕಾಗುತ್ತೆಯೆ?"

ರಮೇಶನ ಬಾಯಿಂದ ಥಟ್ಟನೆ ಮಾತು ಬರದೆ ಹೋಯಿತು. ಭುಜಂಗನು ರಮೇಶನ ದಿಗ್ಭ್ರಮೆಯಾದ ಭಾವವನ್ನು ನೋಡಿ ನಕ್ಕನು. ಮೃದುವಾದ ಅನುನಯದ ದನಿಯಲ್ಲಿ ಎಂದನು.

"ಛಿ ಗಂಗಾಳಿ ಆಚಾರ್ರೆ! ರಾಯರು ಒಂದೇಟಿಗೆ ಬೆರಗಾಗಿ ಹೋಗಿದ್ದಾರೆ! ನೀವೇನೂ ಮನಸ್ಸಿಗೆ ತಿಳಿದುಕೊಳ್ಳಬೇಡಿರಿ, ಹೀಗೆ ಬಹಳ ಆಗುವದುಂಟು. ದೊಡ್ಡದೊಡ್ಡ ಕಾರ್ಯ ಕೆಲಸಗಳಾಗುವ ಮನೆಗಳಲ್ಲಿ ಲಟಾಪಟಿಗಳೆಷ್ಟೊ, ತಲೆತಲೆ ಮಿಡಿದು ರಕ್ತಾರಕ್ತಿಗಳವರೆಗೂ ಆಗಿಹೋಗುತ್ತವೆ—ಇದರ ಮೇಲೆ ಇದೇನು ಸಾಮಾನ್ಯ. ತಗೊಳ್ಳಿ, ಏಳಿ, ಚಟಗೇರಿಯಯ್ಯಾ–ಕೊಂಚ ನೋಡೋಣವಾಗಲಿ, ಇನ್ನೂನೂ ಥಾನುಗಳನ್ನು ಹರಿಯಬೇಕೆ ಇಲ್ಲವೆ?"

ಧರ್ಮದಾಸನು ಉತ್ತರವೀಯುವುದಕ್ಕೆ ಮುಂಚೆಯೆ ಗೋವಿಂದ ಗಂಗಾಳಿ ಉಬ್ಬುಬ್ಬಿ ತಲೆಯನ್ನು ತೂಗುತ್ತಾ ಎದ್ದುನಿಂತು ಹೇಳಿದನು. "ಸಾಕು! ಸಾಕು! ಬೇಕಾದಷ್ಟು ಆಯಿತು! ಅಲ್ಲದೆ ಇದ್ದರೆ 'ಅಂತೇಷ್ಟಿ' ಯೆಂತ ಏಕೆ ಹೇಳುತ್ತಾರೆ? ಶಾಸ್ತ್ರದಲ್ಲಿದೆ, ಲಕ್ಷ ಮಾತುಕತೆಗಳಿಲ್ಲದೆ ಮದುವೆಯಾಗದು! ಆ ವರುಷ ನಿನಗೆ ನೆನಪಿಲ್ಲವೇನೊ ಭುಜಂಗ, ಕಳ್ಳಂಬಿಯೋರ ಮಗಳು ರಮೆಯ ಮದುವೆಯಲ್ಲಿ ಮನೆದೇವರ ಪ್ರತಿಷ್ಠೆ ದಿನ ಸ್ವಯಂಪಾಕದ ವಿಚಾರದಲ್ಲಿ ರಾಘವಭಟ್ಟರಿಗೂ ಹರಿಹರಭಟ್ಟಾಚಾರ್ಯರಿಗೂ ತಲೆ ತಲೆ ಒಡೆದು ಹೋದದ್ದು! ಆದರೆ ನಾನನ್ನೋದು ಭುಜಂಗ ತಮ್ಮಾ, ರಾಯರ ಈ ಕೆಲಸ ಚೆನ್ನಿಲ್ಲ. ಊರಿಗೆ ಸಣ್ಣ ಜನಗಳಿಗೆಲ್ಲಾ ಹಂಚೋದೂ ಬೂದಿಲಿ ತುಪ್ಪ ಎರೆಯೋದೂ ಒಂದೆ. ಅದಕ್ಕೆ ಬದಲು ಬ್ರಾಹ್ಮಣರಿಗೆ ಒಬ್ಬೊಬ್ಬರಿಗೆ ಎರಡೆರಡು ಜೊತೆ ಅವರ ಮಕ್ಕಳಿಗೆ ಎರಡೆರಡು ಒಂಟಿ ಕೊಟ್ಟರೆ ಹೆಸರುವಾಸಿಯಾದೀತು. ನಾನಂತೇನೆ ಅದೇ ಉಪಾಯ ಮಾಡಿಬಿಡಯ್ಯಾ ಎಂತ, ಧರ್ಮದಾಸ, ನೀನೇನಂತೀಯೊ?"

ಧರ್ಮದಾಸನು ಕೊರಳನ್ನು ಕುಲುಕುತ್ತಾ ಕುಲುಕುತ್ತಾ ಎಂದನು. "ಗೋವಿಂದನ ಮಾತು ಮುಂದವೇನೂ ಅಲ್ಲ, ರಾಯ. ಆ ಸೂಳೆ ಮಕ್ಕಳಿಗೆ ಸಾವಿರಕೊಟ್ಟರೂ ಹೆಸರು ಬರುವಂತೆ ಇಲ್ಲ. ಇಲ್ಲದೇ ಇದ್ದರೆ ಅವರನ್ನು ಸಣ್ಣ ಜನವೆಂತ ಏಕೆನ್ನುತ್ತಾರೆ? ತಿಳಿಯಲಿಲ್ಲವೆ ರಾಯ, ರಮೇಶ?"

ಇದುವರೆಗೂ ರಮೇಶನು ಸದ್ದಿಲ್ಲದೆ ಬಾಯಿಮುಚ್ಚಿಕೊಂಡಿದ್ದನು. ಈ ವಸ್ತ್ರವಿತರಣೆಯ ವಿಷಯವಾಗಿ ಅವನು ಒಂದೇ ಏಟಿಗೆ ಮರ್ಮಾ ಹತನಾದನು. ಈ ವಿಷಯದ ಸುಯುಕ್ತಿ–ಕುಯುಕ್ತಿಯ ಸಂಬಂಧವಾಗಿ ಯಲ್ಲ; ಈಗ ಇದೇ ಅವನಿಗೆ ಎಲ್ಲಕ್ಕಿಂತಲೂ ಹೆಚ್ಚಿಗೆ ಬಡಿಯಿತು, ಏನೆಂದರೆ ಇವರು ಸಣ್ಣಜನವೆನ್ನುತ್ತಾರೆಯಲ್ಲಾ ಅವರೆಲ್ಲರ ಕಣ್ಮುಂದೆಯೆ ಈಗ ತಾನೇ ಇಷ್ಟು ದೊಡ್ಡ ನಾಚಿಕೆಕೇಡಿನ ಕಾಂಡವನ್ನು ನಡೆಯಿಸಿ ಕೂತಿದಾರೆ, ಇದಕ್ಕಾಗಿ ಇವರಲ್ಲಿ ಯಾರ ಮನಸ್ಸಿಗೂ ಕೊಂಚವೂ ನೋವೂ ನಾಚಿಕೆಗೆ ಕಾರಣ ಸಹ ಇರುವಂತೆ ತೋಚಲಿಲ್ಲ. ಭುಜಂಗನು ಮೊಗ ನೋಡುತ್ತಲಿದ್ದಾನೆಂದು ಕಂಡು ರಮೇಶನು ಸಂಕ್ಷೇಪವಾಗಿ ಎಂದನು. "ಇನ್ನೂ ಇನ್ನೂರು ಪಂಚೆ ಜೊತೆಗಳನ್ನು ಸೇರ ಮಾಡಿಡಿ."

"ಹಾಗಿಲ್ಲದೆ ಇದ್ದರೆ ಆದೀತೆ ಭುಜಂಗಣ್ಣಾ? ನಡಿ ನಾನೂ ಬರುತ್ತೇನೆ– ನೀನೊಬ್ಬನೆ ಇನ್ನೆಷ್ಟು ಮಾಡಲು ಕೈಲೆ ಆದೀತು?" ಎಂದು ಯಾರ ಸಮ್ಮತಿಯನ್ನೂ ಕಾಯದೆ ಗೋವಿಂದನು ಎದ್ದು ಜವಳಿಯ ರಾಶಿಯ ಹತ್ತಿರ ಹೋಗಿ ಕೂತನು.

ರಮೇಶನು ಮನೆಯೊಳಗೆ ಹೋಗಬೇಕೆಂದು ತಿರುಗಿ ನೋಡಿದೊಡನೆಯೆ ಧರ್ಮದಾಸನು ಅವನನ್ನು ವಾರೆಯಾದೊಂದು ಕಡೆಗೆ ಕರೆದು ಮುಚ್ಚುಮರೆಯಾಗಿ ಬಹಳ ಮಾತನ್ನು ತಿಳಿಯಪಡಿಸಿದನು. ರಮೇಶನು ಪ್ರತ್ಯುತ್ತರವಾಗಿ ತಲೆಯನ್ನು ಅಲುಗಿಸಿ ಸಮ್ಮತಿಯನ್ನು ಸೂಚಿಸಿ ಒಳಕ್ಕೆ ಹೊರಟು ಹೋದನು. ಬಟ್ಟೆಗಳನ್ನು ಜೋಡಿಸುತ್ತಾ ವಾರೆಗಣ್ಣಿನಿಂದ ಗೋವಿಂದ ಗಂಗಾಳಿ ಎಲ್ಲವನ್ನೂ ನೋಡಿದನು.

'ಎಲ್ಲಿರೊ, ರಾಯರು ಎಲ್ಲಿ?' ಎನ್ನುತ್ತ ಒಣಕಲ ವ್ಯೆಯಿನ ಡಬ್ಬಣಕಾಟಿ ಏಿಸೆಯ ಹಣ್ಣುಮುದಿ ಬ್ರಾಹ್ಮಣನೊಬ್ಬನು ಬಂದನು.

ಇವನ ಜೊತೆಯಲ್ಲಿಯೂ ಮೂವರು ಹುಡುಗ ಹುಡುಗಿಯರು. ಹುಡು ಗಿಯೇ ಅವರಲ್ಲಿ ದೊಡ್ಡವಳು. ಅವಳ ಉಡಿಗೆ ಪೂರಾ ಮಾಸಿದ ಗೆರೆಗೆರೆ ಪಟ್ಟೆ ಸೀರೆಯೊಂದೆ; ಹುಡುಗರಿಬ್ಬರ ಸೊಂಟಗಳಲ್ಲಿ ಗೆಜ್ಜೆಯುಡಿದಾರಗಳ ವಿನಹ ಪೂರ್ತಿ ಬೆತ್ತಲೆ. ಅಲ್ಲಿದ್ದವರೆಲ್ಲರೂ ತಲೆಯೆತ್ತಿ ನೋಡಿದರು. ಗೋವಿಂದ ಬರಮಾಡಿಕೊಂಡನು.

"ಬಾ, ದೀನಣ್ಣ, ಕೂತುಕೊ. ನಮ್ಮ ಭಾಗ್ಯ ದೊಡ್ಡದು, ಇಂದು ನಿನ್ನ ಕಾಲಧೂಳಿ ದೊರಕಿತು. ಮಕ್ಕಳುಮುಟ್ಟೆಗೇನೆ, ಹಾಗಂದರೆ ನಿನ್ನ.."

ಧರ್ಮದಾಸ ಗೋವಿಂದನ ಮೇಲೆ ಕಿಡಿ ಕಿಡಿಯಾಗಿ ನೋಡಿದನು. ಅವನು ಹುಬ್ಬು ಕೂಡ ತಿರುಗಿಸದೆ "ಹಾಗಾದರೆ ನಿಮ್ಮ ಮನೆಯವರು ಯಾರೂ ಇತ್ತ ಸುಳಿಯೋಲ್ಲವೊ, ಅಣ್ಣ?"– ಎಂದು ಅವನ ಕೈಗೆ ನಶ್ಯದ ಚುಟಿಕೆಯನ್ನು ಎತ್ತಿ ಕೊಟ್ಟನು.

ದೀನಭಟ್ಟ ಆಸನವನ್ನು ಸ್ವೀಕರಿಸಿ ಒಂದೆರಡು ಸಲ ಪಟ್ಟೆ ನಶ್ಯದ ಸಪ್ಪೆತನವನ್ನು ಸೇದಿ ಎಂದನು. "ನಾನಂತೂ ಇರಲಿಲ್ಲಪ್ಪ – ನಿನ್ನ ಅತ್ತಿಗೆಯನ್ನು ಕರತರೋಕೆ ಅವಳ ತವರು ಮನೆಗೆ ಹೋಗಿದ್ದೆ, – ರಾಯ ಎಲ್ಲಿ? – ಕೇಳಿದೆ, ಅದೇನೊ ಭಾರಿ ಖಟ್ಲೆಯಂತಲ್ಲಾ? ಹಾದಿ ನಡೀತ ಆ ಹಳ್ಳಿ ಸಂತೇಲಿ ಅಂದುಕೊಳ್ಳುತ್ತಾ ಇದ್ದದ್ದು ಕೇಳಿ ಬಂದೆ, ಉಂಡು ತಿಂದು ಚಿಕ್ಕೋರು ದೊಡ್ಡೋರೆನ್ನದೆ ಎಲ್ಲಾರ ಕೈಗೂ ಹದಿನಾರು ತೇಂಗೂಳು, ನಾಲಕ್ಕು ಜೋಡಿ ಜಿಲೇಬಿ ಕೊಡುತ್ತಾರಂತೆ."

ಗೋವಿಂದ ದನಿಯನ್ನು ಬಿಗಿದು ಎಂದನು. "ಅದೂ ನೂ ಅಲ್ಲದೆ ಅದರ ಮೇಲೆ ಒಂದೊಂದು ಜೋಡಿ ಧೋತ್ರ. ಇಗೊ, ರಮೇಶರಾಯ, ಅದೆ ದೀನಭಟ್ಟನಿಗೆ ಹೇಳುತಲಿದ್ದೆ – ನಿಮ್ಮಗಳಂಥ ಐದು ಜನ ತಂದೆತಾಯಿ ಗಳ ಹರಕೆಯಿಂದ ಸಾಮಾನುಸರಂಜಾಮು ಬಂದು ಒಂದು ಬೀಳುತ್ತಾ ಇದೆ. ಆದರೆ ವೇಣಿ ಒಂದೆ ಪಟ್ಟಿಗ ಎದುರು ಬಿದ್ದು ನಿಂತಿದ್ದಾನಲ್ಲಾ. ಇಗೊ ನನ್ನ ಹತ್ತಿರಕ್ಕೆ ಸಹ ಎರಡೆರಡು ಬಾರಿ ಜನರನ್ನು ಅಟ್ಟಿದ್ದ. ನನ್ನ ಮಾತಂತೂ ಹಾಗಿರಲಿ ಬಿಡು, ರಮೇಶನ ಜೊತೆಯಲ್ಲಿ ನನಗೇನೋ ರಕ್ತದ ಸೆಳೆತವಿದೆ; ಆದರೆ ಇದೊ ಈ ದೀನಣ್ಣ, ಧರ್ಮದಾಸಣ್ಣ, ಇವ್ರುಗ ಳಾದರೂ, ರಾಯ, ನಿನ್ನ ಬಿಟ್ಟಾರೆ? ದೀನಣ್ಣನಂತೂ ಹಾದಿಯಲ್ಲಿ

ಕೇಳಿಯೇ ಓಡಿಬಂದ. ಎಲೋ ರಾಮಾ, ಸಶ್ಯಾ ತೆಗದುಕೊಂಡು ಬಾರೊ – ರಾಯ ರಮೇಶ, ಇತ್ತೊಂದು ಸಲ ಬಾ, ನೋಡೋಣ, ಒಂದು ಮಾತು ಮರೆತಿದ್ದೆ !"

ಬಿಡುವಿಗೆ ಕರದೊಯ್ದು ಪಿಸುನುಡಿಯಲ್ಲಿ ವಿಚಾರಿಸಿದನು. "ಒಳಗೆ ಧರ್ಮದಾಸನ ಹೆಂಡತಿ ಬಂದಿದಾಳಲ್ಲವೆ ? ಎಚ್ಚರ, ಎಚ್ಚರ, ಅಂಥ ಕೆಲಸ ಮಾಡಬೇಡಣ್ಣ, ಭಂಡಬ್ರಾಹ್ಮಣನ ಬಾಯಾರಿಕೆ ಕಳಿಸಲಾದೀತೆ, ಉಗ್ರಾಣದ ಬೀಗದ ಕೈಮುಟ್ಟಿಗೆ ಏನ ಮಾಡಿದರೂ ಅವಳ ಕೈಗೆ ಸಿಗಸಬೇಡ, ಏನ ಮಾಡಿದರೂನೂ; ತುಪ್ಪ, ಗೋದೀಹಿಟ್ಟು, ಬೆಲ್ಲ, ಸಕ್ಕರೆ, ಕೊಬ್ಬರಿ ಗಿಟಕು ಅರ್ಧಕ್ಕರ್ಧ ಸಾಗಿಸಿಬಿಡತಾಳೆ. ನಿನಗೇಕೆ ಯೋಚನೆ, ರಾಯ ? ನಾನು ಹೋಗಿ ನಿಮ್ಮ ಚಿಕ್ಕಮ್ಮನ್ನ ಕಳುಹಿಸಿಕೊಡುತ್ತೇನೆ. ಅವಳು ಬಂದು ಉಗ್ರಾಣದ ಭಾರಾ ವಹಿಸಿಕೊಳ್ಳುತ್ತಾಳೆ. ನಿನ್ನದು ಒಂದು ಹಂಚಿ ಕಡ್ಡಿ ಸಹ ಕದಲಲಿಕ್ಕಿಲ್ಲ."

ರಮೇಶ ಕೊರಳನ್ನು ಅಲುಗಿಸಿ ಅಷ್ಟಕ್ಕೆ ಎಂದು ಮೌನವಾಗಿದ್ದನು. ಅವನ ವಿಸ್ಮಯಕ್ಕೆ ಪಾರವೇ ಇಲ್ಲ. ಧರ್ಮದಾಸ ತನ್ನ ಹೆಂಡರನ್ನು ಉಗ್ರಾಣದ ಭಾರ ವಹಿಸುವದಕ್ಕೆ ಕಳುಹಿಸುವ ಮಾತನ್ನು ಇಷ್ಟೊಂದು ಗೋಪ್ಯವಾಗಿ ಹೇಳಿದ್ದನಾದರೂ ನೇರವಾಗಿ ಅದನ್ನೇ ಗೋವಿಂದ ಅಂದಾಜು ಮಾಡಿದನಲ್ಲಾ, ಅದೆಂತು ?

ಬೆತ್ತಲೇ ಮಕ್ಕಳಿಬ್ಬರೂ ಬಂದು ದೀನಣ್ಣನ ಕೊರಳಿಗೆ ನೇತು ಬಿದ್ದವು. "ಅಪ್ಪಾ, ಜಿಲೇಬಿ ತಿನ್ನಬೇಕು." ದೀನಣ್ಣನು ಒಂತಾವರ್ತಿ ರಮೇಶನ ಕಡೆಗೂ ಒಂದಾವರ್ತಿ ಗೋವಿಂದನ ಕಡೆಗೂ ನಿಟ್ಟಿಸಿ ಎಂದನು. "ಜಿಲೇಬಿ ಎಲ್ಲಿಂದ ಬಂದೀತೊ ?"

"ಏಕೆ, ಇಗೊ ಮಾಡ್ತಾ ಇದೆ," ಎಂದವರು ಅತ್ತಕಡೆ ಅಡಿಗೆ ಯವರನ್ನು ತೋರಿದರು.

"ನಮಗೂನೂ ಅಣ್ಣಾಜಿ" ಎಂದು ಮೂಗಿನಲ್ಲಿ ಅಳುತ್ತಾ ಅಳುತ್ತಾ ಇನ್ನೂ ಮೂವರು ನಾಲ್ವರು ಹುಡುಗ ಹುಡುಗಿಯರು ಓಡಿ ಒಂದು ಮುದುಕ ಧರ್ಮದಾಸನನ್ನು ಸುತ್ತುವರಿದು ಹಿಡಿದರು.

"ಒಳ್ಳೇದು, ಒಳ್ಳೇದು" ಎಂದಂದು ರಮೇಶನು ದಡಬಡನೆ

ಮುಂದಕ್ಕೆ ಬಂದನು. " ಓ ! ಆಚಾರ್ಯರೆ, ಮಧ್ಯಾಹ್ನದ ಹೊತ್ತಿನಲ್ಲಿ ಮಕ್ಕಳೆಲ್ಲಾ ಮನೆಗಳಿಂದ ಬಂದಿವೆ, ಉಂಡು ಬಂದಿಲ್ಲ; ಏನಯ್ಯಾ ನಿನ್ನ ಹೆಸರೇನು ? ಇತ್ತ ಕಡೆ ಆ ಪರಾತ ತೆಗೆದುಕೊಂಡು ಬಾ. "

ಅಡಿಗೆಯವನು ಜಿಲೇಬಿಯ ಪರಾತ ತಂದೊಡನೆಯೆ ಹುಡುಗರು ಮುಗ್ಗರಿಸಿ ಬಿದ್ದರು; ಹಂಚಲು ಕೂಡ ಅವಕಾಶವೀಯರು. ಹೀಗೆ ಗಲಾಟೆ ಮಾಡಿದರು. ಹುಡುಗರು ತಿನ್ನುವುದನ್ನು ನೋಡಿ ನೋಡಿ ದೀನನಾಥನ ಒಣನೋಟ ಸಹ ಕಂಬನಿದುಂಬಿತು.

" ಎಲೊ, ಲೊ, ಭೀಮೂ, ತಿಂತಿಯಷ್ಟೆ, ಜಿಲೇಬಿ ಹೇಗಿದೆಯೊ ನೋಡೋಣ ? "

" ಚೆನ್ನಾಗಿದೆಯಪ್ಪಾ, " ಎಂದು ಭೀಮು ಚಪ್ಪರಿಸ ಹತ್ತಿದನು.

ದೀನನು ಮಿದುವಾಗಿ ನಕ್ಕು ಕೊರಳನ್ನು ಕುಲಿಕಿ ಎಂದನು. ' ನಿಮ್ಮಗಳಿಗೆ ರುಚಿ ಬೇರೆ ? ಸೀ ಇದ್ದರೆ ಆಯಿತು. ಆಹಾ ಕೆಲಸದವರು ಇಂಥಹ ಬಾಂಡಲೆಯನ್ನು ಹೇಗೆ ಇಳಿಸಿದರು ? ಏನು ನೀನು ಹೇಳೊ, ಗೋವಿಂದಣ್ಣ, ಇನ್ನೂ ಕೊಂಚ ಬಿಸಲು ಇದೆಯಲ್ಲವೇ ? "

ಅಡಿಗೆಯವನು ಎತ್ತ ಕಡೆಯೂ ನೋಡದೆ ಎಂದನು, " ಸ್ವಾಮಿ, ಇಲ್ಲದೆ ಉಂಟೆ ! ಇನ್ನೂ ಬೇಕಾದಷ್ಟು ಹೊತ್ತಿದೆ. ಇನ್ನೂ ಸಾಯಂ ಸಂಧ್ಯೆಗೆ. . "

" ಹಾಗಾದರೆ ಕೊಡು ನೋಡೋಣ, ಒಂದು ಗೋವಿಂದಣ್ಣನಿಗೆ, ರುಚಿ ನೋಡಲಿ, ಹೇಗೆ ಮಾಡುತ್ತೀರೊ ಪಾಲಗಾಟಿನ ಅಡಿಗೆಯವರು ನೀವು ! ಬೇಡ ಬೇಡ, ನನಗೆ ತಿರುಗೂ ಏತಕ್ಕೆ ? ಹಾಗಾದರೆ ಅರ್ಧ ಮಟ್ಟಿಗೆ, ಬೇಡ, ಹೆಚ್ಚು ಬೇಡ. ಎಲೊ ರಾಮು, ಕೊಂಚ ನೀರು ತರಹೇಳೊ, ಕೈತೊಳೆದು ಬಿಡೋಣ. "

" ಹಾಗೆಯೆ ಒಳಗಿಂದ ಇನ್ನೊಂದು ನಾಲ್ಕಾರು ತಟ್ಟೆಯಷ್ಟು ತೆಗೆದುಕೊಂಡು ಬಾ ರಾಮಯ್ಯಾ ! " ಎಂದು ರಮೇಶನು ಕೂಗಿದನು.

ಯಜಮಾನರ ಅಪ್ಪಣೆಯಂತೆ ಒಳಗಡೆಯಿಂದ ಮೂರು ನಾಲ್ಕು ತಟ್ಟೆ ಜಿಲೇಬಿ, ನೀರಿನ ಪಂಚಪಾತ್ರೆಗಳು ಬಂದವು ಮತ್ತು ನೋಡ ನೋಡುತ್ತಲೆ ಈ ದೊಡ್ಡ ಪರಾತಗಳ ಅರ್ಧಮಟ್ಟಿನಷ್ಟು ಭೋಜ್ಯವು

ಈ ಮೂವರು ಹಣ್ಣು ಮುದುಕ, ಮಲೇರಿಯದಿಂದ ನರಳುವ ಒಣಕ ಲಾದ ಸದ್ಬ್ರಾಹ್ಮಣರ ಫಲಹಾರಕ್ಕೇ ಹಾರಿ ಹೋಯಿತು.

"ಆಹಾ, ಪಾಲಘಾಟಿನ ಕೈವಾಡವೇ ಸರಿ, ಧರ್ಮದಾಸಣ್ಣಾ ಏನಂತಿ?" ಎಂದು ದೀನನಾಥನು ಕಟ್ಟಿದ್ದ ಉಸಿರನ್ನು ಬಿಟ್ಟನು. ಧರ್ಮದಾಸಣ್ಣನದು ಇನ್ನೂ ಮುಗಿದಿರಲಿಲ್ಲವಾದುದರಿಂದ ಅವನ ತೊದಲು ಗಂಟಲದನಿಯು ಜಿಲೇಬಿಗಳ ತಾಳವನ್ನು ಭೇದಿಸಿಕೊಂಡು ಸಹಜವಾಗಿ ಬಾಯಿಂದೀಚಿಗೆ ಬರಲು ಸಾಗದೆ ಹೋದರೂ ಅರ್ಥವೇನೊ ಆಯಿತು, ಈ ವಿಷಯದಲ್ಲಿ ಅವನಿಗೆ ಮತಭೇದವಿಲ್ಲ."

"ಹಾ, ವಸ್ತಾದಿಗಳ ಕೈವಾಡವೆ ಸರಿ" ಎನ್ನುತ್ತ ಗೋಪಿಂದನು ಎಲ್ಲರಿಗಿಂತ ಕೊನೆಗೆ ಕೈತೊಳೆಯುವ ಪ್ರಯತ್ನ ಮಾಡುತ್ತಿರುವಾಗ ಅಡುಗೆಯವನು ವಿನಯದಿಂದ ಬಲವಂತ ಮಾಡಿದ.

"ಕಷ್ಟವೇನೊ ಪಟ್ಟುಕೊಂಡಿರಿ, ಭಟ್ಟರೆ, ಆದರೆ ಈ ಮೋತೀ ಚೂರನ್ನೂ ಹಾಗೆಯೆ ಪರಿಕಿಸಿ ನೋಡಿಬಿಡಿ."

"ಮೋತೀಚೂರು? ಎಲ್ಲಿ ತಾರಯ್ಯಾ ನೋಡೋಣ?"

ಮೋತೀಚೂರು ಒಂತು ಮತ್ತು ಇಪ್ಪೊಂದು ಜಿಲೇಬಿಗಳ ಮೇಲೆ ಈ ಹೊಸವಸ್ತುವಿನ ಸದ್ವ್ಯವಹಾರವನ್ನು ನೋಡಿ ರಮೇಶ ಸದ್ದು ಮಾಡದೆ ನಿಟ್ಟಿಸಿ ನಿಂತನು. ದೀನನಾಥನು ಮಗಳ ಕಡೆ ಕೈಚಾಚಿ ಹೇಳಿದನು. "ಎಲೆ ಪುಟ್ಟಿ, ಹಿಡಿಯೆ ನೋಡೋಣ ಈ ಯರಡುಂಡೆ ಮೋತೀಚೂರಾ."

"ಇನ್ನು ನನ್ನಿಂದ ತಿನ್ನೋಕೆ ಆಗವಲ್ಲದಪ್ಪ!"

"ಆಗುತ್ತೆ, ಆಗುತ್ತೆ ಒಂದು ಗುಟುಕು ನೀರು ಕುಡಿದು ಗಂಟ್ಲ ನೆನೆಸಿಕೊ ನೋಡು, ಗಂಟ್ಲು ಕೂತುಬಿಟ್ಟಿರಬೇಕಷ್ಟೆ! ಕೈಲಾಗದೆ ಹೋದರೆ ಸೆರಗಿನ ಕೊನೇಲಿ ಗಂಟು ಹಾಕ್ಕೊ, ನಾಳೆ ಬೆಳಿಗ್ಯೆ ತಿನ್ನುವಿ. ವಾ, ರಾಯ, ತಿನಿಸಿದೆ ಸರಿಯೆ! ಅಮೃತವೆ! ಹೇಗೆ ಹಸನಾಗಿದೆ. ಸಿಹಿ ಎರಡು ಬಗೆಯದು ತಾನೆ?"

ರಮೇಶನು ಹೇಳಬೇಕಾಗಲಿಲ್ಲ. ಅಡಿಗೆಯವನೆ ಉತ್ಸಾಹದಿಂದ ಹೇಳಿದನು. "ಇಲ್ಲಿ ಸ್ವಾಮಿ, ಒಫ್ಸಿ, ಡಂ ರೋಟು."

"ಆ ಬರ್ಫಿ? ಎಲ್ಲಿ ಅದನ್ನು ಹೊರಕ್ಕೆ ತೆಗೆಯಲಿಲ್ಲವೆ, ರಾಯ?"

ರಮೇಶನ ವಿಸ್ಮಿತ ಮೊಗವನ್ನು ನೋಡಿ ದೀನನಾಥ ಎಂದನು. "ಉಂಡಿದ್ದೆ ಸರಿಯೆ ರಾಧಾನಗರದ ವಾಸುದೇವರಾಯರ ಮನೇಲಿ. ಇನ್ನೂ ಬಾಯಿಗೆ ಹತ್ತಿಕೊಂಡಂತೆ ಇದೆ. ಹೇಳಿದರೆ ನಂಬಲಾರೆ, ರಾಯ, ಬರ್ಫಿ ಮೇಲೆ ನನಗೆ ಪ್ರಾಣ."

ರಮೇಶನು ನಕ್ಕು ತುಸು ಕೊರಳನ್ನು ಅಲುಗಿಸಿದನು. ಮಾತನ್ನು ನಂಬುವುದು ಅತ್ಯಂತ ಕಠಿಣವೆಂತ ತೋರಲಿಲ್ಲ. ರಾಘು ಏನೊ ಕೆಲಸದ ಮೇಲೆ ಹೊರಕ್ಕೆ ಹೋಗುತ್ತಿದ್ದನು. ರಮೇಶನು ಅವನನ್ನು ಕರೆದು ಹೇಳಿದನು. "ಒಳಗೆ ಆಚಾರ್ಯರಿರಬೇಕು, ಹೋಗಪ್ಪಾ ರಾಘು ಅಷ್ಟು ಬರ್ಫಿಯನ್ನು ತರಹೇಳಿ ಬಾ, ನೋಡೋಣ."

ಸಂಜೆ ತೀರಿರಬೇಕು. ಆದರೂ ಬ್ರಾಹ್ಮಣರು ಬರ್ಫಿಯ ಆಸೆಯಲ್ಲಿ ಉತ್ಸುಕರಾಗಿ ಕೂತಿದ್ದಾರೆ. ರಾಘು ಹಿಂದಿರುಗಿ ಬಂದು ಹೇಳಿದನು.

"ಈ ಹೊತ್ತು ಇನ್ನು ಉಗ್ರಾಣವ ಬಾಗಿಲು ತೆಗೆಯಲಾಗದು, ರಾಯರೆ!"

ರಮೇಶನು ಮನದಲ್ಲಿ ಬೇಸರಗೊಂಡು, ಎಂದನು. "ಹೇಳು, ನಾನು ತರಹೇಳುತ್ತಿದ್ದೇನೆಂತ!"

ಗೋವಿಂದನು ರಮೇಶನ ಅಸಂತೋಷವನ್ನು ಲಕ್ಷ್ಯವಿಟ್ಟು ಕಣ್ಣು ತಿರುವಿ ಎಂದನು,— "ನೋಡಿದೆಯೊ ದೀನಣ್ಣ ಭುಜಂಗನ ಬುದ್ಧಿಯನ್ನು? ಇದೆ ಕಾಣುತ್ತಲ್ಲ, ಅಮ್ಮನಿಗಿಂತ ಚಿಕ್ಕಮ್ಮನದೆ ಪ್ರಬಲ ಹೆಚ್ಚು. ಆದುದರಿಂದಲೆ ನಾನೆನ್ನುವುದು."

ಅವನು ಹೇಳುವುದನ್ನು ಕೇಳದೆಯೆ ರಾಘು ಹೇಳಹತ್ತಿದನು. "ಆಚಾರ್ರು ಏನ ಮಾಡಿಯಾರು? ಆ ಮನೆಯಿಂದ ಯಜಮಾನಮ್ಮನವರು ಬಂದು ಉಗ್ರಾಣಕ್ಕೆ ಬೀಗ ಹಾಕಿದ್ದಾರೆ."

ಧರ್ಮದಾಸ ಮತ್ತು ಗೋವಿಂದ ಇಬ್ಬರೂ ಬೆಚ್ಚಿದರು. "ಯಾರು ಹಿರಿಮನೆ ಯಜಮಾನಿ?"

ರಮೇಶನು ಅಚ್ಚರಿಯಿಂದ ಕೇಳಿದನು. "ದೊಡ್ಡಮ್ಮ ಬಂದಿದ್ದಾರೆಯೆ?"

"ಸ್ವಾಮಿ, ಹೌದು, ಅವರು ಬಂದದ್ದೇ ಚಿಕ್ಕ ದೊಡ್ಡ ಎರಡು ಉಗ್ರಾಣಗಳಿಗೂ ಬೀಗ ಹಾಕಿಬಿಟ್ಟಿದ್ದಾರೆ."

ವಿಸ್ಮಯಾನಂದಗಳಿಂದ ರಮೇಶನು ಮರುಮಾತಿಲ್ಲದೆ ಬಿರಬಿರನೆ ಒಳಕ್ಕೆ ಹೊರಟು ಹೋದನು.

೩

"ದೊಡ್ಡಮ್ಮಾ?" ಎಂಬ ಕೂಗು ಕೇಳಿ ವಿಶ್ವೇಶ್ವರಿಯು ಉಗ್ರಾಣದಿಂದ ಹೊರಕ್ಕೆ ಬಂದಳು. ವೇಣಿಯ ವಯಸ್ಸಿನೊಡನೆ ಹೋಲಿಸದೆ ಹೋದರೆ ಅವನ ತಾಯಿಯ ವಯಸ್ಸು ಐವತ್ತಕ್ಕೆ ಕಮ್ಮಿಯಾಗುವುದುಚಿತವಲ್ಲ. ನೋಡಿದರೆ ನಲವತ್ತಕ್ಕಿಂತ ಹೆಚ್ಚೆಂದು ಯಾವ ಬಗೆಯಿಂದಲೂ ಮನಸ್ಸಿಗೆ ತೋಚದು. ರಮೇಶನು ಎವೆಯಿಕ್ಕದೆ ನೋಡುತ್ತಿದ್ದನು; ಈಗಲೂ ಅದೆ ಹೊಂಬಣ್ಣದ ಮೈಬಣ್ಣ. ಇತ್ತಲ ನಾಡಿನಲ್ಲೆಲ್ಲಾ ಹಿಂದೆ ಹೆಸರುವಾಸಿಯಾಗಿದ್ದ ಅವಳ ಅಸಿಂದ್ಯ ಸುಂದರ ರೂಪದ ಖ್ಯಾತಿಯು ಅವಳ ದುಂಡು ತುಂಬುಮೈಯನ್ನು ಬಿಟ್ಟು ಇಂದೂ ದೂರ ಸಾಗಿಲ್ಲ. ತಲೆಗೂದಲು ಚಿಕ್ಕದಾಗಿ ಕತ್ತರಿಸಿದೆ, ಎದುರುಗಡೆ ಒಂದೆರಡು ದಂಡೆಗಳು ಕುಂಚಿತವಾಗಿ ಕೆನ್ನೆಗಳ ಮೇಲೆ ಹೊರಳಿವೆ. ಗಲ್ಲ, ಕೆನ್ನೆ, ತುಟಿಗಳು, ಹಣೆ ಎಲ್ಲವೂ ಯಾವನೋ ಮಹಾಶಿಲ್ಪಿಯ ಬಹು ಸಾಧನೆಯ ಫಲವೊ ಎಂಬಂತಿವೆ ಎಲ್ಲಿಕ್ಕಿಂತಲೂ ಆಚ್ಚರಿಯೆಂದರೆ ಅವಳ ಕಂಗಳೆರಡರ ನೋಟ. ಅತ್ತಕಡೆ ಕ್ಷಣಹೊತ್ತು ಸಿಟ್ಟಿಸಿ ನೋಡುತ್ತಿದ್ದರೆ ಅಂತಃಕರಣವೆಲ್ಲಾ ಮೋಹದಿಂದ ಮುದ್ದುಗರೆಯುತ್ತ ಬರುವುದು.

ಇದೆ ದೊಡ್ಡಮ್ಮ ರಮೇಶನನ್ನೂ, ಇನ್ನೂ ಅತಿಶಯವಾಗಿ ಅವನ ಪರಲೋಕಕ್ಕೆ ತೆರಳಿದ ತಾಯಿಯನ್ನೂ ಒಂದು ಕಾಲದಲ್ಲಿ ಬಲುವಾಗಿ ಪ್ರೀತಿಸುತ್ತಿದ್ದಳು. ವಧುವಯಸ್ಸಿನಲ್ಲೆ ಮಕ್ಕಳಾಗದಿರಲು, ಅತ್ತೆ ನಾದನಿಯರ ಹಿಂಸೆಗಳಿಂದ ಮರೆಯಲ್ಲಿ ಈ ಇಬ್ಬರು ಓರಗಿಯವರು ಜೊತೆಯಲ್ಲಿ ಕೂತು ಕಣ್ಣೀರಿಡುತ್ತಿದ್ದಾಗ ಈ ಸ್ನೇಹದ ಮೊದಲನೆ ಗಂಟು ಬಿದ್ದಿತು. ಆ ಮೇಲೆ ಮನೆಯೊಡೆದು, ಕೋರ್ಟು, ಕಚೇರಿ, ಪಾರೀಕತ್ತು ಮೊದಲಾದ ಬಗೆ ಬಗೆಯ ಬಿರುಗಾಳಿ–ಮಳೆಗಳು ಈ

ಸಂಸಾರಗಳ ಮೇಲೆ ತೀವ್ರವಾಗಿ ಹಾದು ಹೋದವು; ವಿವಾದದ ಬೇಗೆಯಿಂದ ಸಂಬಂಧವು ಸಡಿಲವಾಗಿದೆ; ಆದರೂ ಸುತರಾಂ ಕತ್ತರಿಸಿ ಹೋಗದೆ ಇದೆ. ಬಹುವರುಷಗಳ ನಂತರ ಅದೆ ಚಿಕ್ಕಸೊಸೆಯ ಉಗ್ರಾಣವನ್ನು ಹೊಕ್ಕು ಅವಳ ಕೈಯಿಂದ ನೇರ ಮಾಡಟ್ಟ ಆ ಎಲ್ಲ ಬಹು ಹಳೆ ಗುಡಾಣ, ಪಾತ್ರೆಗಳನ್ನು ನಿಟ್ಟಿಸಿ ದೊಡ್ಡಮ್ಮನ ಕಣ್ಣುಗಳಿಂದ ನೀರು ಸುರಿಯುತ್ತಿತ್ತು. ರಮೇಶನ ದನಿಯನ್ನು ಕೇಳಿ ಕಣ್ಣೊರಸಿಕೊಂಡು ಹೊರಕ್ಕೆ ಬರುತ್ತಲೆ ಅವಳ ಕೆಂಚಗಾದ ತೊಯಿದ ರೆಪ್ಪೆಗಳನ್ನು ನೋಡಿ ರಮೇಶನು ಒಂದು ಕ್ಷಣ ವಿಸ್ಮಯದಲ್ಲಿ ಮುಳುಗಿದನು. ದೊಡ್ಡಮ್ಮನು ಇದನ್ನರಿತು ಇದೇ ತಾನೆ ತಂದೆಯನ್ನು ಕಳೆದುಕೊಂಡಿದ್ದ ರಮೇಶನನ್ನು ನೋಡಿ ತನ್ನ ಹೊಟ್ಟೆಯೊಳಗೆ ಹಾಹಾಕಾರದಿಂದೆದ್ದ ಭಾವಾವೇಗವನ್ನು ಲೇಶಮಾತ್ರವೂ ಹೊರಗೆಡವದೆ ತಡೆದಳು. ಅದಕ್ಕೆ ಬದಲು ತುಸು ನಕ್ಕು ಕೇಳಿದಳು. "ಗುರತು ಸಿಕ್ಕಿತೆಪ್ಪಾ ರಮೇಶು?"

ಉತ್ತರವೀಯ ಹೋಗಿ ರಮೇಶನ ತುಟಿಗಳು ಅದುರಿದವು. ತಾಯಿ ಸತ್ತ ಮೇಲೆ ಸೋದರಮಾವನ ಮನೆಗೆ ಹೋಗುವ ತನಕ ಇದೆ ದೊಡ್ಡಮ್ಮನು ಅವನನ್ನು ಎದೆಯಲ್ಲಿಟ್ಟು ಸಾಕಿದಳು, ಮತ್ತು ಏನು ಮಾಡಿದರೂ ಬಿಡದೆ ಇದ್ದಳು. ಅದೂ ನೆನಪಿಗೆ ಬಂತು: ಮತ್ತು ಇದೂ ಮನಸ್ಸಿಗೆ ಬಂತು, ಆ ದಿನ ಆ ಮನೆಗೆ ಹೋಗಲು ದೊಡ್ಡಮ್ಮ ಮನೆಯಲ್ಲಿ ಇಲ್ಲದೆ ಹೋದುದರಿಂದ ನೋಡಲಿಕ್ಕೆ ಕೂಡ ಸಿಗಲಿಲ್ಲ. ಅದಾದ ಮೇಲೆ ರಮೆಯವರ ಮನೆಯಲ್ಲಿ ವೇಣಿಯನ್ನು ಕಂಡದ್ದು ಮತ್ತು ಅವನ ಕಣ್ಮರೆಯಲ್ಲಿ ಅವಳ ಚಿಕ್ಕಿಯ ಇರಿತದ ತಿರಸ್ಕಾರದ ಮಾತುಗಳನ್ನು ಕೇಳಿ ಈ ಹಳ್ಳಿಯಲ್ಲಿ ನಮ್ಮ ತಮ್ಮವರೆಂಬುವರು ತನ್ನ ಪಕ್ಷಕ್ಕೆ ಇನ್ನಾರೂ ಇಲ್ಲವೆಂದು ಅವನು ಖಂಡಿತ ಮಾಡಿಕೊಂಡು ಬಂದಿದ್ದನು.

ವಿಶ್ವೇಶ್ವರಿ ರಮೇಶನ ಮುಖವನ್ನು ಕ್ಷಣಹೊತ್ತು ನೋಡುತ್ತಿದ್ದು ಎಂದಳು. "ಛೆ, ಮಗು, ಈ ಸಮಯದಲ್ಲಿ ಕಠಿನನಾಗಬೇಕು." ಅವಳ ದನಿಯಲ್ಲಿ ಕೋಮಲತೆಯ ಛಾಯೆ ಸಹಿತ ಇಲ್ಲದಂತೆ ಇತ್ತು. ರಮೇಶನು ತನ್ನನ್ನು ತಾನೇ ತಡೆದುಕೊಂಡನು. ಸಿಟ್ಟಿಗೆ ಮರ್ಯಾದೆ ದೊರೆಯದ ಕಡೆ ಸಿಟ್ಟನ್ನು ಬಿಚ್ಚಿಬಿಡುವುದಕಿಂತ ಮುಚ್ಚಿ ಇಡುವುದೇ

ಹೆಚ್ಚಿನ ಬೆಡಗು ಈ ಸಂಸಾರದಲ್ಲಿ, ಎಂದು ಅವನು ಅರಿತುಕೊಂಡನು.

"ನಾನು ಕಠಿಣನಾಗಿದ್ದೇನೆ, ದೊಡ್ಡಮ್ಮ! ಆದುದರಿಂದಲೆ ನನ್ನ ಕೈಲಾದ ಮಟ್ಟಿಗೆ ನಾನೆ ಮಾಡಿಕೊಳ್ಳುತ್ತಿದ್ದೇನೆ. ನೀನೇತಕ್ಕೆ ಇಷ್ಟರ ಮೇಲೆ ಬರಬೇಕು?" ಎಂದು ಕೇಳಿದನು.

ದೊಡ್ಡಮ್ಮ ನಕ್ಕು, ಉತ್ತರಕೊಟ್ಟಳು. "ನೀನು ನನ್ನನ್ನು ಕರೆದುಕೊಂಡು ಬರಲಿಲ್ಲ, ರಮೇಶ, ಆದುದರಿಂದಲೆ ನಿನಗೆ ನಾನು ಅದಕ್ಕಾಗಿ ಕೈಫಿಯತ್ತು ಕೊಡಬೇಕಾಗಿಲ್ಲ. ಕೇಳು ಹಾಗಾದರೆ ಹೇಳುತ್ತೇನೆ. ಕೆಲಸಕಾರ್ಯಗಳು ಆಗುವುದಕ್ಕೆ ಮುಂಚಿತವಾಗಿ ತಿಂಡಿ ತೀರ್ಥದ ಸಾಮಾನು ಮುಂತಾದ ಯಾವ ಜಿನಸುಗಳನ್ನೂ ಹೊರಕ್ಕೆ ತೆಗೆಯಗೊಡೆ. ಹೋಗುವಾಗ ಬೀಗದ ಕೈಯನ್ನು ನಿನ್ನ ಕೈಲಿ ಕೊಟ್ಟು ಹೋಗುತ್ತೇನೆ. ಆ ಮೇಲೆ ನಾಳೆ ಬಂದು ನಿನ್ನ ಕೈಯಿಂದಲೆ ಇಸಿದುಕೊಳ್ಳುತ್ತೇನೆ. ಇನ್ನಾರ ಕೈಗಾದರೂ ಕೊಟ್ಟುಬಿಟ್ಟೀಯೆ! ಹೌದಪ್ಪ, ಅಂದು ನಿಮ್ಮ ದೊಡ್ಡಣ್ಣನನ್ನು ನೋಡಿದ್ದೆಯಾ?"

ಈ ಪ್ರಶ್ನೆಯನ್ನು ಕೇಳಿ ರಮೇಶನು ಸಂಶಯಗೊಂಡನು. ಅವಳ ಮುಗನ ನಡತೆ ಅವಳಿಗೆ ತಿಳಿದಿಟ್ಟಿತೊ ಇಲ್ಲವೊ ಅವನಿಗೆ ಸರಿಯಾಗಿ ತಿಳಿಯಲಿಲ್ಲ.

"ದೊಡ್ಡಣ್ಣ ಆಗ ಮನೆಯಲ್ಲಿರಲಿಲ್ಲ."

ಪ್ರಶ್ನೆ ಕೇಳಿದೊಡನೆಯೆ ದೊಡ್ಡಮ್ಮನ ಮುಖದ ಮೇಲೆ ನೋವಿನ ನೆಳಲೊಂದು ಮೂಡಿದ್ದು ರಮೇಶನಿಗೆ ಚೆನ್ನಾಗಿ ತಿಳಿಯಿತು; ಅವನ ಮಾತಿನಿಂದ ಆ ಭಾವನೆ ಕತ್ತರಿಸಿರಬೇಕು. ಮುಖವು ಚೊಕ್ಕವಾಯಿತು. ನಗೆಮೊಗದಿಂದ ಸ್ನೇಹ ಮತ್ತು ಅನುನಯದ ದನಿಯಲ್ಲಿ ಎಂದಳು.

"ಆಹಾ, ನನ್ನ ಹಣೆಯ ಬರಹ! ಇದೇನೊ? ಸರಿಯೆ, ಸಿಗಲಿಲ್ಲ ಅಂತ ಇನ್ನೊಂದು ಸಲ ಹೋಗಿ ನೋಡಲೂ ಬೇಡವೆ? ನಾನು ಬಲ್ಲೆನಪ್ಪ, ಅವನು ನಿಮ್ಮಗಳ ಮೇಲೆ ಸಂತುಷ್ಟನಲ್ಲವಂತ; ಆದರೂ ನಿನ್ನ ಕೆಲಸ ನೀ ಮಾಡಲೇಬೇಕು! ಹಾಗಲ್ಲ, ಚೆನ್ನಾಗಿ ಒಂದು ಸಲ ಹೇಳಿ ಬಾ, ಹೋಗು ರಮೇಶ! ಅವನು ದೊಡ್ಡಣ್ಣ, ಅವನೆದುರಿಗೆ ನೀನು ತಲೆ ಬಗ್ಗಿಸುವುದರಿಂದ ನಿನ್ನ ಮಾನನೇನೂ ಮುಕ್ಕಾಗದು. ಅದಲ್ಲದೆ,

ಇದು ಮನುಷ್ಯರಲ್ಲಿಯೆ ಕೆಟ್ಟ ಸಮಯ, ಮಗು; ಯಾರನ್ನಾದರೂ ಕೈಕಾಲು ಹಿಡಿದು ಪೂರ್ತಿಗಾಣಿಸುವುದಕ್ಕೆ ನಾಚಬಾರದು. ನನ್ನ ಕಂದ, ಒಂದು ಸಲ ನಡೆ, ಈಗ ಅವನು ಮನೆಯಲ್ಲೆ ಇರಬೇಕು."

ರಮೇಶ ಸುಮ್ಮನಿದ್ದನು. ಹೀಗೆ ಮುಂದೆ ಬಿದ್ದು ಹೋಗುವುದರ ಕಾರಣವು ಅವನಿಗೆ ಚೆನ್ನಾಗಿ ತಿಳಿಯಲಿಲ್ಲ. ಅಲ್ಲದೆ ಮನಸ್ಸಿನ ಸಂಶಯವೂ ತೊಡೆದು ಹೋಗಲಿಲ್ಲ. ವಿಶ್ವೇಶ್ವರಿ ಇನ್ನೂ ಹತ್ತಿರ ಬಂದು ಸಣ್ಣ ದನಿಯಲ್ಲೆಂದಳು. "ಹೊರಗೆ ಕೂತಿದ್ದಾರಲ್ಲಾ, ಅವರನ್ನೆಲ್ಲಾ ನಿನಗಿಂತ ನಾನು ಚೆನ್ನಾಗಿ ಬಲ್ಲೆ. ಅವರ ಮಾತುಗಳನ್ನು ಕೇಳಬೇಡ! ಮತ್ತು ನನ್ನ ಜೊತೆಯಲ್ಲಿ ನಿಮ್ಮ ದೊಡ್ಡಣ್ಣನ ಹತ್ತಿರ ಒಂದು ಸಲ ಹೋಗೋಣ ಬಾ, ನಡೆ."

ರಮೇಶನು ಗೋಣು ಅಲ್ಲಾಡಿಸಿ ಹೇಳಿದನು. "ಇಲ್ಲ ದೊಡ್ಡಮ್ಮ, ಅದು ಆಗುವದಲ್ಲ. ಮತ್ತು ಹೊರಗೆ ಕೂತಿರುವವರು ಏನೇ ಆಗಲಿ, ಅವರೇನೇ ನನ್ನ ಪಕ್ಷಕ್ಕೆ ಎಲ್ಲರಿಗಿಂತ ನಮ್ಮವರು....."

ಅವನು ಇನ್ನೂ ಏನನ್ನೊ ಹೇಳಬೇಕೆಂದಿದ್ದನು, ಅಷ್ಟರಲ್ಲಿ ದೊಡ್ಡಮ್ಮನ ಮುಖದ ಕಡೆಗೆ ಕಣ್ಣು ಬಿದ್ದು ಅವನು ಮಹಾವಿಸ್ಮಯದಿಂದ ಸುಮ್ಮನಾದನು. ಅವನ ಮನಸ್ಸಿಗೆ ತಟ್ಟಿತು, ದೊಡ್ಡಮ್ಮನ ಮುಖ ನಾಲ್ಕೂ ದಿಕ್ಕುಗಳಿಂದಲೂ ಮುಸುಕುತ್ತಿರುವ ಕತ್ತಲಿಗಿಂತ ಮಲಿನವಾಗಿದೆ ಎಂದು. ಕೊಂಚ ಹೊತ್ತಾದ ಮೇಲೆಯೆ ಅವಳು ನಿಟ್ಟುಸಿರೊಂದನ್ನು ಬಿಟ್ಟು ಎಂದಳು.

"ಒಳ್ಳೇದು, ಹಾಗಾದರೆ ಅದೇ. ಅವನ ಹತ್ತಿರಕ್ಕೆ ಹೋಗುವುದೆ ಆಗದಿರುವಾಗ ಆ ವಿಷಯವನ್ನೆತ್ತಿ ಮಾತಾಡುವುದರಿಂದೇನು? ಆದುದಾಗಲಿ, ನೀನೊಂದನ್ನೂ ಯೋಚಿಸಬೇಡ, ಮಗು, ತೊಂದರೆಯೇನೂ ಇಲ್ಲ. ನಾನು ತಿರುಗೂ ಬೆಳಗಿನ ಅಷ್ಟುಹೊತ್ತಿಗೆ ಬರುತ್ತೇನೆ" ಎಂದು ವಿಶ್ವೇಶ್ವರಿಯು ತನ್ನ ದಾಸಿಯನ್ನು ಕರೆದುಕೊಂಡು ಕಿರುಬಾಗಿಲಿಂದ ಮೆಲ್ಲ ಮೆಲ್ಲನೆ ಹೊರಗೆ ಹೋದಳು. ವೇಣಿಯೊಡನೆ ಈ ನಡುವೆ ನೋಡಿ ಏನೊಂದೋ ನಡೆದು ಹೋಗಿದೆ ಎಂದು ಅವಳು ತಿಳಿದಳು.

ಅವಳು ಹೋದ ದಾರಿಯನ್ನು ನೋಡುತ್ತಾ ಕೆಲವು ಕ್ಷಣಗಳು

ಸದ್ದಿಲ್ಲದೆ ನಿಂತಿದ್ದು ರಮೇಶ ಬಾಡಿದ ಮೊಗದಿಂದ ಹೊರಗಡೆಗೆ ಬರಲು ಅಲ್ಲಿ ಗೋವಿಂದನು ಸಡಗರದಿಂದ ವಿಚಾರಿಸಿದನು. "ರಾಯು, ದೊಡ್ಡ ಯಜಮಾನರೆ ಬಂದಿರಲಿಲ್ಲವೆ?"

ರಮೇಶನು ಕೊರಳು ಕುಲುಕಿಸಿ ಎಂದನು. "ಹೌದು."

"ಕೇಳಿದೆ, ಉಗ್ರಾಣವನ್ನು ಮುಚ್ಚಿ ಬೀಗ ಬಗಿದು ಬೀಗದ ಕೈ ತೆಗೆದುಕೊಂಡು ಹೋದರಂತೆ, ಅಲ್ಲವೆ?"

ರಮೇಶನು ಹಾಗೆಯೇ ತಲೆಯಲ್ಲಾಡಿಸಿ ಉತ್ತರವಿತ್ತನು. ಕಾರಣ ವೇನೆಂದರೆ ಕೊನೆಗೆ ಏನನ್ನೋ ಮನಸ್ಸಿನಲ್ಲಿ ಮಾಡಿಕೊಂಡು ಆಕೆ ಹೋಗುವಾಗ ಉಗ್ರಾಣದ ಬೀಗದ ಕೈಗಳನ್ನು ತಾನೇ ತೆಗೆದುಕೊಂಡು ಹೋದಳು.

"ನೋಡಿದೆಯೊ, ಧರ್ಮದಾಸಣ್ಣ, ನಾನಂದದ್ದೆ. ಅಂತೇನಿ ಉಪಾಯ ತಿಳಿಯಿತೊ, ರಾಯು?"

ರಮೇಶ ಮನಸ್ಸಿನಲ್ಲಿ ಅತ್ಯಂತ ಕೋಪಗೊಂಡನು. ಆದರೆ ತನ್ನ ನಿರುಪಾಯಾವಸ್ಥೆಯನ್ನು ಅರಿತು ಸುಮ್ಮನಿದ್ದನು. ದರಿದ್ರ ದೀನಭಟ್ಟನು ಇನ್ನೂ ಹೋಗಿರಲಿಲ್ಲ. ಏಕೆಂದರೆ ಅವನಿಗೆ ಬುದ್ಧಿ ಗಿದ್ದಿ ಇರಲಿಲ್ಲ. ಅವನು ಮಕ್ಕಳುಮರಿ ಸಹಿತ ಹೊಟ್ಟೆತುಂಬ ತಿಂಡಿ ತಿಂದದ್ದು ಯಾರ ದಯೆ ಯಿಂದಲೊ ಅವನಿಗೆ ಮನಃಪೂರ್ತಿಯಾಗಿ ಆಶೀರ್ವಚನಗಳನ್ನು ಒಂದೆ ರಡು ಕೇಳಿಸದೆ, ಎಲ್ಲರ ಎದುರಲ್ಲಿ ಅವನ ಏಳು ತಲೆಯತನಕ ಹಿರಿಯ ರನ್ನು ಸ್ತವಸ್ತುತಿಗಳಿಂದ ಹೊಗಳದೆ ಮನೆಗೆ ಹಿಂದಿರುಗಲಾರದೆ ಹೋದನು. ಆ ಬ್ರಾಹ್ಮಣ ಅರಿಯದವನಂತೆ ಅಂದು ಬಿಟ್ಟನು.

"ಈ ಉಪಾಯ ತಿಳಿಯುವುದು ಕಷ್ಟವೇನಿದೆ ಅಣ್ಣ? ಬೀಗ ಹಾಕಿ ಬೀಗದ ಕೈ ತೆಗೆದುಕೊಂಡು ಹೋಗಿದ್ದಾಳೆ, ಅಂದರೆ ಉಗ್ರಾಣ ಇನ್ನಾರ ಕೈಗೂ ಸಿಗಕೂಡದೆಂತ. ಆಕೆಗಂತೂ ಎಲ್ಲಾ ತಿಳಿದಿದೆ."

ಗೋವಿಂದನಿಗೆ ಬೇಸರವಾಗಿತ್ತು. ಅರಿಯದವನ ಮಾತಿನಿಂದ ಬೆಂಕಿಯಾಗಿ ಅವನನ್ನು ಗದ್ದರಿಸಿದನು. "ತಿಳಿಯೋದಿಲ್ಲ ಮಾಡೋದಿಲ್ಲ, ನಿನಗೇಕೊ ತಲೆಯಲ್ಲಾ ಹರಟೆ, ಮುಚ್ಚು ಬಾಯಿ. ಇದೆಲ್ಲಾ ನಿನಗೇನು ತಿಳಿದೀತು! 'ಅಂದರೆ' ಅಂತ ಹೇಳೋಕ್ಕೆ ಬಂದೆಯೊ?"

ಗದರುಂಡು ದೀನನ ಹೆಡ್ಡತನ ಹೆಚ್ಚಿತು. ಅವನು ಬಿಸಿಯಾಗಿ ಉತ್ತರವಿತ್ತನು. "ಎಲೊ ಇದರಲ್ಲಿ ತಿಳಿಯೋದು ಗಿಳಿಯೋದು ಏನಂಥಾದ್ದು ಇರೋದು? ಕೇಳಿಸಲಿಲ್ಲವೆ ಯಜಮಾನಮ್ಮ ತಾನೇ ಬಂದು ಬಾಗಿಲ ಹಾಕಿ ಬೀಗದ ಕೈ ತಕ್ಕೊಂಡು ಹೋಗಿದ್ದಾಳೆ? ಇದರ ಮೇಲೆ ಯಾರೋ ಮಾತಾಡೋರು?"

ಗೋವಿಂದ ಕೆಂಡವಾಗಿ ಎಂದ. "ಮನೆಗೆ ಹೋಗೋದಿಲ್ಲವೇನೊ ಭಟ್ಟಯ್ಯ. ನೀನು ಓಡಿಬಂದೆ–ಮನೆಮಂದಿ ಮಕ್ಕಳ ಸಹಿತ ತಿನ್ನೋದಕ್ಕೆ, ತಿಂದಿರಿ, ಕಟ್ಟಿಕೊಂಡಿರಿ, ಇನ್ನೇನು, ಬರ್ಫಿ ನಾಡಿದ್ದು ತಿನ್ನುವಿಯಂತೆ, ಇವತ್ತು ಇನ್ನು ಆಗುವುದಿಲ್ಲ. ಈಗ ಹೊರಡು, ನಮಗೆ ಬೇಕಾದಷ್ಟು ಕೆಲಸ ಬಿದ್ದಿದೆ."

ದೀನ ನಾಚಿಕೆಯಿಂದ ಕುಗ್ಗಿಹೋದನು.

ರಮೇಶ ಅದಕ್ಕಿಂತ ಹೆಚ್ಚಿಗೆ ಕುಂಠಿತನಾಗಿ ಕೋಪಗೊಂಡನು. ಗೋವಿಂದನು ಇನ್ನೂ ಏನನ್ನೊ ಹೇಳಹೋಗುತ್ತಲಿದ್ದನು. ಆದರೆ ಥಟ್ಟನೆ ರಮೇಶನು ಶಾಂತವಾದರೂ ಕಠಿಣದನಿಯಿಂದ ನಿಂತು ಹೇಳಿದನು. "ತಮಗೇನಾಯಿತು ಗಂಗಾಳಿಯವರೆ? ಯಾರಂದರೆ ಅವರನ್ನ ಹೀಗೆ ಬೆದರಿಸಿ ಅಪಮಾನಿಸುತ್ತೀರಲ್ಲಾ, ಇದೇಕೆ?"

ಗೋವಿಂದನು ಮೊದಲು ಬೆಚ್ಚಿ ಬೆದರಿಬಿದ್ದನು. ಆದರೆ ಮುಂದಿನ ಕ್ಷಣದಲ್ಲಿಯೆ ಒಣನಗೆಯೊಂದನ್ನು ನಕ್ಕು ಎಂದನು. "ಅಪಮಾನ ಯಾರಿಗೆ ಮಾಡಿದೆ ರಾಯ? ಒಳ್ಳೇದು ಅವನನ್ನೆ ವಿಚಾರಿಸಿ ನೋಡು, ನಿಚ್ಚಳವಾದ ಸತ್ಯವನ್ನ ಹೇಳಿದೆನೆ ಇಲ್ಲವೇ ಎಂತ. ಅವನು ರೆಂಬೆ ರೆಂಬೆಗಳಲ್ಲಿ ಅಲೆದರೆ ನಾನು ಎಲೆ ಎಲೆಗಳಲ್ಲಿ ಓಡಿಯಾಡುತ್ತೇನೆ. ಅವನು ಚಾಪೆ ಕೆಳಗೆ ನುಸಿದರೆ ನಾನು ರಂಗೋಲಿ ಕೆಳಗೆ ನುಸಿಯುತ್ತೇನೆ! ನೋಡಿದೆಯೊ ಧರ್ಮದಾಸಣ್ಣ ದೀನಬ್ರಾಹ್ಮಣನ ಠೇಂಕಾರಾನ? ಒಳ್ಳೇದು. . . . ."

ಧರ್ಮದಾಸಣ್ಣ ನುಡಿದನೇನೊ ಅದನ್ನು ಅವನೇ ಬಲ್ಲ.

ಆದರೆ ಈ ಮನುಷ್ಯನಿಗೆ ನಾಚಿಕೆಯಿಲ್ಲದಿರುವುದನ್ನೂ ಇವನ

ಹೆಮ್ಮೆಯನ್ನೂ ನೋಡಿ ರಮೇಶ ಬಾಯಿಮುಚ್ಚಿ ಬೆರಗಾದನು. ಆಗ ದೀನ ರಮೇಶನನ್ನು ನೋಡಿ ತಾನಾಗಿಯೇ ಎಂದನು.

"ಇಲ್ಲಣ್ಣ, ಗೋವಿಂದ ಸತ್ಯವಾದ ಮಾತನ್ನೆ ನುಡಿದ. ನಾನು ಬಡವ, ಆ ಮಾತನ್ನ ಎಲ್ಲರು ಬಲ್ಲರು. ಅವರುಗಳಂತೆ ನನಗೆ ಭೂಮಿಕಾಣಿ ದನಕರ ಏನೂ ಇಲ್ಲ. ಒಂದು ಜಗೆಯಲ್ಲಿ ಬೇಡಿ ತಿರಿದೇ ನಮ್ಮ ಕಾಲ ಕಳೀತಾ ಇದೆ. ಒಳ್ಳೆ ಪದಾರ್ಥಗಳನ್ನು ಕೊಂಡು ತಂದು ಮಕ್ಕಳಿಗೆ ಉಣ ಲಿಡಲು ದೇವರು ತ್ರಾಣಕೊಡಲಿಲ್ಲ. ಆದ್ದರಿಂದಲೆ ದೊಡ್ಡವರ ಮನೆಗಳಲ್ಲಿ ಹಬ್ಬಹುಣ್ಣಿವೆ ಕಾರ್ಯಕಲಾಪಗಳಾದರೆ ಅವರುಂಡು ಬರುತ್ತಾರೆ. ಏನೂ ಮನಸ್ಸಿಗೆ ತಿಳುಕೋಬೇಡಪ್ಪ; ತಿಮ್ಮಣ್ಣ ಬದುಕಿದ್ದರೆ ಅವನು ನಮ್ಮಗಳಿಗೆಲ್ಲಾ ಭೋಜನ ಮಾಡಿಸಲು ಬಲು ಸಂತೋಷಪಡುತ್ತಿದ್ದ. ಆದ್ದರಿಂದಲೆ ನಿನಗೆ ನಿಜವಾಗಿ ಹೇಳುತ್ತೇನೆ, ರಾಯ, ನಾವುಗಳು ಹೊಟ್ಟೆ ತುಂಬ ಉಂಡರೆ ಅವನು ಮೇಲಿಂದ ನೋಡಿ ಸಂತೋಷಪಟ್ಟು ಕೊಳ್ಳುತ್ತಾನೆ."

ಫಟ್ಟನೆ ದೀನನ ಬಣ ಗುಳ್ಳಿಗಣ್ಣುಗಳೆರಡೂ ನೀರಿನಿಂದ ನೆನೆದು ಟಪ ಟಪನೆ ಎರಡು ತೊಟ್ಟುಗಳು ಎಲ್ಲರೆದುರಲ್ಲಿಯೆ ಉದುರಿ ಬಿದ್ದವು. ರಮೇಶ ಮೊಗವನ್ನು ತಿರುಗಿಸಿ ನಿಂತನು. ದೀನ ಮಾಸಿದ ಶತಛಿದ್ರವಾದ ಅಂಗ ವಸ್ತ್ರದ ಕೊನೆಯಿಂದ ಕಣ್ಣೀರನ್ನು ಒರಸಿಕೊಂಡು ಎಂದನು. "ಬರಿ ನಾನೆ ಅಲ್ಲ ರಾಯ! ಇತ್ತಲ ಕಡೆಯಲ್ಲಿ ನನ್ನ ಹಾಗೆ ದುಃಖಿಗಳು ಬಡವರು ಎಲ್ಲೆಲ್ಲಿಯವರೂ ತಿಮ್ಮಣ್ಣನ ಹತ್ತಿರ ಅಂಗೈ ಚಾಚಿ ಹಾಗೆಯೇ ಬರಿದಾಗಿ ಹಿಂತಿರುಗಿದವರಿಲ್ಲ. ಆ ಮಾತನ್ನು ನನಗಿಂತ ಹೆಚ್ಚಿಗೆ ಬಲ್ಲವರಾರು ಹೇಳು? ಅವನ ಬಲಗೈ ಕೊಟ್ಟದ್ದು ಎಡಗೈಯರಿಯದು. ಇನ್ನು ನಿಮ್ಮ ಮೈಯುರಿಸೆನು. ತಕ್ಕೊಕಮ್ಮಾ ಪುಟ್ಟಿ, ಏಳು ಭೀಮು, ಹನುಮಾ, ನಡೀರಪಾ, ಮನೆಗೆ ಹೋಗೋಣ, ತಿರುಗೂ ನಾಳೆ ಬೆಳಿಗ್ಗೆ ಬರುತ್ತೇವೆ! ಇನ್ನೇನು ಹೇಳಲಿ, ಅಪ್ಪಾ ರಮೇಶ, ತಂದೆಯಂತೆಯಾಗಪ್ಪ ಬಹುಕಾಲ ಬದುಕು!"

ರಮೇಶ ಅವನ ಜೊತೆಯಲ್ಲೆ ದಾರಿವರೆಗೆ ಬಂದು ಮೆತ್ತನ್ನ ದನಿಯಲ್ಲಿ ಎಂದನು. "ಭಟ್ಟರೆ, ಮಹಾಸ್ವಾಮಿ, ಈ ಎರಡು ಮೂರು

ದಿನಗಳು ನನ್ನ ಮೇಲೆ ದಯೆ ಮಾಡಬೇಕು. ಇನ್ನು ಹೇಳಲು ಸಂಕೋಚ ವಾಗುತ್ತೆ, ಆದರೆ ಈ ಮನೆಯೊಳಗೆ ಹನುಮನ ತಾಯಿಯ ಕಾಲಧೂಳಿ ಬಿದ್ದರೆ ಭಾಗ್ಯವೆಂದು ತಿಳಿಯುತ್ತೇನೆ."

ಭಟ್ಟರು ರಮೇಶನ ಕೈಗಳೆರಡನ್ನೂ ಬಿಗಿದು ಹಿಡಿದುಕೊಂಡು ಅಳುವಂತೆಯಾಗಿ ಎಂದರು. "ನಾನು ಬಹಳ ದುಃಖಿ, ಅಪ್ಪ ರಮೇಶ, ನನಗೆ ಈ ಬಗೆಯಲ್ಲಿ ಹೇಳಿದರೆ ನಾಚಿಕೆಯಿಂದ ಸತ್ತು ಹೋಗುತ್ತೇನೆ."

ಮಕ್ಕಳುಮರಿಗಳನ್ನು ಜೊತೆಯಲ್ಲಿ ಕರೆದುಕೊಂಡು, ಮುದು ಕನು ಮೆಲ್ಲ ಮೆಲ್ಲನೆ ಹೊರಟು ಹೋದನು. ರಮೇಶ ಹಿಂದಕ್ಕೆ ಬಂದು ತುಸು ಹೊತ್ತಿನ ಹಿಂದಿನ ತನ್ನ ಒರಟು ಮಾತನ್ನು ನೆನೆದು ಗಂಗಾಳೆ ಮಹಾಶಯನಿಗೆ ಏನಾದರೊಂದು ಸವಿಮಾತನ್ನು ಹೇಳಬೇಕೆಂದು ಯತ್ನ ಮಾಡಿದೊಡನೆಯೆ, ಅವನೆ ನಿಲ್ಲಿಸಿ ನೆವರಿ ಬಂದೆಂದನು. "ಅದೆಲ್ಲಾ ನನ್ನ ಸ್ವಂತ ಕೆಲಸ, ರಮೇಶ, ನೀನು ಕರೆಯದೆ ಹೋಗಿದ್ದರೂ ಬಂದು ಎಲ್ಲ ವನ್ನೂ ನಾನೇ ಮಾಡಬೇಕಾದದ್ದು. ಬಂದಿದ್ದೇನೆ ಅದಕ್ಕೇನೆ; ಧರ್ಮ-ದಾಸಣ್ಣ ಮತ್ತು ನಾನು ಅಣ್ಣತಮ್ಮಂದಿರಿಬ್ಬರು ನೀನು ಕರೆಯಬೇಕೆಂತ ಕಾಯಲಿಲ್ಲಪ್ಪ!"

ಧರ್ಮದಾಸ ಆಗ ತಾನೆ ನಶ್ಯವನ್ನು ಏರಿಸಿ ಕೆಮ್ಮುತ್ತಿದ್ದನು. ಕೋಲೂರಿ ಅದರ ಮೇಲೆ ಭಾರಹಾಕಿ ನಿಂತು ಕಣ್ಣು ಮೂಗು ಕೆಂಪೇರಿಸಿ ಕೊಂಡು ಕೈತಿರುಗಿಸಿ ಹೇಳಿದನು.

"ಕೇಳು ಹೇಳುತ್ತೇನೆ ರಮೇಶ, ನಾವು ವೇಣೀ ಘೋಷನಗೇರಿ ಅಲ್ಲ. ನಮ್ಮ ಹುಟ್ಟಾಣಿಕೆ ನೆಟ್ಟಗಿದೆ."

ಅವನ ಕುತ್ಸಿತವಾದ ಮಾತಿನಿಂದ ರಮೇಶನು ಬೆಚ್ಚಿಬಿದ್ದನು. ಆದರ ತಿರುಗೂ ಕೋಪಿಸಿಕೊಳ್ಳಲಿಲ್ಲ. ಈ ತುಸು ಹೊತ್ತಿನಲ್ಲೆ ಅವನು ಅರಿತುಕೊಂಡಿದ್ದನು, ಇವರು ಶಿಕ್ಷಣ ಮತ್ತು ಅಭ್ಯಾಸದ ದೋಷದಿಂದ ಅಸಂಕೋಚವಾಗಿ ಎಷ್ಟೆ ದೊಡ್ಡ ಹೇಯವಾದ ಮಾತನ್ನಾದರೂ ಅಂದು ಬಿಡುವರು, ಅದನ್ನು ತಿಳಿದುಕೊಳ್ಳುವುದು ಸಹ ಇಲ್ಲ, ಎಂದು.

ದೊಡ್ಡಮ್ಮನ ಸ್ನೇಹದ ಬಲದಿಂದ ಅವಳ ನೊಂದ ಮೊಗವನ್ನು ಮನ ದಲ್ಲಿ ನೆನೆನೆನೆದುಕೊಂಡು ಒಳಗೊಳಗೆ ರಮೇಶನು ಕೊರಗುತ್ತಿದ್ದನು.

ಎಲ್ಲರೂ ಹೋದಮೇಲೆ ದೊಡ್ಡಣ್ಣನಲ್ಲಿ ಅವನು ಹೋಗುವುದಕ್ಕೆ ಸಜ್ಜಾದನು. ಅವನು ವೇಣಿಯ ಒಳಂಗಳಕ್ಕೆ ಬರುವಾಗ್ಗೆ ರಾತ್ರಿ ಎಂಟು ಗಂಟೆ. ಒಳಗೇನೋ ಜಗಳವಾಡುತ್ತಿದ್ದಂತೆ ಕಾಣಿಸಿತು. ಗೋವಿಂದ ಗಂಗಾಳಿಯ ಕೂಗಾಟವೆ ಎಲ್ಲರಿಗಿಂತ ಹೆಚ್ಚು. ಹೊರಗಡೆಯೆ ಅವನ ಕಿವಿಗೆ ಬಿತ್ತು; ಗೋವಿಂದ ಆಣೆಯಿಟ್ಟು ಹೇಳುತ್ತಿದ್ದಾನೆ. 'ಇವನು ಎರಡು ದಿನಗಳಲ್ಲಿಯೆ ಹಾಳಾಗದೆ ಹೋದರೆ ನನ್ನ ಹೆಸರು ಗಂಗಾಳಿ ಗೋವಿಂದನೆಂಬುದನ್ನು ಒದಲಾಯಿಸಿಡು, ವೇಣೀರಾಯ! ನವಾಬಗಿರಿ ಕಾಂಡ ಕಾರಖಾನೆ ನೋಡಿದೆಯಷ್ಟೆ? ತಿಮ್ಮಣ್ಣ ಏನೂ ದುಡ್ಡು ಕಾಸು ಇಟ್ಟು ಸಾಯಲಿಲ್ಲ, ಅದನ್ನು ನಾ ಬಲ್ಲೆ; ಹಾಗಿರೋವಾಗ ಇಷ್ಟೆಲ್ಲಾ ಏಕೆ? ಕೈಲಿ ಕಾಸಿದ್ದರಂತೂ ಸರಿ, ಇಲ್ಲದೆ ಇದ್ದರೆ, ಆಸ್ತಿನ ಅಡವಿಟ್ಟು ಅಪ್ಪನ ಶ್ರಾದ್ಧ ಯಾರು ಯಾವಾಗ ಆಡಂಬರವಾಗಿ ಮಾಡಿದೋರು? ನಾ ಬೇರೆ ಕೇಳರಿಯೆ! ನಾನು ನಿಜವಾಗಿ ಹೇಳ್ತೀನೆ, ವೇಣೀಮಾಧವ ರಾಯ, ಈ ಹುಡುಗ ನಂದಿಮಲ್ ಸೆಟ್ಟರ ಗಾದಿಯಿಂದ ಒಳಗೇನೆ ಮೂರುಸಾವಿರ ರೂಪಾಯಿಗಳನ್ನು ಸಾಲ ತಂದಿದ್ದಾನೆ.''

ವೇಣಿ ಉಬ್ಬಿ ಎಂದನು. "ಹಾಗಿದ್ದರೆ ಆ ಮಾತನ್ನ ರಟ್ಟು ಮಾಡೋಕಾದೀತೆ ಗೋವಿಂದಚಿಕ್ಕಪ್ಪ?''

ಗೋವಿಂದ ದನಿಯನ್ನು ಕಳಗಿಳಿಸಿ ಎಂದನು. "ತಡೀಬಾರದೇ ನಪ್ಪಾ! ಚೆನ್ನಾಗಿಯೊಂದುಸಲ ಒಳಹೊಗಲಿಕ್ಕೆ ಬಡು– ಆಮೇಲೆ– ಹೊರಗೆ ಯಾರೂ ನಿಂತಿರೋರು? ಇದೇನು ರಮೇಶರಾಯ? ನಾವಿರೋ ವಾಗ ಇಷ್ಟು ಹೊತ್ತಿನ ರಾತ್ರಿಯಲ್ಲಿ ನೀನೇಕಯ್ಯಾ, ರಾಯ?''

ರಮೇಶ ಆ ಮಾತಿಗೆ ಉತ್ತರವೀಯದೆ ಮುಂದೆ ಸರಿದು ಒಂದು ಎಂದನು. "ದೊಡ್ಡಣ್ಣ, ನಿಮ್ಮಲ್ಲೆ ಬಂದೆ.''

ವೇಣಿ ಬೆಪ್ಪುಸೊಪ್ಪಾಗಿ ಉತ್ತರವೀಯಲಾರದೆ ಹೋದನು.

ಗೋವಿಂದನು ತಕ್ಷಣವೆ ಒದರಿದನು. "ಬರದೆಯುಂಟೆ ಅಪ್ಪಾ, ನೂರುಸಲ ಬಾರಪ್ಪಾ, ಇದೂ ನಿನ್ನದೇ ಮನೆ. ಇದರಮೇಲೆ ದೊಡ್ಡಣ್ಣ ತಂದೆಗೆ ಸಮಾನ, ಅದೇನೆ ನಾವೆಲ್ಲಾ ವೇಣೀರಾಯರಿಗೆ ಹೇಳೋಕೆ ಒಂದೆವು. ವೇಣೀರಾಯ, ತಿಮ್ಮಣ್ಣನ ಮೇಲಿನ ಮನಸ್ಸಿನ ಮುಸಿ

ಅವನ ಜೊತೆಯಲ್ಲೇ ಕಳೆದು ಹೋಗಲಿ – ಇನ್ನೇತಕ್ಕೆ? ಅಣ್ಣ-ತಮ್ಮಂದಿರು ನೀವಿಬ್ಬರೂ ಒಂದಾಗಿರಿ, ನಾವು ನೋಡಿ ಕಣ್ಣು ತಣ್ಣಗೆ ಮಾಡಿಕೊಳ್ಳು ತ್ತೇವೆ. ಏನ ಹೇಳೋ ಹಲಧರಮಾವಾ? ಅದೇನು, ನಿಂತೇ ಇದ್ದೀಯೆ, ಅಪ್ಪಾ, ಯಾರಿದ್ದೀರೊ, ಒಂದು ರತ್ನಗಂಬಳಿ ತಂದು ಹಾಸಬಾರದೆ? ಇಲ್ಲ, ವೇಣೀರಾಯ, ನೀನು ಹಿರಿಯ, ನೀನೇ ಎಲ್ಲಾ. ನೀನು ಹೊರಚ್ಚಾಗಿದ್ದರೆ ನಡೆಯದು. ಅದಲ್ಲದೆ ದೊಡ್ಡ ಯಜಮಾನಿಯವರು ತಾವಾಗಿಯೇ ಹೋಗಿ ನಿಂತಿರುವಾಗ, ಅಂಥ. . . .''

ವೇಣಿ ಚಮಕಿದನು. ''ಅಮ್ಮ ಹೋಗಿದ್ದಾಳೆಯೆ?''

ಈ ಬೆದರನ್ನು ನೋಡಿ ಗೋವಿಂದನು ಮನಸ್ಸಿನಲ್ಲಿಯೆ ಸಂತೋಷ ಗೊಂಡನು. ಹೊರಗಾದರೊ ಆ ಭಾವವನ್ನು ಮರೆಮಾಚಿ ಬಲು ಒಳ್ಳೆಯವನಂತೆ ನಡೆದುದನ್ನು ಮಸೆದು ತಿಕ್ಕಿ ಹೇಳಿದನು. ''ಬರಿ ಹೋದರೇನು, ಉಗ್ರಾಣ-ಗಿಗ್ರಾಣ ಕೆಲಸ-ಕಾರ್ಯ ಎಲ್ಲಾನೂ ಅವರೆ ಮಾಡುತ್ತಿದ್ದಾರೆ.''

ಎಲ್ಲರೂ ಸುಮ್ಮನಿದ್ದರು.

ಗೋವಿಂದ ಒಂದು ಸಲ ನಿಟ್ಟುಸಿರಿಟ್ಟು ಎಂದನು. ''ಇಲ್ಲಪ್ಪಾ ಗ್ರಾಮದಲ್ಲಿ ದೊಡ್ಡ ಯಜಮಾನತಿಯಂತಹ ಮನುಷ್ಯರು ಇನ್ನಾರಿ ರೋರು? ಇನ್ನಾರು ಆದಾರು? ಇಲ್ಲ, ವೇಣೀರಾಯ, ಎದುರಿಗೆ ಹೇಳಿ ದರೆ ಮುಖಸ್ತುತಿ ಮಾಡಿದಂತೆ ಆಗುತ್ತೆ. ಆದರೆ ಯಾರೇನು ಬೇಕಾ ದರೂ ಅನ್ನಲಿ ಊರಲ್ಲಿ ಲಕ್ಷ್ಮಿಯೆಂದರೆ ಆಕೆಯೆ ಇರೋಳು, ಆ ನಿಮ್ಮಮ್ಮ. ಇಂಥಪ ತಾಯಿ ಇನ್ನಾರಿಗುಂಟು?'' ಎಂದು ತಿರಗೂ ನಿಟ್ಟುಸಿರೊಂದನ್ನು ಬಿಟ್ಟು ಗಂಭೀರನಾಗಿ ಕೂತನು.

ವೇಣಿ ಬಲುಹೊತ್ತು ಸುಮ್ಮನೆ ಕೂತಿದ್ದು ಗೊಣಗಿದನು. ''ಒಳ್ಳೇದು.''

ಗೋವಿಂದ ಬಾಯಿ ಹಾಕಿ, ''ಬರಿ ಒಳ್ಳೇದು, ಅಲ್ಲ, ವೇಣೀರಾಯ! ಹೋಗಲೇಬೇಕು, ಮಾಡಲೇಬೇಕು, ಹೊರೆಯೆಲ್ಲಾ ನಿನ್ನಮೇಲೆಯೆ, ಒಳ್ಳೇಮಾತು, ಎಲ್ಲರೂ ನಿಮ್ಮವರು ಸೇರಿದೀರಿ, ಔತನವನ್ನು ಹೇಗೆ ಹೇಳಬೇಕು, ಒಂದು ಪಟ್ಟಿ ಹಾಕೋಣವಾಗಬಾರದೆ? ಏನಂತೀಯಯ್ಯಾ

ರಮೇಶರಾಯ? ಮಾತು ಸರಿತಾನೆ, ಹಲಧರ ಮಾವ! ಧರ್ಮದಾಸ ಸುಮ್ಮನೆ ಇದ್ದೀಯಲ್ಲಾ ಏಕೆ? ಯಾರಿಗೆ ಹೇಳಬೇಕು, ಯಾರನ್ನು ಬಿಡಬೇಕು, ಎಲ್ಲಾ ಬಲ್ಲೆಯಷ್ಟೆ?''

ರಮೇಶ ಎದ್ದು ನಿಂತು ಸಹಜವಾದ ವಿನೀತವಾದ ದನಿಯಲ್ಲಿ ಎಂದನು. ''ಕಾಲದೊಳಗೊಂದು ಸಲ ಕೊಡುವುದಾದರೆ.''

ವೇಣಿ ಗಂಭೀರನಾಗಿ ಹೇಳಿದನು. ''ಅಮ್ಮ ಹೋಗಿರುವಾಗ ನಾನು ಹೋಗುವುದೂ ಹೋಗದ್ದೂ—ಅಷ್ಟೇ—ಗೋವಿಂದ ಚಿಕ್ಕಪ್ಪ?''

ಗೋವಿಂದನು ಮಾತನಾಡುವುದಕ್ಕೆ ಮುಂಚೆಯೆ ರಮೇಶ ನೆಂದನು. ''ತಮ್ಮನ್ನು ಹಿಗ್ಗಾಮುಗ್ಗಾ ಬಲವಂತ ಮಾಡಲೊಲ್ಲೆ, ದೊಡ್ಡಣ್ಣ, ತೊಂದರೆ ಇಲ್ಲದೆ ಇದ್ದರೆ ಒಂದು ಸಲ ನೋಡಿ ವಿಚಾರಿಸಿ ಕೊಂಡು ಬರಬೇಕು.''

ವೇಣಿ ಸುಮ್ಮನಿದ್ದನು! ಗೋವಿಂದ ಏನನ್ನೊ ಹೇಳ ಹೋಗು ತ್ತಿರಲು ರಮೇಶನೆದ್ದು ಹೊರಟು ಹೋದನು. ಆಗ ಹೊರಗಡೆಗೆ ಕೊರಳನ್ನು ನೀಡಿ ನೋಡಿ ಪಿಸಪಿಸನೆಂತ ಹೇಳಿದನು, ''ನೋಡಿದೆಯೊ, ವೇಣೀರಾಯ, ಮಾತಿನ ಭಾವಾನ?''

ವೇಣಿ ಅನ್ಯಮನಸ್ಕನಾಗಿ ಏನನ್ನೊ ಯೋಚಿಸುತ್ತಿದ್ದನು, ಮಾತ ನಾಡಲಿಲ್ಲ.

ಹಾದಿಯಲ್ಲಿ ಹೋಗುತ್ತ ಗೋವಿಂದನ ಮಾತುಗಳು ಮನಸ್ಸಿಗೆ ಬಂದು ರಮೇಶನ ಮನವೆಲ್ಲಾ ತಿರಸ್ಕಾರದಿಂದ ತುಂಬಿಹೋಯಿತು. ಅವನು ಅರ್ಧದಾರಿಯಿಂದಲೆ ಹಿಂತಿರುಗಿ ಬಂದು ಆದೆ ರಾತ್ರಿ ತಿರುಗೂ ಘೋಷಗೇರಿಯ ಮನೆಯನ್ನು ಹೊಕ್ಕನು. ಕೈಸಾಲೆಯಲ್ಲಿ ಆಗ ತರ್ಕವೂ ಕೋಲಾಹಲವೂ ಬಲು ಮೇಲಕ್ಕೇರಿತ್ತು; ಅವನಿಗಾದರೆ ಅದನ್ನು ಕೇಳಲು ಸರಿಬೀಳಲಿಲ್ಲ. ನೆಟ್ಟಗೆ ಒಳಕ್ಕೆ ಹೋಗಿ ರಮೇಶನು ಕರೆದನು.

''ದೊಡ್ಡಮ್ಮಾ!''

ದೊಡ್ಡಮ್ಮನು ತನ್ನ ಕೋಣೆಯ ಎದುರು ಜಗುಲಿಯ ಮೇಲೆ

ಸುಮ್ಮನೆ ಕುಳಿತಿದ್ದಳು; ಇಷ್ಟು ರಾತ್ರಿಯಲ್ಲಿ ರಮೇಶನ ದನಿಯನ್ನು ಕೇಳಿ ಬೆರಗಾದಳು.

"ರಮೇಶೂ? ಏಕಪ್ಪಾ?"

ರಮೇಶ ಅಲ್ಲಿಗೆ ಬಂದನು. ದೊಡ್ಡಮ್ಮ ದಡಬಡನೆ ಎಂದಳು. "ಕೊಂಚ ತಡೆಯಪ್ಪ, ದೀಪಿಗೆ ತರಹೇಳುತ್ತೇನೆ."

"ದೀಪಿಗೆಯ ಕೆಲಸವಿಲ್ಲ ದೊಡ್ಡಮ್ಮ, ನೀನು ಏಳಬೇಡ," ಎಂದು ರಮೇಶ ಕತ್ತಲಲ್ಲಿಯೇ ಒಂದು ಪಕ್ಕಕ್ಕೆ ಕೂತನು. ಆಗ ದೊಡ್ಡಮ್ಮ ಕೇಳಿದಳು.

"ಇಷ್ಟುರಾತ್ರಿ ಯಾಯಿತಲ್ಲಾ?"

ರಮೇಶ ಮೆಲುದನಿಯಲ್ಲಿ ಎಂದನು. "ಇನ್ನೂ ಊಟಕ್ಕೆ ಹೇಳಿದ್ದಾಗಿಲ್ಲ, ದೊಡ್ಡಮ್ಮ, ಅದಕ್ಕಾಗಿ ನಿನ್ನನ್ನು ಕೇಳ ಬಂದೆ."

"ಹಾಗಿದ್ದರೆ ತೋಂದರೆಗೆ ತಂದೆಯಪ್ಪಾ! ಇವರೇನಂತಾರೆ' ಗೋವಿಂದ ಗಂಗಾಳಿ, ಧರ್ಮದಾಸ."

ರಮೇಶ ತಡೆಹಾಕಿ ಹೇಳಹತ್ತಿದನು—ದೊಡ್ಡಮ್ಮ, ಅವರೇನು ಹೇಳುತ್ತಾರೆನ್ನುವುದು ನನಗೆ ಬೇಕಿಲ್ಲ. ನೀನೇನು ಹೇಳುತ್ತೀಯೋ ಅದೇ ಆಗುತ್ತೆ."

ಅಕಸ್ಮಾತ್ ರಮೇಶನ ಮಾತಿನ ಬೇಗೆಯಿಂದ ವಿಶ್ವೇಶ್ವರಿ ಮನದಲ್ಲೆ ಬೆರಗಾಗಿ ಕ್ಷಣಹೊತ್ತು ಸುಮ್ಮನಿದ್ದು ಎಂದಳು. "ರಮೇಶ, ಆಗ ಇವರೇನೆ ನಿನಗೆ ಎಲ್ಲಾರಿಗಿಂತ ನನ್ನವರೆಂತ ಅಂದೆ! ಅದು ಹೇಗಾದರೂ ಇರಲಿ ನಾನು ಹೆಣ್ಣು ಹೆಂಗುಸು, ನನ್ನ ಮಾತಿನಿಂದೇನಾದೀತು, ಅಪ್ಪಾ? ಈ ಗ್ರಾಮದಲ್ಲಿ ಒಂದೇ ಏಕೆ ಎಲ್ಲಾ ಗ್ರಾಮಗಳಲ್ಲೂ ಇವರ ಪಂಕ್ತಿ ಅವರಿಗೆ ಆಗದು, ಅವರಿಗೆ ಇನ್ನೊಬ್ಬರ ಜೊತೆಯಲ್ಲಿ ಮಾತಿಲ್ಲ. ಕೆಲಸ ಕಾರ್ಯವೊಂದು ಬಂತೆಂದರೆ ಮನುಷ್ಯನ ದುರ್ಭಾವನೆಗಳಿಗೆ ಕೊನೆಮೊದಲಿಲ್ಲ. ಯಾರನ್ನು ಬಿಟ್ಟು ಯಾರನ್ನು ಕಟ್ಟಿಕೊಳ್ಳುವುದು ಎಂಬುವುದಕ್ಕಿಂತ ಕಷ್ಟತರವಾದ ಕೆಲಸ ಇನ್ನೊಂದಿಲ್ಲ ಗ್ರಾಮದಲ್ಲಿ."

ರಮೇಶನಿಗೆ ಹೆಚ್ಚಿನ ಅಚ್ಚರಿಯೇನೂ ಆಗಲಿಲ್ಲ. ಏಕಂದರೆ ಈ ಒಂದೆರಡು ದಿನಗಳಲ್ಲಿಯೆ ಅವನು ಬಹಳ ಜ್ಞಾನವನ್ನು ಸಂಪಾದಿಸಿಕೊಂಡಿದ್ದನು. ಆದರೂ ಕೇಳಿದನು.

" ಏಕಮ್ಮಾ ಇದೆಲ್ಲಾ ? "

ಅದರ ಕತೆ ಬಹಳವಪ್ಪ. ಇಲ್ಲಿಯೆ ಇರುವುದಾದರೆ ನಿನಗೆ ತಾನಾಗಿಯೇ ತಿಳಿದುಬರುತ್ತೆ. ಕೆಲವರದು ನಿಜವಾದ ತಪ್ಪು, ಕೆಲವರದು ಹಾಗಿಲ್ಲ. " ಇದಲ್ಲದೆ ಜಗಳ–ಕದನ ಕೋರ್ಟು–ಕಚೇರಿ, ಮೊಕದ್ದಮೆ, ಸುಳ್ಳುಸಾಕ್ಷಿ ಹೇಳುವುದು ಹಿಡಿದ ದೊಡ್ಡ ದಳಾಳಿ ಸೇರುತ್ತೆ. ನಾನು ನಿಮ್ಮ ಮನೆಯ ಕಡೆ ಎರಡು ದಿನ ಮುಂಚಿತವಾಗಿ ಹೋಗಿದ್ದರೆ, ರಮೇಶು, ಇಷ್ಟೊಂದು ಸಜ್ಜುಸರಬರಾಯಿಗಳನ್ನು ಆಗಗೊಡುತ್ತಿರಲಿಲ್ಲ. ಅಂದು ಏನಾಗುವುದೊ ಎಂದು ನಾನು ಯೋಚಿಸುತ್ತಿದ್ದೇನೆ" ಎಂದಂದು ದೊಡ್ಡಮ್ಮನು ನಿಟ್ಟುಸಿರಿಟ್ಟಳು. ಆ ನಿಟ್ಟುಸಿರಿನಲ್ಲೇನಿದ್ದಿತೊ ನಿಜವಾದ ಮರ್ಮವನ್ನು ರಮೇಶ ಹಿಡಿಯಲಿಲ್ಲ; ಮತ್ತು ನಿಜವಾದ ಅಪರಾಧಿಗಳಾರು, ಸುಳ್ಳಿಗೆ ಸಿಕ್ಕ ಅಪರಾಧಿಗಳಾಗಿರಬಹುದು, ಇದಾವುದೂ ಅವನರಿಯನಾದರೂ ಉಬ್ಬಿಗವನಾಗೆಂದನು.

" ಆದರೆ ಸನ್ನೊಡನೆ ಇವರಾರಿಗೂ ಯೋಗವಿಲ್ಲ. ನಾನು ಒಂದು ಒಗೆಯಾಗಿ ಏದೇಶೀಯನಂತಲೆ ಆಗಿದ್ದೇನೆ. ಯಾರ ಜೊತೆಯಲ್ಲೂ ನನಗೆ ಯಾವ ವೈರವೂ ಇಲ್ಲ. ಆದ್ದರಿಂದ ನಾನೇನ್ನನ್ನೋದೂ ಎಂದರೆ, ದೊಡ್ಡಮ್ಮ, ಈ ದಳಾಳಿಗಳೊಂದೂ ನನಗೆ ಬೇಡ. ಬ್ರಾಹ್ಮಣ ಶೂದ್ರರೆಲ್ಲರನ್ನೂ ಔತನಕ್ಕೆ ಕರೆದು ಬರುತ್ತೇನೆ. ನಿನ್ನಪ್ಪಣೆಯಿಲ್ಲದೆ ಇದನ್ನು ಮಾಡಲಾರೆ, ನೀನು ಅಪ್ಪಣೆಕೊಡು ದೊಡ್ಡಮ್ಮಾ."

ದೊಡ್ಡಮ್ಮನು ತುಸುಹೊತ್ತು ಸುಮ್ಮನಿದ್ದು ವಿಚಾರಿಸಿ ಹೇಳಿದಳು. " ಈ ಬಗೆ ಅಪ್ಪಣೆ ಕೊಡಲಾರೆನಪ್ಪಾ, ರಮೇಶು ! ಅದರಿಂದ ಭಾರಿಗಲಾಟೆಗಿಟ್ಟುಕೊಳ್ಳುವುದು. ಆದರೆ ನಿನ್ನ ಮಾತು ಸಹ ಸತ್ಯವಲ್ಲವೆಂತಲೂ ಹೇಳಲಾರೆ. ಇದಾದರೆ ಸತ್ಯಮಿಥ್ಯೆಯ ಮಾತಲ್ಲ ! ಸಮಾಜವು ಶಿಕ್ಷೆಗೊಟ್ಟು ಹೊರರಚ್ಚು ಮಾಡಿದವರನ್ನು ಒತ್ತಾಯಪಡಿಸಿ ಕರೆತರಲಾಗುವುದಿಲ್ಲ. ಸಮಾಜವೆಂಥದುವೇ ಆಗಲಿ ಅದನ್ನು ಮನ್ನಿಸಲೇಬೇಕು. ಇಲ್ಲವಾದರೆ ಅದನ್ನು ಒಳ್ಳೆಯದನ್ನಾಗಿ ಮಾಡಲಿಕ್ಕೆ ಯಾವ ಶಕ್ತಿಯೂ ಇರುವುದಿಲ್ಲ. ಈ ಬಗೆಯಾದರಂತೂ ಯಾವ ರೀತಿಯಿಂಪಲೂ ನಡೆಯಲಾಗುವುದಿಲ್ಲ, ರಮೇಶು."

ಬಗೆದು ನೋಡಿದ್ದರೆ ಈ ಮಾತನ್ನು ರಮೇಶ ಒಪ್ಪದೆ ಇದ್ದ ನೆಂತಲ್ಲ; ಆದರೆ ಈಗ ತಾನೆ ಹೊರಗಡೆ ಈ ಸಮಾಜದ ಶಿರೋದೇಶದಲ್ಲಿ ಇರುವಂತವರ ಷಡಯಂತ್ರ ಮತ್ತು ನೀಚ ಆಶೆಗಳು ಅವನ ಹೃದಯದಲ್ಲಿ ಬೆಂಕಿಯ ಜ್ವಾಲೆಯಂತೆ ಉರಿಯುತ್ತಲಿದ್ದವು. ಆದುದರಿಂದ ಅವನು ತಕ್ಷಣವೆ ತಿರಸ್ಕಾರದಿಂದ ತುಂಬಿ ಹೇಳಹತ್ತಿದನು.

"ಈ ಗ್ರಾಮದ ಸಮಾಜವೆಂದರೆ ಧರ್ಮದಾಸ, ಗೋವಿಂದ ಇವರು ತಾನೆ? ಇಂಥಹ ಸಮಾಜಕ್ಕೆ ಒಂದು ತೊಟ್ಟು ಸಹ ಸಾಮರ್ಥ್ಯ ವಿಲ್ಲದೆ ಹೋಗುವುದೇ ಬಹಳ ಉತ್ತಮ ದೊಡ್ಡಮ್ಮ."

ದೊಡ್ಡಮ್ಮ ರಮೇಶನ ಉಗ್ರಭಾವನೆಯನ್ನು ಲಕ್ಷಿಸಿದಳು. ಆದರೆ ಶಾಂತ ದನಿಯಲ್ಲಿ ಎಂದಳು.

"ಬರಿ ಅವರೇ ಅಲ್ಲ, ರಮೇಶು, ನಿಮ್ಮ ದೊಡ್ಡಣ್ಣ ವೇಣಿಯೂ ಸಮಾಜದ ಯಜಮಾನರಲ್ಲೊಬ್ಬನು."

ರಮೇಶ, ಸುಮ್ಮನಿದ್ದನು.

ಅವಳು ತಿರುಗೂ ಹೇಳಿದಳು. "ಆದ್ದರಿಂದಲೆ ನಾನೆನ್ನುವುದು ಇವರನ್ನು ಕೇಳಿ ಕೆಲಸ ಮಾಡಪ್ಪಾ, ರಮೇಶು. ಈಗ ತಾನೆ ಮನೆಯಲ್ಲಿ ಕಾಲಿಕ್ಕಿದಿಯೋ ಇಲ್ಲವೋ ಇವರುಗಳನ್ನು ಎದುರು ಹಾಕಿಕೊಳ್ಳುವುದು ಒಳ್ಳೆಯದಲ್ಲ."

ವಿಶ್ವೇಶ್ವರಿ ಎಷ್ಟು ದೂರದವರೆಗೂ ಚಿಂತಿಸಿ ಹೀಗೆ ಉಪದೇಶ ವಿತ್ತರೂ ಅವನು ತನ್ನ ಆಗಿನ ಭಾವಾವೇಶ ತೀವ್ರತೆಯನ್ನು ದಾಟಿ ಹೋಗಲಿಲ್ಲ. ದೊಡ್ಡಮ್ಮನಿಗೆ ಹೇಳಿದನು.

"ನೀನೆ ಈಗ ತಾನೆ ಎಂದೆ, ದೊಡ್ಡಮ್ಮ, ಹಲವು ಕಾರಣಗಳಿಂದ ಇಲ್ಲಿ ದಲಾಲಿ ಹುಟ್ಟುತ್ತೆಂದು. ಒಬ್ಬರ ಮೇಲೊಬ್ಬರ ಹೊಟ್ಟೆಯಕಿಚ್ಚೆ ಎಲ್ಲದಕ್ಕೆ ಹೆಚ್ಚೆಂಬು ತೋರುತ್ತೆ. ಅದಲ್ಲದೆ ಸತ್ಯ ಯಾರದು ಮಿಥ್ಯೆ ಯಾರದು, ಯಾರ ದೋಷವಾವುದು ಇದೊಂದು ನನಗೆ ತಿಳಿಯದೆ ಇರುವಾಗ ಯಾವ ಜನಗಳನ್ನೆ ಆಗಲಿ ಬಿಟ್ಟು ಅಪಮಾನ ಮಾಡುವುದು ನನ್ನ ಪಕ್ಷಕ್ಕೆ ಅನ್ಯಾಯ."

ದೊಡ್ಡಮ್ಮ ಕೊಂಚ ನಕ್ಕು ಎಂದಳು.

" ಎಲೋ ಹುಚ್ಚಾ, ನಾನು ನಿನಗೆ ಹಿರಿಯಳು, ತಾಯ ಸಮಾನ. ನನ್ನ ಮಾತನ್ನು ಕೇಳದೆ ಹೋದರೆ ನಿನ್ನ ಪಕ್ಷಕ್ಕೆ ಅದು ಅನ್ಯಾಯ. "

" ಏನ ಮಾಡಲಿ, ದೊಡ್ಡಮ್ಮ, ನಾನು ಖಂಡಿತ ಮಾಡಿಕೊಂಡಿದ್ದೇನೆ, ಎಲ್ಲರನ್ನು ಕರೆಯಬೇಕೆಂತ. "

ಅವನ ದೃಢಸಂಕಲ್ಪವನ್ನು ನೋಡಿ, ವಿಶ್ವೇಶ್ವರಿಯ ಮೊಗ ಕಪ್ಪಿಟ್ಟಿತು; ಮನಸ್ಸಿನಲ್ಲಿ ಬೇಸರಗೊಂಡಿರಬಹುದು; ಎಂದಳು. " ಹಾಗಾದರೆ ನನ್ನ ಅಪ್ಪಣೆಯನ್ನು ಹುಡುಗಾಟಕ್ಕೆ ಕೇಳಬಂದಿದ್ದಿ. "

ದೊಡ್ಡಮ್ಮನ ಬೇಸರವನ್ನು ರಮೇಶನರಿತನು, ಆದರೆ ಅಳುಕಲಿಲ್ಲ. ತುಸು ಹೊತ್ತಿನ ಮೇಲೆ ಮೆಲ್ಲ ಮೆಲ್ಲನೆ ಎಂದನು.

" ನಾನು ತಿಳಿದಿದ್ದೆ, ದೊಡ್ಡಮ್ಮ, ಅನ್ಯಾಯವಲ್ಲದಂಥಹ ನನ್ನ ಕೆಲಸಗಳಿಗೆ ನೀನು ತಿಳಿಮನಸ್ಸಿನಿಂದ ಆಶೀರ್ವಾದ ಮಾಡುತ್ತೀಯೆಂತ. "

ಅವನ ಮಾತು ಮುಗಿಯುವುದಕ್ಕೆ ಮುಂಚೆಯೆ ವಿಶ್ವೇಶ್ವರಿ ಹೇಳಹತ್ತಿದಳು.

" ಆದರೆ ಇದನ್ನೂ ನೀನು ತಿಳಿದುಕೊಳ್ಳಬೇಕಾಗಿತ್ತು, ರಮೇಶ, ನನ್ನ ಹೊಟ್ಟೆಯಲ್ಲಿ ಹುಟ್ಟಿದ ಮಗನಿಗೆ ವಿರೋಧವಾಗಿ ನಾನು ನಡೆದುಕೊಳ್ಳಲಾರೆ ಎಂತ. "

ಈ ಮಾತು ರಮೇಶನ ಮನಸ್ಸನ್ನು ಮಿಡಿದಿತು. ಕಾರಣವೇನಂದರೆ, ಅವನು ಬಾಯಿಯುಲ್ಲೇನೆಂದರೂ ಅವನ ಸರ್ವಾಂತಃಕರಣವೂ ನಿನ್ನೆಯಿಂದಲೂ ಇದೆ ದೊಡ್ಡಮ್ಮನಲ್ಲಿ ಮಗನ ಒತ್ತಾಯವನ್ನು ಮಾಡುತ್ತಿದ್ದಿತು; ಈಗ ಕಂಡಿತು, ಈ ಒತ್ತಾಯದ ಬಲು ಮೇಲುಗಡೆ ಅವಳ ಸ್ವಂತ ಮಗನ ಒತ್ತಾಯದ ತಾವನ್ನು ಪಡೆದುಕೊಂಡಿದೆ. ಅವನು ಕ್ಷಣ ಹೊತ್ತು ಸುಮ್ಮನಿದ್ದು ಎದ್ದುನಿಂತು ತಡೆದ ಸಿಟ್ಟಿನ ದನಿಯಲ್ಲಿ ಎಂದನು.

" ನಿನ್ನೆಯತನಕ ಹಾಗೆಂತಲೆ ತಿಳಿದಿದ್ದೆ, ದೊಡ್ಡಮ್ಮಾ. ಆದ್ದರಿಂದಲೆ ನಿನಗೆ ಆಗಲೇ ಹೇಳಿದ್ದೆ, ನಾನೊಬ್ಬನೆ ಮಾಡಿಕೊಳ್ಳುತ್ತೇನೆ, ನೀನು ಬರಬೇಡವೆಂತ, ನಿನ್ನನ್ನು ಕರೆಯಲಿಕ್ಕೆ ಸಹ ನನಗೆ ಧೈರ್ಯ ಉಂಟಾಗಲಿಲ್ಲ. "

ಈ ಕ್ಷಣ್ಣ ಅಭಿಮಾನವು ದೊಡ್ಡಮ್ಮನಿಗೆ ಗೋಚರವಾಗದೆ ಇರ

ಲಿಲ್ಲ. ಆದರೆ ಉತ್ತರವನ್ನು ಈಯಲಿಲ್ಲ. ಕತ್ತಲಲ್ಲಿ ಸುಮ್ಮನೆ ಕುಳಿತಿದ್ದಳು. ಕೊಂಚ ಹೊತ್ತಾದಮೇಲೆ ಅವನು ಹೊರಟು ಹೋಗುತ್ತಿರಲು ಎಂದಳು. "ಹಾಗಿದ್ದರೆ ಕೊಂಚ ನಿಲ್ಲು, ಮಗು, ನಿನ್ನ ಉಗ್ರಾಣದ ಮನೆಯ ಬೀಗದಕೈಯನ್ನು ತಂದು ಕೊಡುತ್ತೇನೆ," ಎಂದು ಒಳಗಿಂದ ಆದನ್ನು ತಂದು ರಮೇಶನ ಕಾಲಹತ್ತಿರ ಬಿಸುಟಳು. ರಮೇಶನು ಕೊಂಚ ಹೊತ್ತು ಬೆಂಡಾಗಿ ನಿಂತಿದ್ದು ಕೊನೆಗೆ ಆಳವಾದ ನಿಟ್ಟುಸಿರೊಂದನ್ನು ಬಿಟ್ಟು ಬೀಗದಕೈಯನ್ನು ಎತ್ತಿ ತೆಗೆದುಕೊಂಡು ಮೆಲ್ಲ ಮೆಲ್ಲನೆ ಹೊರಟು ಹೋದನು. ಗಂಟೆಯೊಂದರ ಮುಂಚೆ ಅವನು ಮನಸ್ಸಿನಲ್ಲಿಯೆ ಅಂದುಕೊಂಡಿದ್ದನು. "ಇನ್ನು ನನಗೇನು ಭಯ, ನಮ್ಮ ದೊಡ್ಡಮ್ಮ ಇದ್ದಾಳೆ!" ಆದರೆ ಒಂದು ರಾತ್ರಿ ಕೂಡ ಕಳೆಯಲಿಲ್ಲ, ಅವನು ತಿರುಗೂ ನಿಟ್ಟುಸಿರಿಟ್ಟು ಹೇಳಬೇಕಾಗಿ ಬಂತು. "ಇಲ್ಲ, ನನ್ನವರು ಯಾರೂ ಇಲ್ಲ– ದೊಡ್ಡಮ್ಮ ಸಹ ನನ್ನನ್ನು ತ್ಯಜಿಸಿ ಬಿಟ್ಟಿದ್ದಾಳೆ."

೪

ಹೊರಗೆ ಈಗ ತಾನೆ ಶ್ರಾದ್ಧ ಮುಗಿದಿದೆ. ಮಣೆಯಿಂದೆದ್ದು ರಮೇಶ ಅಭ್ಯಾಗತರ ಪರಿಚಯ ಮಾಡಿಕೊಳ್ಳಲು ಯತ್ನ ಮಾಡುತ್ತಿದ್ದಾನೆ– ಮನೆಯೊಳಗೆ ಎಲೆ ಹಾಕುವ ಪ್ರಯತ್ನ ನಡೆಯುತ್ತಿದೆ; ಈ ಸಮಯದಲ್ಲಿ ಗಲಭೆ ಕಿರಿಚಾಟವೊಂದು ಕಿವಿಗೆ ಬಿದ್ದು ರಮೇಶ ವ್ಯಸ್ತನಾಗಿ ದಡಬಡನೆ ಒಳಗೆ ಬಂದನು. ಜೊತೆಯಲ್ಲಿಯೆ ಬಹುಜನರು ನುಗ್ಗಿದರು. ಒಳಗೆ ಅಡುಗೆ ಮನೆಯ ಬಾಗಿಲೊಂದು ಕಡೆ ೩೫–೩೬ ವರುಷ ವಯಸ್ಸಿನ ವಿಧವೆಯೊಬ್ಬಳು ಮಂಕು ಬಡಿದು ಹಿಂದುಮುಂದಾಗಿ ನಿಂತಿದ್ದಾಳೆ, ಮತ್ತೊಬ್ಬ ಎಡತರದ ವಯಸ್ಸಿನವಳು ಅವಳನ್ನು ಮುಂದಕ್ಕೆ ತಳ್ಳಿ ನಿಂತು ರೋಷದಿಂದ ಕಣ್ಣು ಮೂಗು ಕೆಂಪು ಮಾಡಿಕೊಂಡು ಕಿರಿಚಿ ಬೆಂಕಿಯ ಕಿಡಿಗಳನ್ನುಗುಳುತ್ತಿದ್ದಾಳೆ. ಜಗಳ ಕೂಡದೆ ಹಲಧರ ನೊಡನೆ. ರಮೇಶನನ್ನು ನೋಡಿದೊಡನೆಯೆ ಆ ಎಡತರದ ಹೆಂಗುಸು ಕಿರಿಚಿ ಕೇಳಿದಳು.

"ಹೌದಪ್ಪಾ, ನೀನೂ ಒಬ್ಬ ಊರಿಗೆ ಜಾಗಿರದಾರ; ನೀನೆ ಹೇಳು

ಅಂಥಾ ತಪ್ಪೇನು ಈ ಕಾವೇರಮ್ಮನ ಮಗಳು ಮಾಡಿರೋದು? ನಮಗೆ ಯಾರೂ ದಿಕ್ಕಿಲ್ಲವೆಂದು ನೀವು ಬಲ್ಲಂತೆ ಶಿಕ್ಷೆ ಕೊಡುತ್ತೀರಾ?'' ಗೋವಿಂದನನ್ನು ತೋರಿಸಿ ಮತ್ತೆ ಹೇಳಿದಳು. ''ಅವನು ಕಳ್ಳಂಬಿಯೋರ ಮನೆಯಲ್ಲಿ ಅಶ್ವತ್ಥಸ್ಥಾಪನೆ ಮಾಡಿದಾಗ ತಪ್ಪುದಂಡವೆಂದು ಇಸ್ಕೂಲ ಹೆಸರಲ್ಲಿ ಹತ್ತು ರೂಪಾಯಿಗಳನ್ನು ನನ್ನ ಹತ್ತಿರ ಕಸಿದುಕೊಳ್ಳಲಿಲ್ಲವೇ? ಗ್ರಾಮದೇವತೆ ಪೂಜೆಗೆ ಎರಡು ಮೇಕೆ ಬಲಿಗೊಡಬೇಕೆಂತ ಖರೀದಿ ಕಟ್ಟಿ ನನ್ನಿಂದ ಹದಿನಾರು ರೂಪಾಯಿಗಳನ್ನು ಪೂಜೆಗೋಸುಗ ಕಿತ್ತುಕೊಳ್ಳಲಿಲ್ಲವೆ? ಹಾಗೆಂತ ಎಷ್ಟುಸಲ ಈ ಒಂದು ಮಾತು ಹಿಡಿದು ತಡೆದು ಹಿಂಡಿ ಹಿಪ್ಪೀ ಮಾಡಬೇಕು ಎಂತಾನೆ?''

ರಮೇಶನಿಗೆ ಸಮಾಚಾರವೇನೆಂಬುದು ಕೊಂಚವೂ ತಿಳಿಯಲಿಲ್ಲ. ಗೋವಿಂದ ಗಂಗಾಳಿ ಕೂತಿದ್ದವನು ತಿಳಿಸಬೇಕೆಂದು ಎದ್ದು ನಿಂತನು. ಒಂದು ಸಲ ರಮೇಶನ ಕಡೆಗೂ ಒಂದು ಸಲ ಪ್ರೌಢಳ ಕಡೆಗೂ ನೋಡಿ ಗಂಭೀರವಾದ ದನಿಯಲ್ಲಿ ಹೇಳಿದನು.

''ನನ್ನ ಹೆಸರೆತ್ತಿದೆಯಾದ್ದರಿಂದ, ಕಾವೇರಮ್ಮ, ಹಾಗಾದರೆ ನಿಜವಾದ ಮಾತು ಹೇಳುತ್ತೇನೆ ಕೇಳು, ಮಗು! ಉಪಚಾರದ ಮಾತುಗಳನ್ನು ನುಡಿಯುವವನು ಗಂಗಾಳಿ ಗೋವಿಂದಾಚಾರ್ಯನಲ್ಲ; ಅದನ್ನ ನಾಡೆಲ್ಲಾ ಬಲ್ಲದು. ನಿಮಗೆ ಪ್ರಾಯಶ್ಚಿತ್ತವೂ ಆಗಿದೆ, ಸಾಮಾಜಿಕ ತಪ್ಪುದಂಡವನ್ನೂ ನಾವು ಹಾಕಿದ್ದೇವೆ– ಎಲ್ಲಾ ಬಲ್ಲೆ! ಆದರೆ ಮಡಿ ಅಡಿಗೆಗೆ ಅವಳು ಕಟ್ಟಿಗೆ ಕೊಡಲು ನಾವು ಅಪ್ಪಣೆ ಮಾಡಲಿಲ್ಲ. ಸತ್ತರೆ ಅವಳನ್ನು ಸುಡಲಿಕ್ಕೆ ಹೊರಲು ಹೆಗಲು ಕೊಡುತ್ತೇವೆ ಆದರೆ—''

ಕಾವೇರಮ್ಮ ಕಿರುಚಿ ಹೇಳಿದಳು, ''ಸತ್ತರೆ ನಿನ್ನ ಸ್ವಂತ ಮಗಳನ್ನು ಹೆಗಲ ಮೇಲೆ ಹೊತ್ತು ಸುಟ್ಟು ಹಾಕಿಬಾ, ನನ್ನ ಮಗಳ ವಿಚಾರ ನೀನು ಯೋಚನೆ ಮಾಡಬೇಕಾಗಿಲ್ಲ. ಹೌದೊ, ಗೋವಿಂದ, ಅಂತೇನೆ ನಿನ್ನ ಮೈಮುಟ್ಟಿ ಹೇಳಬಾರದೆ–ಇದೆ ಇಲ್ಲೆ ಉಗ್ರಾಣದಲ್ಲಿ ಕೂತು ವೀಳ್ಯೆ ಸಜ್ಜುಮಾಡುತ್ತಾ ಇದ್ದಾಳೆ, ನಿನ್ನ ತಮ್ಮನ ಹೆಂಡತಿ; ಅವಳು ಒಂದು ವರುಷದ ಮೇಲೊಂದುವರೆ ಎರಡು ತಿಂಗಳತನಕ ಯಾವ ಕಾಶೀವಾಸ ಮಾಡೋದಕ್ಕೆ ಹೋಗಿ ಹಾಗೆ ಹಚ್ಚಗೆ ಬಿಳಿಚಿಕೊಂಡು

ಬೇತಾಳ ಬಡಕಲಾಗಿ ಬಂದಳು. ಹೇಳು, ಕೇಳೋಣ? ಅದು ದೊಡ್ಡೋರ ದೊಡ್ಡಮಾತೇನೊ? ಶಾನೆ ಕೊಚ್ಚಬೇಡವೊ, ನಾನು ಈ ಜಂಭಾಚಾರನ್ನೆಲ್ಲ ಹರಿದು ಚೂರು ಚೂರು ಮಾಡೇನು. ನಾವೂ ಮಕ್ಕಳುಮರಿಗಳನ್ನ ಹೊಟ್ಟೇಲಿ ಹೊತ್ತಿದ್ದೇವೆ, ನಮಗೂ ಗುರುತು ಸಿಕ್ಕುತ್ತೆ. ನಮ್ಮ ಕಣ್ಣಿಗೆ ಮಣ್ಣು ಎರಚೋಕೆ ಆಗೋದಿಲ್ಲ. ''

ಗೋವಿಂದನು ಹುಚ್ಚನಂತೆ ಹಾರಿಬಿದ್ದನು. '' ಹಾಗೇನೆ ಸೂಳೆ ಮಗಳೆ, ರಂಡೇದೆ. ''

ಆದರೆ ಸೂಳೆಮಗಳು ರಂಡೇದು ಕೊಂಚವೂ ದಿಗಿಲು ಬೀಳಲಿಲ್ಲ, ಅದಕ್ಕೆ ಬದಲು ಮುಂದಕ್ಕೆ ಹೆಜ್ಜೆಯೊಂದೆರಡು ಬಂದು ಕೈಬಾಯಿ ತಿರುಗಿಸುತ್ತಾ ಎಂದಳು. '' ಹೊಡೀತೀಯೇನೊ? ಕಾವೇರಮ್ಮನನ್ನು ಕೆಣಕಿದೆಯೊ ನೋಡಿಕೊ ರಕ್ತಮುಚ್ಚ ಹೋಗಿ ಮೈಯೆಲ್ಲಾ ರೂಳ್ಳಾಗಿಬಿಟ್ಟೀತು. ಹೇಳಿದ್ದೇನೆ ನೋಡಿಕೊ. ನನ್ನ ಮಗಳು ಆಡಿಗೆ ಮನೆಯೊಳಕ್ಕೇನೂ ಹೋಗಲಿಲ್ಲ; ಬಾಗಿಲಿಗೆ ಬಾಡಳೊ ಇಲ್ಲವೊ ಅನ್ನೋವಾಗ್ಗೇನೆ ಹಲಧರ ದೊಡ್ಡಪ್ಪ ಗದರಿ ಅಪಮಾನ ಮಾಡಿದನಲ್ಲಾ, ಅಂತೇನೆ, ಅವನ ಮದುವೆಯಾದ ಹೆಂಡರು ಪಟ್ಟಿಗಾರ್ರೋಳು ಅಂತ ಅಪವಾದ ಇರಲಿಲ್ಲವೇನೊ? ನಾನೇನೂ ನಿನ್ನೆಮೊನ್ನೆಯೋಳಲ್ಲಪ್ಪಾ, ಎಂತೇನೆ, ಇನ್ನೂ ಹೇಳಬೇಕೊ, ಇಲ್ಲದೆ ಇಷ್ಟೇ ಸಾಕೊ? ''

ರಮೇಶ ಕಟ್ಟಿಗೆಯಾಗಿ ನಿಂತಿದ್ದನು. ಭುಜಂಗಾಚಾರಿ ವ್ಯಸ್ತನಾಗಿ ಕಾವೇರಮ್ಮನ ಕೈಯನ್ನು ಇನ್ನೇನು ಹಿಡಿದು ಬೇಡಿಕೊಂಡನು. '' ಇಷ್ಟೇಸಾಕು, ಮಾಸಿ, ಇನ್ನು ಕೆಲಸವಿಲ್ಲ. ತಕ್ಕೊ ಸುಕುಮಾರಿ, ಏಳಮ್ಮ, ನಡಿ ಮಗು, ನನ್ನ ಜೊತೆಯಲ್ಲಿ ಆ ಕೋಣೆಯಲ್ಲಿ ಕೂತುಕೊಳ್ಳುವಿಯಂತೆ. ''

ಹಲಧರನು ಅಂಗವಸ್ತ್ರವನ್ನು ಹೆಗಲಮೇಲೆಸೆದು ನೆಟ್ಟಗೆ ನಿಂತು ಗಟ್ಟಿಯಾಗಿ ಹೇಳಿದನು. '' ಈ ಸೂಳೆ ಮುಂಡೇರನ್ನ ಒಟ್ಟಿಗೆ ಬಾರಿಸಿ ಹೊರಗಟ್ಟಿದ ಹೊರತು ತೀರ್ಥ ಸಹಾ ನಾನು ಮುಟ್ಟೆ; ಇಗೋ ಹೇಳಿಬಿಟ್ಟಿದ್ದೇನೆ. ಗೋವಿಂದ, ಕಾಳಪ್ಪ! ನಿಮಗೆ ನಿಮ್ಮ ಮಾನ ಬೇಕೊ, ಹಾಗಾದರೆ ಎದ್ದು ಬನ್ನಿ. ಘೋಷಗೇರಿ ವೇಣಿ ಆಗಲೆ ಅಂದಿದ್ದ,

'ಮಾವ, ಹೋಗಬೇಡ ಅಲ್ಲಿಗೆ,' ಈ ಬಗೆ ಹಾದರಗಿತ್ತೀ ಕಾಂಡ ಕಾರಖಾನೆಯಂತ ತಿಳಿದಿದ್ದರೆ ಜಾತಿಕುಲ ಕಳಕಳ್ಯೋಕೆ ಈ ಮನೆ ಹೊಸ್ತಿಲು ತುಳಿತಾ ಇದ್ದೆನೆ? ಕಾಳ ಎದ್ದು ಬಾ. ''

ಮಾವನು ಬಾರಿಬಾರಿಗೂ ಕರೆಯುತ್ತಿದ್ದರೂ ಕಾಳನು ಕೊರಳನ್ನು ಬಗ್ಗಿಸಿಕೊಂಡು ಕೂತೆ ಇದ್ದನು. ಅವನು ರೇಷ್ಮೆ ವ್ಯಾಪಾರಿ. ನಾಲ್ಕು ವರುಷಗಳ ಮುಂಚೆ ಮದರಾಸಿನಲ್ಲಿರುವ ಅವನ ಗಣ್ಯಮಾನ್ಯ ಖರೀದ್ದಾರನಾದ ಸ್ನೇಹಿತ ಅವನ ವಿಧವೆ ಚಿಕ್ಕತಂಗಿಯನ್ನು ಎತ್ತಿಕೊಂಡು ಹೋಗಿದ್ದನು. ಘಟನೆ ಗೋಪ್ಯವಾಗಿರಲಿಲ್ಲ. ಹಠಾತ್ತಾಗಿ ಮಾವನ ಮನೆಗೆ ಹೋಗುವುದು ಮತ್ತು ಅಲ್ಲಿಂದ ತೀರ್ಥಯಾತ್ರೆ ಇತ್ಯಾದಿ ಪ್ರಸಂಗಗಳಿಂದ ಕೆಲದಿನಗಳು ಮಾತ್ರ ಮುಚ್ಚಿತ್ತು. ಎಲ್ಲಿ ಈ ದುರ್ಘಟನೆಯ ಇತಿಹಾಸ ಇಷ್ಟು ಜನಗಳ ಮುಂದೆ ತಿರಗೂ ಎದ್ದೀತೆಂಬ ದಿಗಲಿನಿಂದ ಕಾಳ ತಲೆಯನ್ನು ಎತ್ತಲಾರದೆ ಇದ್ದನು. ಆದರೆ ಗೋವಿಂದನ ವ್ಯೈಯುರಿ ಮೊದಲೇನೂ ಕಡಮೆಯಾಗಿರಲಿಲ್ಲ. ಅವನು ತಿರಗೂ ಎದ್ದು ನಿಂತು ಗಡಸು ದನಿಯಲ್ಲಿ ಎಂದನು. "ಯಾರು ಏನು ಬೇಕಾದರೂ ಅನ್ನಲಿ, ಈ ಅಂಚಲಿನ ಸಮಾಜಪತಿಯಾಗಿರೋನು ವೇಣೀ ಘೋಷಗೇರಿ, ಹಲಧರ ಮತ್ತು ವಾಸುದೇವ ಕಳ್ಳಂಬಿಯ ಮಗಳು. ಅವರನ್ನು ನಾವಾರೂ ಬಿಡುವಹಾಗಿಲ್ಲ! ರಮೇಶರಾಯ ಸಮಾಜದ ಮಾತು ತೆಗದು ಕೊಳ್ಳದೆ ಈ ಇಬ್ಬರು ಹೆಣ್ಣುಮುಂಡೆಯರನ್ನು ಮನೆಯೊಳಕ್ಕೆ ಬರಗೊಟ್ಟಿದ್ದಾನೇಕೆ, ಇದಕ್ಕೆ ಸರಿಯಾದ ಉತ್ತರವೀಯದೆ ಹೋದರೆ, ನಾವಾರೂ ಇಲ್ಲಿ ತೀರ್ಥ ಕೂಡ ತೆಗೆದುಕೊಳ್ಳುವುದಿಲ್ಲ. ''

ನೋಡನೋಡುತ್ತಲೆ ಐದು, ಏಳು, ಹತ್ತು ಜನರು ಅಂಗವಸ್ತ್ರಗಳನ್ನು ಹೆಗಲಮೇಲೆಸೆದುಕೊಂಡು ಒಬ್ಬೊಬ್ಬರಾಗಿ ಎದ್ದುನಿಂತರು. ಇವರೆಲ್ಲರೂ ಹಳ್ಳಿಯ ಜನಗಳೆ; ಸಮಾಜದ ವಿಷಯದಲ್ಲಿ ಎಲ್ಲಕ್ಕಿಂತಲೂ ಲಾಭ ಎಲ್ಲಿ, ಹೇಗೆ ಎಂಬುದು ಅವರರಿಯದೆ ಇರಲಿಲ್ಲ.

ಕರೆದಿದ್ದ ಬ್ರಾಹ್ಮಣ ಸಜ್ಜನರು ಬಾಯಿಗೆ ಬಂದಂತೆ ಆಡಿಕೊಳ್ಳುತ್ತಿದ್ದರು. ಭುಜಂಗನೂ ದೀನನೂ ಕಣ್ಣೀರಿಡುವಂತೆಯಾಗಿ ಕಾವೇರಮ್ಮನನ್ನೊಂದು ಸಲ, ಅವಳ ಮಗಳನ್ನೊಂದು ಸಲ ಗಂಗಾಳೆಯನ್ನೊಂದು

ಸಲ ಹಲಧರನನ್ನೊಂದಾವರ್ತಿ ಕೈಕಾಲು ಹಿಡಿಯಲು ಮೊದಲು ಮಾಡಿದರು. ನಾಲ್ಕು ದಿಕ್ಕುಗಳಲ್ಲಿ ಸಮಸ್ತ ಅನುಷ್ಠಾನ ಕ್ರಿಯಾಕರ್ಮಗಳು ಕೆಟ್ಟು ಹಾಳಾಗುವ ಸೂಚನೆ ತೋರಿತು. ರಮೇಶನಾದರೆ ಒಂದು ಮಾತನ್ನೂ ಆಡಲಿಲ್ಲ; ಹಸಿವು ಬಾಯಾರಿಕೆಗಳಿಂದ ಅತ್ಯಂತ ಬಳಲಿದ್ದಾನೆ, ಅದರ ಮೇಲೆ ಅಕಸ್ಮಾತ್ತಾಗಿ ಈ ಭಾವಿಸಲಾಗದ ಕಾಂಡ, ಮೊಗ ಬಿಳುಪೇರಿ ಒಂದು ಬಗೆ ಹುಚ್ಚನಂತೆ ಸುಮ್ಮನೆ ನಿಟ್ಟಿಸಿನಿಂತಿದ್ದನು.

" ರಮೇಶ ! "

ಅಕಸ್ಮಾತ್ತಾಗಿ ಒಂದು ಕ್ಷಣದಲ್ಲಿ ಎಲ್ಲ ಜನಗಳ ಬೆದರು ನೋಟವು ವಿಶ್ವೇಶ್ವರಿಯೊಬ್ಬಳ ಮೊಗದ ಮೇಲೆ ಹೋಗಿ ಬಿತ್ತು. ಅವಳು ಉಗ್ರಾಣದಿಂದ ಹೊರಗೆ ಬಂದು ಬಾಗಿಲ ಹತ್ತಿರ ನಿಂತಿದ್ದಳು. ಅವಳ ತಲೆಯ ಮೇಲೆ ಸೆರಗಿತ್ತು. ಆದರೂ ಮೊಗ ಮುಚ್ಚಿರಲಿಲ್ಲ. ರಮೇಶನು ಕಂಡನು, ದೊಡ್ಡಮ್ಮ, ತಾನೇ ಯಾವಾಗಲೋ ಬಂದಿದ್ದಾಳೆ. ಅವನನ್ನು ಬಿಟ್ಟು; ಹೊರಗಿನ ಜನ ಕಂಡರು, ಈಕೆಯೆ ವಿಶ್ವೇಶ್ವರಿ, ಈಕೆಯೆ ಘೋಷಗೇರಿ ಮನೆಯ ದೊಡ್ಡ ಯಜಮಾನಿ !

ಹಳ್ಳಿಗಾಡಿನ ಕಡೆ ಪಟ್ಟಣವಾಸದಂತೆ ಕಟ್ಟುನಿಟ್ಟು ಮುಚ್ಚುಮರೆಯಿಲ್ಲ. ಆದರೂ ವಿಶ್ವೇಶ್ವರಿ ದೊಡ್ಡ ಮನೆಯವರ ಸೊಸೆಯೆಂದೊ ಅಲ್ಲದೆ ಬೇರೆ ಯಾವ ಕಾರಣದಿಂದಲೊ ಬಹಳ ವಯಸ್ಸಾಗಿದ್ದರೂ, ಸಾಧಾರಣವಾಗಿ ಎಲ್ಲರ ಎದುರಲ್ಲಿ ಹೊರಗೆ ಬರುತ್ತಿರಲಿಲ್ಲ. ಎಲ್ಲರೂ ಬಹಳ ವಿಸ್ಮಿತರಾದರು ! ಬರಿ ಕಿವಿಯಿಂದ ಕೇಳಿ ಇದಕ್ಕೆ ಮುಂದೆ ಕಣ್ಣಿಂದ ಕಾಣದಿದ್ದವರು ಅವಳ ಆಶ್ಚರ್ಯವಾದ ಕಂಗಳೆರಡನ್ನು ನೋಡಿ ಒಂದೆ ಬಾರಿಗೆ ಮುಗ್ಧರಾಗಿ ಹೋದರು. ಅವಳು ಥಟ್ಟನೆ ಕೋಪಗೊಂಡೆ ಹೊರಕ್ಕೆ ಬಂದಿರಬೇಕು. ಎಲ್ಲರೂ ಮೊಗವನ್ನು ಎತ್ತಿದೊಡನೆಯೇ ಅವಳು ಕಂಬದ ಮರೆಗೆ ಸರಿದು ಹೋದಳು. ಚೊಕ್ಕ ತೀವ್ರವಾದ ಆಹ್ವಾನದಿಂದ ರಮೇಶನ ವಿಹ್ವಲತೆಯು ತೊಡೆದುಹೋಯಿತು. ಅವನು ಎದುರಿಗೆ ಮುಂದಬಿದ್ದು ಬಂದನು. ದೊಡ್ಡಮ್ಮನು ಮರೆಯಿಂದಲೆ ಚೊಕ್ಕವಾದ ಗಟ್ಟಿದನಿಯಲ್ಲಿ ಎಂದಳು. " ಗಂಗಾಳಿ ಮಹಾಶಯರು ಭಯದೋರುವದನ್ನು ತಡೆದು ಹೇಳು, ನಾನು ಎಲ್ಲರನ್ನೂ ಆದರಿಸಿ ಮನೆಗೆ ಕರತಂದಿ

ದ್ದೇನೆ—ಸುಕುಮಾರಿಗೆ ಅಪಮಾನ ಮಾಡುವುದರಿಂದ ಅವರಿಗೇನೂ ಪ್ರಯೋಜನವಾಗುವುದಿಲ್ಲ. ನನ್ನ ಕೆಲಸಕಾರ್ಯದ ಮನೆಯಲ್ಲಿ ಕೂಗಿ, ಕಿರಿಚಿ, ಬೈದಾಡಲು ನಾನು ನಿಷೇಧಿಸಿದ್ದೇನೆ. ಅನಾನುಕೂಲವಾದವರು ಬೇರೆ ಬೇರೆ ಸ್ಥಳಗಳಲ್ಲಿ ಹೋಗಿ ಕೂತುಕೊಳ್ಳಬಹುದು.''

ದೊಡ್ಡ ಯಜಮಾನಿಯ ದೊಡ್ಡಪ್ಪಣೆಯನ್ನು ಎಲ್ಲರೂ ತಮ್ಮ ಕಿವಿಗಳಿಂದಲೆ ಕೇಳಿದರು. ರಮೇಶ ಬಾಯಿಬಿಟ್ಟು ಹೇಳಬೇಕಾಗಲಿಲ್ಲ. ಬೇಕಾಗಿದ್ದರೆ ಅವನಿಂದ ಆಗುತ್ತಲೂ ಇರಲಿಲ್ಲ. ಇದರ ಫಲವೇನಾಯಿತೆಂದು ಅವನು ನಿಂತು ನೋಡಲು ಸಹ ಆಗಲಿಲ್ಲ. ದೊಡ್ಡಮ್ಮ ಸಮಸ್ತ ದಾಯಿತ್ವವನ್ನು ತನ್ನ ಸ್ವಂತ ತಲೆಯಮೇಲೆ ಹೊತ್ತುದನ್ನು ನೋಡಿ, ಅವನು ಹೇಗೊ ಕಣ್ಣೀರನ್ನು ತಡೆದು ಬೇಗಬೇಗನೆ ಕೋಣೆಯೊಂದನ್ನು ಹೊಕ್ಕನು. ತಕ್ಷಣವೆ ಅವನ ಕಂಗಳು ನೀರು ತುಂಬಿ ಉಕ್ಕಿ ದಳದಳವೆಂದು ಸುರಿದವು. ಇವತ್ತೆಲ್ಲಾ ಅವನು ಸ್ವಂತ ಕೆಲಸದಲ್ಲಿ ಮಗ್ನನಾಗಿದ್ದನು; ಯಾರು ಬಂದರು ಯಾರು ಬರಲಿಲ್ಲವೆಂಬುದನ್ನು ನೋಡಿಕೊಳ್ಳಲು ಅವನಿಗೆ ಆಗಿರಲಿಲ್ಲ. ಆದರೆ ಇನ್ನಾರು ಬಂದರೂ ದೊಡ್ಡಮ್ಮ ಬರಬಲ್ಲಳೆಂಬುದು ಅವನ ಬಹಳ ದೂರದ ಕಲ್ಪನೆಗೂ ಹೊರಚಾಗಿತ್ತು. ಎದ್ದು ನಿಂತಿದ್ದವರು ಮೆಲ್ಲಮೆಲ್ಲನೆ ಕೂತುಬಿಟ್ಟರು. ಗೋವಿಂದ ಗಂಗಾಳಿ, ಹಲಧರ ಇವರಿಬ್ಬರು ಮಾತ್ರ ಮಂಕರಂತೆ ನಿಂತಿದ್ದರು. ಯಾರೋ ಒಬ್ಬರು ಅವರನ್ನು ಕುರಿತು ಗುಂಪಿನೊಳಗಿಂದ ಗೊಣಗು ದನಿಯಲ್ಲಿ ಹೇಳಿದರು. ''ಕೂತುಕೋಬಾರದೇನೊ ಚಿಕ್ಕಪ್ಪ! ಹದಿನಾರು ಹೋಳಿಗೆ ನಾಲ್ಕು ಜೊತೆ ಲಾಡು ಬಟ್ಟಿಗೆ ಯಾರ ಮನೆಯಲ್ಲಿ ತಾನೇ ಒಡಿಸಿದ್ದರಪ್ಪ!''

ಹಲಧರನು ಮೆಲ್ಲಮೆಲ್ಲಗೆ ಹೊರಕ್ಕೆ ಹೋದನು. ಏನಚ್ಚರಿ, ಗೋವಿಂದ ನತ್ಯವಾಗಿ ಕೂತೇಬಿಟ್ಟ. ಆದರೆ ಅವನು ಮೊಗವನ್ನು ಭಾರ ಮಾಡಿಕೊಂಡು ಊಟಕ್ಕೆ ಕೂಡುವ ಹೊತ್ತಿನಲ್ಲಿ ವಿಚಾರಣೆ ತೆಗೆದುಕೊಂಡು ಬರುತ್ತೇನೆಂದು ಎದ್ದು ಹೋಗಿ ಎಲ್ಲರ ಪಂಕ್ತಿಯಲ್ಲಿ ಕೂತು ಉಣಲಿಲ್ಲ. ಯಾರಾರು ಈ ನಡತೆಯನ್ನು ಕಂಡರೊ ಅವರೆಲ್ಲರೂ ಮನಸ್ಸಿನಲ್ಲಿಯೆ ತಿಳಿದರು; ಗೋವಿಂದನು ಸಹಜವಾಗಿ ಯಾರನ್ನೂ

ಬಿಟ್ಟುಕೊಡನು. ಆ ಮೇಲೆ ಇನ್ನೇನೂ ಗಲಭೆಯಾಗಲಿಲ್ಲ. ಬ್ರಾಹ್ಮಣರು ಭೋಜನ ಮಾಡಿದ್ದನ್ನು ಕಣ್ಣಾರೆ ಕಾಣದೆ ಇದ್ದರೆ ನಂಬಿಗೆಯಾಗುವದು ಕಷ್ಟ. ಮತ್ತೂ ಪ್ರತಿಯೊಬ್ಬರೂ ಪುಟ್ಟು, ಪಿಳ್ಳಿ, ಸಣ್ಣಿ, ಮಣಿ, ಮುಂತಾದ ಹುಟ್ಟಿದ-ಹುಟ್ಟಲಿರುವ ಹುಡುಗ ಹುಡುಗಿಯರ ಹೆಸರುಗಳ ಮೇಲೆ ಇಸಿದುಕೊಂಡು ಕಟ್ಟಿಕೊಂಡು ಹೋದದ್ದು ಅಷ್ಟಿಷ್ಟಲ್ಲ. ಸಂಜೆಯ ಮೇಲೆ ಇನ್ನೇನು ಕೆಲಸ ಕಾರ್ಯಗಳೆಲ್ಲಾ ಮುಗಿದಿವೆ. ರಮೇಶ ದೊಡ್ಡ ಬಾಗಿಲ ಆಚೆ ಚೇಪೆಮರದ ಕೆಳಗೆ ಅನ್ಯ ಮನಸ್ಕನಂತೆ ನಿಂತಿದ್ದನು. ಅವನ ಮನಸ್ಸು ಚೆನ್ನಾಗಿರಲಿಲ್ಲ. ದೀನಭಟ್ಟ ಮಕ್ಕಳೊಡನೆ ಮಿಕ್ಕ ಒಡೆ, ಗಾರಿಗೆ ಮೊದಲಾದವುಗಳ ಭಾರದಿಂದ ಸೊಂಟಬಗ್ಗಿ ಒಂದು ಬಗೆಯಾಗಿ ಕಾಣದಂತೆ ಹೊರಬಿದ್ದು ಹೋಗುತ್ತಿದ್ದುದನ್ನು ಅವನು ಕಂಡನು. ಎಲ್ಲಕ್ಕೆ ಮುಂಚೆ ಪುಟ್ಟಿಯ ಕಣ್ಣು ಬೀಳಲು ಅವಳು ತಪ್ಪುಮಾಡಿದವಳಂತೆ ಬೆಚ್ಚಿಬಿದ್ದು ಒಣದನಿಯಲ್ಲಿ ಎಂದಳು.

"ಅಪ್ಪಾ ರಾಯರು ನಿಂತು...."

ಎಲ್ಲರೂ ಮಂಕು ಬಡಿದಂತಾದರು. ಚಿಕ್ಕ ಹುಡುಗಿಯ ಈ ಒಂದು ಮಾತಿನಿಂದಲೆ ಇತಿಹಾಸವನ್ನು ರಮೇಶ ತಿಳಿದನು. ಓಡಿ ಹೋಗುವುದಕ್ಕೆ ಸ್ಥಳವಿದ್ದರೆ ಅವನು ತಾನಾಗಿಯೆ ಓಡಿಬಿಡುತ್ತಿದ್ದನು. ಆದರೆ ಉಪಾಯವಿರಲಿಲ್ಲವೆಂತ ಮುಂದಕ್ಕೆ ಬಂದು ಹಾಸ್ಯದಿಂದೆಂದನು. "ಪುಟ್ಟೀ, ಇದನ್ನೆಲ್ಲಾ ಯಾರಿಗಾಗಿ ತೆಗೆದುಕೊಂಡು ಹೋಗುತ್ತೀಯೆ?"

ಅವರೆಲ್ಲರ ಚಿಕ್ಕದೊಡ್ಡ ಮೂಟೆಗಳ ವಿಷಯವಾಗಿ ಸದುತ್ತರವನ್ನು ಪುಟ್ಟಿ ಕೊಡಲಾರಳೆಂದು ಆತಂಕ ಪಟ್ಟು ದೀನನು ತಾನೆ ಕೊಂಚ ಒಣಕಲು ಭಾವದಿಂದ ನಕ್ಕು ಎಂದನು. "ಬೀದಿಯ ಸಣ್ಣಜನಗಳ ಮಕ್ಕಳು ಮರಿಗಳುಂಟಲ್ಲಾ, ರಾಯ, ಮಿಕ್ಕದ್ದು ಸೊಕ್ಕಿದ್ದು ತೆಗೆದುಕೊಂಡು ಹೋದರೆ ಅವರಿಗೆ ಎರಡು ಮೂರರಂತೆ ಕೊಡಬಹುದು. ಅದು ಹೇಗಾದರೂ ಆಗಲಿ ಯಪ್ಪ, ಊರಿನವರೆಲ್ಲ ಅವಳನ್ನ ಯಜಮಾನಮ್ಮಾಯಂತೇಕೆ ಕರೀತಾರೆ ಎನ್ನೋದು ಈ ಹೊತ್ತು ತಿಳಿಯಿತು."

ರಮೇಶ ಅದಕ್ಕೆ ಉತ್ತರವೇನನ್ನೂ ಕೊಡದೆ ಜೊತೆಯಲ್ಲೇ ಬಾಗಿಲ ಕೊನೆಯವರೆಗೂ ಬಂದು ಹಠಾತ್ತಾಗಿ ಹೇಳಿದನು.

"ಒಳ್ಳೇದು ಭಟ್ಟರೆ, ನಿಮಗಂತೂ ಇಲ್ಲಿಯದೆಲ್ಲವೂ ತಿಳಿಯದೆ ಇಲ್ಲ. ಈ ಊರಿನಲ್ಲಿ ಇಷ್ಟೊಂದು ದ್ವೇಷಾದ್ವೇಷಿ ಏಕೆ ಹೇಳಬಲ್ಲಿರಾ?"

ದೀನೆ ಬಾಯಿಯಲ್ಲಿಯೊಂದು ದನಿಮಾಡಿ ಒಂದೆರಡು ಸಲ ಕತ್ತನ್ನು ಅಲುಗಿಸಿ ಎಂದನು. "ಅಯ್ಯೋ, ರಾಯ, ನಮ್ಮ ಭಾವೀಕುಂಟೆಯೇ ಎಷ್ಟೋ ಹಿಡಿತದಲ್ಲಿದೆ. ಅದೆಂಥಾ ಸಮಾಚಾರೊ— ಪುಟ್ಟಿ ಮಾವನ ಮನೆಯ ಕಡೆ ನೋಡಿ ಬಂದೆ! ಇಪ್ಪತ್ತು ಮನೆ, ಬ್ರಾಹ್ಮಣರು ಕೋಮ-ಟಿಗರ ಮನೆಗಳೇ ಇಲ್ಲ, ಊರಿನಲ್ಲಿ ನಾಲ್ಕು ಪಂಗಡ! ಬೀರಪ್ಪ ಎರಡು ಸೀಮೆ ಹುಣಸೆಹಣ್ಣು ಕೆಡವಿದನಂತ ತನ್ನ ತಂಗಿ ಮಗನ್ನೆ ಜೈಲಿಗೆ ಅಟ್ಟಿಯೇ ಬಿಟ್ಟ! ಎಲ್ಲ ಹಳ್ಳಿಗಳಲ್ಲಿ ಇದೇ ಒಗೆಯಪ್ಪ—ಅದಲ್ಲದೆ ಕೋರ್ಟುಕಚೇರಿ, ವ್ಯಾಜ್ಯವ್ಯವಹಾರಗಳಿಂದ ಸಾವಿರಾರು ಜನರು ಮಾರುಗಳಾಗಿ ಹೋಗಿವೆ! ಪುಟ್ಟೀ, ಹಸಮಯ ಕೈಯೊಂದು ಸಲ ಒದ ಬಾಯಿಸಿಕೊ, ಅಮ್ಮಾ."

ರಮೇಶ ತಿರುಗೂ ಕೇಳಿದನು. "ಇದಕ್ಕೇನು ಪ್ರತೀಕಾರವಿಲ್ಲವೆ, ಭಟ್ಟರೆ?"

"ಪ್ರತೀಕಾರ ಹೇಗಪ್ಪಾ ಆದೀತು, ಇದು ಘೋರ ಕಲಿಗಾಲ!" ಭಟ್ಟನು ನಿಟ್ಟುಸಿರೊಂದನ್ನು ಹೊಯ್ದು ಎಂದನು. "ಹಾಗಿದ್ದರೆ ಒಂದು ಮಾತು ಹೇಳ ಒಲ್ಲೆನಪ್ಪ. ನಾನು ತಿರಿದು ತರುವುದಕ್ಕೆ ಒಹಳ ಕಡೆ ಹೋಗುತ್ತೇನೆ, ಹಲವರು ಅನುಗ್ರಹಿಸುತ್ತಾರೆ. ನಾನು ಒಹು ನೋಡಿದ್ದೇನೆ. ನೀವು ಹುಡುಗರು, ನಿಮ್ಮಲ್ಲಿ ದಯೆ ಧರ್ಮ ಇದೆ, ಈ ಮುದಿತಾಯಿಗ್ಗಂಡರಲ್ಲಿ ಮಾತ್ರ ಇಲ್ಲ. ಇವರಿಗೆ ಸಂಚು ಸಿಕ್ಕಿತೋ ನೋಡು, ಕೊರಳ ಮೇಲೆ ಕೂತು ನಾಲಿಗೆ ಹೊರಕ್ಕೆ ಚಾಚಿಸಿಬಿಡು-ತ್ತಾರೆ, ಎಂದು ದೀನನು ನಾಲಿಗೆಯನ್ನು ತೆರದು ತೋರಿದ ಭಂಗಿಯನ್ನು ನೋಡಿ ರಮೇಶನು ನಕ್ಕುಬಿಟ್ಟನು.

ದೀನನು ನಗುವಿನ ಜೊತೆಗೆ ಬೆರೆಯದೆ ಎಂದನು. "ನಗು- ಮಾತಲ್ಲ, ರಾಯ, ಅತಿ ಸತ್ಯವಾದ ಮಾತು. ನಾನು ಮುದುಕನಾಗಿ

ದ್ದೇನೆ. ಆದರೆ ನೀನು ಕತ್ತಲಲ್ಲಿ ಬಹಳ ಮುಂದಕ್ಕೆ ನಡೆದಿದ್ದೀ, ರಾಯ ! ''

'' ಅದ. ಹೋಗಲಿ, ಭಟ್ಟರೆ, ನೀವು ಹೇಳಿ ! ''

'' ಇನ್ನೇನ ಹೇಳಲಿಯಪ್ಪ, ಹಳ್ಳಿಗಾಡೆ ಹೀಗೆ. ಈ ಗೋವಿಂದ ಗಂಗಾಳಿ ಈ ಸೂಳೆಮಗನ ಅಪ್ಪನ ಮಾತನ್ನು ಬಾಯಿಲಿ ತಂದರೆ ಪ್ರಾಯಶ್ಚಿತ್ತಮಾಡಿಕೊಬೇಕು. ಕಾವೇರಮ್ಮನೇನೂ ಸುಳ್ಳು ನುಡಿಯ ಲಿಲ್ಲ–ಆದರೂ ಅವನ ಕಂಡರೆ ಎಲ್ಲರೂ ಭಯಪಡುತ್ತಾರೆ! ಪಿತೂರಿ ಮಾಡೋಕೆ, ಸುಳ್ಳುಸಾಕ್ಷಿ, ಸುಳ್ಳುಮೊಕದ್ದಮೆ ತಯಾರು ಮಾಡೋಕೆ ಅವನ ಜೋಡಿ ಇನ್ನಿಲ್ಲ. ವೇಣೀರಾಯರು ಕೈಹಿಡಿದಿದ್ದಾರೆ. ಆದ್ದರಿಂದ ಯಾರೂ ಒಂದು ಮಾತೂ ಆಡಲಿಕ್ಕೆ ಸಾಹಸಪಡರು, ಅದಕ್ಕೆ ಬದಲಿ ಅವನೇ ಐದು ಜನಗಳ ಜಾತಿಬಡಿದು ಮೆರೆಯುತ್ತಾನೆ ! ''

ರಮೇಶ ಬಹು ಕ್ಷಣಗಳ ಪರಿಯಂತ ಇನ್ನೇನನ್ನೂ ಕೇಳದೆ ಜೊತೆ ಯಲ್ಲೇ ನಡೆದನು. ಕೋಪದಿಂದ ಅವನ ಮೈಯೆಲ್ಲಾ ಉರಿಯು ತ್ತಿದ್ದಿತು. ದೀನ ತಾನಾಗಿಯೆ ಹೇಳತೊಡಗಿದನು.

'' ಇಗೋ ನನ್ನ ಮಾತು ನೀ ನೋಡಿಕೊಂಡಿರು, ಕಾವೇರಮ್ಮ ಸುಲಭವಾಗಿ ಬಿಡುಗಡೆ ಪಡೆಯೊಲ್ಲ. ಗೋವಿಂದ ಗಂಗಾಳಿ, ಹಲಧರ ಪರಾಣ, ಈ ಇಬ್ಬರು ಭೀಮಚಕ್ರಗಳು, ಇವಕ್ಕೆ ಅಡ್ಡಿ ಹಾಕೋದು ಎನ್ನುವುದು ಸಾಮಾನ್ಯವೇನು ! ಆದರೆ ಏನೇ ಹೇಳು, ಹೆಣ್ಣಿಗೆ ಸಾಹಸ ಏದೆ. ಸಾಹಸ ತಾನೇ ಇರವಲ್ಲದೇಕೆ ? ಹುರಿದ ಅವಲಕ್ಕಿಮಾರಿ ಜೀವನ. ಎಲ್ಲರ ಮನೆಗೂ ಹೋಗಿಬರುತ್ತಾಳೆ, ಎಲ್ಲರ ಸಮಾಚಾರದ ಸಂಚೂ ಸಿಗುತ್ತೆ. ಅವಳನ್ನು ಕೆಣಕಿದರೆ ಕಳಂಕಗಳ ಕೊನೆ ಮೊದಲಿರವು, ಇಗೋ ಹೇಳಿಬಿಟ್ಟಿದ್ದೇನೆ. ಅನಾಚಾರವಿಲ್ಲದ ಮನೆ ಯಾವದು ಹೇಳು ? ವೇಣೀರಾಯ. ''

ರಮೇಶ ಭಯದಿಂದ ತಡೆಹಾಕಿ ಎಂದನು. '' ನಿಲ್ಲಿಸಿ, ದೊಡ್ಡಣ್ಣ ನವರ ವಿಷಯವಾಗಿ ಇನ್ನು ಮಾತು ಕೆಲಸವಿಲ್ಲ. ''

ದೀನನು ಮುಖಮುರಿದವನಾಗಿ ಹೋದನು. '' ಸಾಕಪ್ಪ, ನಾನು

ಬಡವ, ಯಾರ ಮಾತಿನಿಂದಲೂ ಕೆಲಸವಿಲ್ಲ. ಯಾರಾದರೂ ವೇಣೀ ರಾಯರ ಕಿವಿಯಲ್ಲಿ ಹೇಳಿದರೆಂದರೆ ನನ್ನ ಮನೆಗೆ ಬೆಂಕಿ '' ಎಂದನು.

ರಮೇಶ ತಿರಗೂ ತಡೆದು ಕೇಳಿದನು. '' ಭಟ್ಟರೆ ನಿಮ್ಮ ಮನೆ ಇನ್ನೂ ದೂರವೋ ? ''

'' ಇಲ್ಲಪ್ಪ, ಶಾನೆ ದೂರವಿಲ್ಲ, ಇಗೊ ಈ ಕಟ್ಟೆಯ ಮಗ್ಗಲೆ ನನ್ನ ಗುಡಿಸಿಲು, ಎಂದಾದರೂ..... ''

'' ಬರುತ್ತೇನೆ ಖಂಡಿತ ಬರುತ್ತೇನೆ. '' ಎಂದು ರಮೇಶ ಹಿಂದಿರುಗಲು ಉದ್ಯುಕ್ತನಾಗಿ ಎಂದನು. '' ತಿರುಗೂ ನಾಳೆ ಬೆಳಿಗ್ಗೆಯಂತು ನೋಡೋಣವಾಗುತ್ತಲ್ಲ. ಆ ಮೇಲೆಯೂ ಆಗಿಂದಾಗ್ಗೆ ಪಾದಧೂಳಿ ಯನ್ನು ಹಾಕುತ್ತಿರಬೇಕು '' ಎಂದು ರಮೇಶ ಹೊರಟು ಹೋದನು.

'' ದೀರ್ಘಜೀವಿಯಾಗು, ತಂದೆಯಂತೆಯಾಗು '' ಎಂದು ದೀನ ಭಟ್ಟ ಮನಸ್ಸಿನೊಳಗಿಂದ ಆಶೀರ್ವಚನವನ್ನು ಹೊರಗೆಡವಿ ಮಕ್ಕಳು ಮರಿಗಳನ್ನು ಕರೆದುಕೊಂಡು ಹೊರಟು ಹೋದನು.

೫

ಹಳ್ಳಿಯ ಈ ಪಾರಿನಲ್ಲಿ ಮಂಜಯ್ಯನ ಚಿಲ್ಲರೇ ಅಂಗಡಿಯೊಂದೆ ನದಿಯ ಹಾದಿಯಲ್ಲಿ ಸಂತೆಯೊಂದರ ಪಕ್ಕದಲ್ಲಿರುವುದು. ಹತ್ತು ಹನ್ನೆರಡು ದಿನಗಳಾದವು, ಆದರೂ ಬಾಕಿಯಾಗಿರುವ ಹತ್ತುರೂಪಾಯಿ ಗಳನ್ನು ತೆಗದುಕೊಂಡು ಹೋಗಲಿಲ್ಲವೆಂದು ರಮೇಶ ಮನಸ್ಸಿನಲ್ಲಿ ಏನೊ ಅಂದುಕೊಂಡು ತಾನೆ ಒಂದು ದಿನ ಬೆಳಿಗ್ಗೆ ಅಂಗಡಿಯ ಕಡೆಗೆ ಹೊರಬಿದ್ದನು. ಮಂಜಯ್ಯ ಬಲು ಆದರದಿಂದ ಚಿಕ್ಕರಾಯರನ್ನು ವರಾಂಡಾದಲ್ಲಿ ಕಂಬಳಿಯನ್ನು ಹಾಸಿ ಕೂಡಿಸಿ ಚಿಕ್ಕರಾಯರು ಬಂದ ಕಾರಣವನ್ನು ಕೇಳಿ ದಿಗಿಲು ಬಡಿದು ಅವನ ನಾಲಿಗೆ ಒಣಗಿಹೋಯಿತು. ಇತ್ತಕಡೆ ತಾನಾಗಿಯೇ ಸಾಲವನ್ನು ಹಿಂದಕ್ಕೆ ಕೊಡಲು ಬರುವಂಥ ವನನ್ನು ಇಷ್ಟು ವಯಸ್ಸಿನಲ್ಲಿ ಎಂದೂ ಕಣ್ಣಿಂದ ಕಂಡದ್ದೇ ಇಲ್ಲ, ಕಿವಿಯಿಂದ ಕೇಳಿಯೂ ಸಹ ಇರಲಿಲ್ಲ. ಮಾತು ಮಾತಿನ ಮೇಲೆ ಬಹಳ ಮಾತುಕತೆಗಳು ನಡೆದವು. ಮಂಜಯ್ಯನೆಂದನು.

"ಅಂಗಡಿಯನ್ನು ನಡೆಯಿಸುವ ಬಗೆ ಹೇಗೆ, ರಾಯರೆ, ಎರಡಾಣೆ, ನಾಲಕಾಣೆ, ಒಂದು ರೂಪಾಯಿ, ಐದು ಪಾವಲೆ ಹೀಗೆ ಐವತ್ತು ಅರವತ್ತು ರೂಪಾಯಿಗಳು ಬಾಕಿಬಿದ್ದಿದೆ. ಇಗೋ ಕೊಟ್ಟೆನೆನ್ನುತ್ತ ಎರಡು ತಿಂಗಳಾದರೂ ಬರುವಂತಿಲ್ಲ. ಇದೇನು, ಬಲವಂತರಾಯರೆ, ನಮಸ್ಕಾರ, ಯಾವಾಗ ಬರೋಣಾಯಿತು?

ಬಲವಂತರಾಯರು ಎಡಗೈಲಿ ತಂಬಿಗೆ ಕಾಲಿಗೆಮೆಟ್ಟಿರುವ ಕೊರಡಿನ ಆವುಗೆಗಳ ಅಂಚಿನಲ್ಲಿ ಕೆಸರಿನ ರೇಖೆ, ಕಿವಿಗೆ ಜನಿವಾರ ಮುಡಿದಿದೆ, ಬಲಗೈಲಿ ಕೇಸುವಿನ ಎಲೆಯಲ್ಲಿ ಹಸಿಮೆಣಸಿನಕಾಯಿಗಳು ನಾಲ್ಕು ಹಿಡಿದಿದ್ದಾರೆ. ಉಸ್ಸೆಂದು ನಿಟ್ಟುಸಿರುಹೊಯ್ದು ಅವರು ಎಂದರು. "ನಿನ್ನೆ ರಾತ್ರಿ ಬಂದೆ; ನಶ್ಯಕೊಡು ನೋಡೋಣ ಮಂಜ." ತಂಬಿಗೆಯನ್ನು ಇಟ್ಟು ಮೆಣಸಿನಕಾಯನ್ನು ಕೆಳಗೆ ಹಾಕಿ ಡಬ್ಬಿಯನ್ನು ಹಿಡಿದು ಎಂದರು. "ಹೊಲೆಯರ ಸಿಂಗಿಯ ಬುದ್ಧೀನ ನೋಡಿದೆಯೊ, ಮಂಜ, ಗಪ್ಪನೆ ನನ್ನ ಕೈಹಿಡಿದು ಹಾಕಿಬಿಟ್ಟಳು! ಕಾಲ ಬರಬರುತ್ತ ಎಷ್ಟುಕ್ಕೆಳೀತು ನೋಡಿದೆಯೊ, ಇದೇನು ಒಂದರೆಕಾಸಿನ ಮೆಣಸಿನಕಾಯಿ? ಬ್ರಾಹ್ಮಣರಿಗೆ ಮೋಸಮಾಡಿ ಎಷ್ಟುದಿನ ತಿಂದಾಳು, ರಂಡೆ ಹಾಳಾಗ?"

ಮಂಜ ವಿಸ್ಮಯವನ್ನು ತೋರಿಯೆಂದನು, "ನಿಮ್ಮ ಕೈ ಹಿಡಿದು ಹಾಕಿ ಬಿಟ್ಟಳೆ?"

ರೇಗಿದ ಬಲವಂತರಾಯನು ನಾಲ್ಕುದಿಕ್ಕಿಗೂ ಒಂದು ಸಲ ನೋಡಿ ಹುರಿಗೊಂಡು ಎಂದನು. "ಬರಿ ಎರಡೂವರೆ ದುಡ್ಡು ಬಾಕಿ, ಹಾಗೆಂತ ಸರ್‍ರನೆ ಸಂತೆ ಜನಗಳ ಮುಂದೇನೆ ಕೈತಡೆದು ಬಿಟ್ಟಳಲ್ಲಾ ನನ್ನ! ಯಾರಾದರೂ ಕಂಡುಂಟೆ. ಹೊಲದ ಕಡೆ ಹೋಗಿ ಬಂದು, ತಂಬಿಗೆ ತೀಡಿ ಕೈಕಾಲುಗಳನ್ನ ನದಿಯಲ್ಲಿ ತೊಳೆದುಕೊಂಡೆ ಒಂದು ಸಲ ಸಂತೆ ಸುತ್ತು ಹಾಕೋಣಾ ಎಂತ ಹೋದರೆ, ರಂಡೆ ಒಂದು ಗೂಡೆ ಮೆಣಸಿನಕಾಯಿ ಇಟ್ಟುಕೊಂಡು ಕೂತಿದ್ದಾಳೆ. ನನಗೆ ಸರ್‍ರನೆ ಹೇಳಿ ಬಿಟ್ಟಳಲ್ಲಾ, "ಏನೂ ಇಲ್ಲ, ಯಜಮಾನರೆ, 'ಎಲ್ಲಾ ಆಗಿ ಹೋಯಿತು' ಅಂತ! ಎಲ ಎಲಾ! ನನ್ನ ಕಣ್ಣಿಗೆ ಮಣ್ಣು ಹಾಕೋಕಾದೀತೆ? ಚಂದೀನ ಫಸ್ಸನೆ ಎತ್ತಿ ಬಿಸಾಕಿ ನೋಡ್ತೇನೆ ಹಾಗೆಯೇ ಫಸ್ಸೆಂತ ಕೈನ ಬಿಗಿಯಾಗಿ ಹಿಡಿದು

ಹಾಕಿಬಿಟ್ಟಳು ! ಸಿನ್ನೇದು ಎರಡೂವರೆ ಇಂದಿನದು ಒಂದು, ಈ ಮೂರೂ ವರೆ ಚಿಕ್ಕ ಕಾಸ ಎತ್ತಿಕೊಂಡು ನಾನು ಊರುಬಿಟ್ಹೋದೇನೆಯೆ ? ನೀ ಹೇಳಯ್ಯಾ ಮಂಜ ? ''

ಮಂಜ ದನಿಗೊಟ್ಟು ಎಂದನು. '' ಅದೂ ಉಂಟೆ ? ''

'' ಹಾಗಾದರೆ ಹಾಗೆ ಅನ್ನು; ಊರಿನಲ್ಲಿ ಕಟ್ಟು ಕಟ್ಟಲೆ ಏನಾದರೂ ಇದೆಯೆ ? ಇಲ್ಲದೇ ಇದ್ದರೆ ಈ ಮಾದಿಗರ ಸಂಗೀ ಮಾಳಿಗೆ ತರದು ಊರೊಳಕ್ಕೆ ಒರಗೊಡದಂತೆ ಮಾಡೋಕೆ ಆಗತಾ ಇರಲಿಲ್ಲವೆ ! ಅಕ ಸ್ಮಾತ್ತಾಗಿ ರಮೇಶನ ಕಡೆ ನೋಡಿ ಕೇಳಿದನು, ಈ ರಾಯರಾರು ಮಂಜ ? ''

'' ನಮ್ಮ ಚಿಕ್ಕರಾಯರ ಮಗ ಕಾಣಿರಿ. ಅಂದಿನದು ಹತ್ತು ರೂಪಾಯಿ ಬಾಕಿ ನಿಂತಿದೆಯಂತ ಅವರೆ ಹೊರಬಿದ್ದು ಬಂದವರೆ— ''

ಬಲವಂತರಾಯ ಮೆಣಸಿನಕಾಯಿ ಕಾಳಗವನ್ನು ಮರೆತು, ಎರಡು ಕಣ್ಣುಗಳನ್ನೂ ಅರಳಿಸಿ ಎಂದನು. '' ಹೌದು, ರಮೇಶರಾಯ ? ಚೆನ್ನಾಗಿ ಬಾಳಪ್ಪ, ಬಂದ ಮೇಲೆ ಕೇಳಿದೆ, ಒಂದು ಕಾರ್ಯ ಜನರು ಹೇಳಿಕೊಳ್ಳು ವಂತೆ ಮಾಡಿದೆಯಪ್ಪ ! ಹೀಗೆ ತಿಂಡಿ ಊಟ ಈ ನಾಡಿನಲ್ಲಿ ಎಂದೂ ಆದ್ದೇ ಇಲ್ಲ. ಆದರೆ ಬಹಳ ವ್ಯಸನವಾಯಿತು, ಕಣ್ಣಿಂದ ನೋಡೋಕೆ ಆಗದೆ ಹೋಯಿತು. ನಾಲ್ಕು ಜನ ಪೋಕರಿಗಳ ಕೀಟ್ಲೆಗೆ ಸಿಕ್ಕಿ ಬೊಂಬಾ ಯಿಗೆ ಚಾಕರೀಗೆ ಹೋಗಿ, ಹೊಲೆ ಮಾದಿಗರ ಪಾಡು; ಛಿ, ಛಿ, ಅಲ್ಲಿ ಮನುಷ್ಯರಿರಬಹುದೇನಯ್ಯಾ ! ''

ರಮೇಶ ಈ ಮನುಷ್ಯನ ಮೊಗವನ್ನು ಸುಮ್ಮನೆ ನೋಡುತ್ತಿ ದ್ದನು. ಆದರೆ ಅಂಗಡಿಯವರೆಲ್ಲಾ ಅವನ ಬೊಂಬಾಯಿಯಾತ್ರೆಯ ಚರಿತ್ರೆಯನ್ನು ಕೇಳಬೇಕೆಂತ ಬಹಳ ಕುತೂಹಲ ತೋರಿಸಿದರು. ನಶ್ಯ ವನ್ನು ತಿರುಗೂ ತೆಗದು ಮಂಜ ಮೋದಿಯು ಬಲವಂತರಾಯನಿಗೆ ಕೊಟ್ಟು, '' ಆ ಮೇಲೆ? ಒಂದು ಕೆಲಸ ಸಿಕ್ಕಿತಷ್ಟೆ ? '' ಎಂದು ಕೇಳಿದನು.

'' ಸಿಕ್ಕೊಲ್ಲವೆ ? ನನ್ನದೇನು ಜೋಳ ಹಾಕಿ ಕಲಿತ ಓದುಬರಹ ವೇನಯ್ಯಾ ? ಸಿಕಿದ್ದರೆ ಆಗೋದೇನು; ಅಲ್ಲಿ ಯಾರು ತಾನೆ ಇದ್ದಾರು ಹೇಳು. ಆ ಧೂಳೊ, ಆ ಸೆಕೆ, ಕೆಸರು, ಹೊರಗೆ ಹೋದರೆ ಗಾಡಿ.

ಚಕ್ರಕ್ಕೊ ಕುದುರೆ ಕಾಲಿಗೊ ಸಿಗದೆ ಮನೆಗೆ ಸುರಕ್ಷಿತವಾಗಿ ಬಂದು ಸೇರೋದು ನಿಮ್ಮಪ್ಪನ ಪುಣ್ಯವಿದ್ದರೇನೆ ಅಲ್ಲವೆ ? ''

ಮಂಜ ಬೊಂಬಾಯಿಗೆಂದೂ ಹೋದವನಲ್ಲ. ಒಂದು ಸಲ ಧಾರವಾಡಕ್ಕೆ ಸಾಕ್ಷಿ ಕೊಡುವುದಕ್ಕೆ ಹೋಗಿ ಬಂದಿದ್ದನು ಅಷ್ಟೆ! ಅವನು ಬಹಳ ಬೆರಗಾಗಿ, '' ಏನ ಹೇಳ್ತೀರಿ! ''

ಬಲವಂತ ತುಸು ನಕ್ಕು ಹೇಳಿದನು. '' ನಿಮ್ಮ ರಮೇಶರಾಯರನ್ನೆ ಕೇಳಿ ನೋಡು, ನಿಜವೊ ಸುಳ್ಳೊ. ಇಲ್ಲಪ್ಪ ಮಂಜ, ತಿನ್ನೋಕೆ ಇಲ್ಲದೆ ಹೋದರೆ, ಹೊಟ್ಟೇ ಮೇಲೆ ಒದ್ದೆಯರವೆ ಹಾಕಿಕೊಂಡು ಮನೆಯಲ್ಲೆ ಬಿದ್ದು ಸಾಯ್ತಾ ಇದ್ದೆ ಕಾಣ್ಲೆಯ್ಯ, ಆದರೆ ಪರದೇಶಕ್ಕೆ ಹೋಗೊ ಮಾತು ನನ್ನ ಹತ್ತರ ಇನ್ನಾರಾದರೂ ಎತ್ತೀರಿ. ಹೇಳಿದರೆ ನಂಬ ಬೇಡಯ್ಯಾ; ಅಲ್ಲಿ ಮುತ್ತುಕದೆಲೆ, ಸೇರಳೆಹಣ್ಣು, ಕೀರೆಸೊಪ್ಪು, ಹುಣಸೇಕಾಯಿ, ಸಗಣಿ, ಮಣ್ಣು ಸುದ್ದಾ ಕೊಂಡುಕೊಳ್ಳಬೇಕು! ಬದುಕೋದಾದೀತೇನಯ್ಯಾ ? ಒಂದು ತಿಂಗಳುತನಕ ಇವುಗಳನ್ನು ಉಪಯೋಗಿಸಲಾರದೆ ಏನೊ ರೋಗಹತ್ತಿದ ಇಲಿಯ ಹಾಗೆ ಆಗಿ ಹೋದೆ. ರಾತ್ರಿಹಗಲು ಹೊಟ್ಟೆ ಡಬಡಬ, ಎದೆಯುರಿ, ಜೀವದ ಕಳವಳ, ಓಡಿಬಂದು ಆ ಮೇಲೆ ಉಸಿರುಹೊಯ್ದು ಬದುಕಿಕೊಂಡೆ. ಇಲ್ಲಪ್ಪ ಹಳ್ಳೀಲಿದ್ದುಕೊಂಡು ಸಿಕ್ಕಿದರೆ ಒಂದು ಹೊತ್ತು ಅನ್ನ ಸಾಯಂಕಾಲ ವಾದ ಮೇಲೆ ತಿನ್ನೋಣ; ಇಲ್ಲವೆ ಮಕ್ಕಳುಮರಿಗಳ ಕೈಹಿಡಿದು ಕೊಂಡು ಭಿಕ್ಷಬೇಡೋಣ; ಬ್ರಾಹ್ಮರವಂಶ, ಅದರಲ್ಲೇನೂ ನಾಚಿಕೆ ಪಡಬೇಕಾದ್ದಿಲ್ಲ; ಆದರೆ ಅಮ್ಮ ಲಕ್ಷ್ಮಿ ತಲೆಮೇಲಿರಲಿ ಪರದೇಶಕ್ಕೆ ಮಾತ್ರ ಯಾರಾದರೂ ಹೋದಿಗೀದೀರಿ. ''

ಅವನ ಚರಿತ್ರೆಯನ್ನು ಕೇಳಿ ಎಲ್ಲರೂ ದಿಗಿಲಿನಿಂದ ಬೆಪ್ಪಾಗಿ ಹೋಗಿ ರಲು ಬಲವಂತನು ಎದ್ದು ಬಂದು ಮಂಜನ ಎಣ್ಣೆ ಗಡಿಗೆಯೊಳಕ್ಕೆ ಸಟುಕ ವನ್ನು ಮುಳಿಗಿಸಿ ಒಂದು ಚಟಾಕಿನಷ್ಟು ಎಣ್ಣೆಯನ್ನು ಎಡಗೈಯಿಂದ ತೆಗದುಕೊಂಡು ಅರ್ಧದಷ್ಟು ಎರಡು ಮೂಗಿನ ಸೊಳ್ಳೆಗಳಿಗೂ ಎರಡು ಕಿವಿಗಳ ಗುಂಡಿಗಳಿಗೂ ಸುರಿದುಕೊಂಡು ಮಿಕ್ಕದ್ದನ್ನು ತಲೆಗೆ ಹಚ್ಚಿ ಕೊಂಡನು, ಮತ್ತು ಹೇಳಿದನು, '' ಹೊತ್ತಾಗಿ ಹೋಯಿತು, ಹಾಗೆ

ಒಂದು ಮುಳುಗು ಹಾಕಿ ಮನೆಗೆ ಹೋಗುತ್ತೇನೆ! ಒಂದು ಕಾಸಿನ ಉಪ್ಪು ಕೊಡು ನೋಡೋಣ, ಮಂಚ! ಕಾಸನ್ನ ಸಾಯಂಕಾಲ ಕೊಟ್ಟು ಹೋಗುತ್ತೇನೆ."

"ತಿರಗೂ ಸಾಯಂಕಾಲ!" ಎಂದು ಮಂಜನು ಕಡಡಿಡ ಮೊಗದಿಂದ ಉಪ್ಪನ್ನು ಕೊಡಲು ಅಂಗಡಿಯೊಳಕ್ಕೆ ಹೋದನು. ಬಲವಂತನು ಕೊರಳನ್ನು ಎತ್ತಿನೋಡಿ ಬೆರಗಿನ ಬೇಸರದ ದನಿಯಲ್ಲಿ ಹೇಳ ಹತ್ತಿದನು, "ನಿಮ್ಮಗಳಿಗೆಲ್ಲಾ ಏನಾಯಿತು ಮಂಜು? ಇದೇನು ಕೊರಳ ಮೇಲೆ ಕೂತು ಕಾಸು ವಸೂಲಮಾಡುತ್ತೀರೆಂತ ಕಾಣುತ್ತೆ?" ಎಂದು ಮುಂದೆ ಬಂದು ಹಿಡಿಯಷ್ಟು ಉಪ್ಪನ್ನು ಥಟ್ಟನೆ ತೆಗದು ದೊನ್ನೆಯೊಂದರಲ್ಲಿ ಸುರಿದು ತೆಗದುಕೊಂಡನು. ತಂಬಿಗೆಯನ್ನು ಎತ್ತಿಕೊಂಡು ರಮೇಶನ ಕಡೆಗೆ ನೋಡಿ ಮುಗುಳುನಗೆಯನ್ನು ನಕ್ಕು ಎಂದನು. "ಇದೊ ಬಂದೆ, ದಾರಿಹಿಡಿಯಪ್ಪಾ ಮಾತಾಡತಾ ಹೋಗೋಣ."

"ನಡೆಯಿರಿ" ಎಂದು ರಮೇಶ ಎಂದು ನಿಂತನು. ಮಂಜಯ್ಯ ಅಂಗಡಿಯ ಹತ್ತಿರದಲ್ಲಿ ನಿಂತು ಕರುಣದನಿಯಲ್ಲಿ ಎಂದನು. "ಬಲವಂತ ರಾಯರೆ, ಆ ಗೋಧವೆ ಕಾಸು ಐದು ಆಣೆಗಳು, ಅದೇನು ಹಾಗೆಯೆ."

ಬಲವಂತ ರೇಗಿ ಹೋದನು. "ಹೌದೊ ಮಂಚ, ಎರಡಹೊತ್ತೂ ಕಣ್ಮುಂದೆಯೆ ನೋಡುತ್ತಿ—ನಿನಗೇನು ಕಣ್ಣಿಗೆ ರೆಪ್ಪೆಸಹ ಇಲ್ಲವೆ? ಐದು ಜನ ಹೆಣ್ಣುಗಂಡುಗಳ ಮಾತು ಕೇಳಿ ಬೊಂಬಾಯಿಗೆ ಹೋಗಿ ಬರುವದಕ್ಕೆ ನನ್ನ ಐದು ರೂಪಾಯಿಗಳು ಸುಟ್ಟು ಬೂದಿಯಾದವು. ಇನ್ನು ನಿಮ್ಮಗಳ ತಗಾದೆ, ಒಳ್ಳೆ ಸಮಯ ಸಿಕ್ಕಿತು! ಒಬ್ಬರ ಹಾಳು ಇನ್ನೊಬ್ಬರ ಬದುಕು— ನೋಡಿದೇನಯ್ಯಾ ರಮೇಶ ಇವರ ನಡವಳೀನಾ, ನೋಡಿದೆಯೊ ಒಂದು ಸಲ?"

ಮಂಜನು ಕುಗ್ಗಿ ಹೋಗಿ ಗೊಣಗಿದನು. "ಬಹಳ ದಿನಗಳು"

"ಆದ್ದೇನು, ಬಲು ದಿನಗಳಾದರೆ? ಹೀಗೆ ಮಾಡಿ ಎಲ್ಲರೂ ಬೆನ್ನತ್ತಿದರೆ ಊರಿನಲ್ಲಿ ಇನ್ನಿರೋದಕ್ಕೆ ಆಗುವದಿಲ್ಲ," ಎಂದು ಬಲವಂತ ಒಂದು ಬಗೆಯಾಗಿ ಕೋಪಗೊಂಡೆ ಹೊರಟು ಹೋದನು.

ರಮೇಶ ಹಿಂದಿರುಗಿ ಬಂದು ಮನೆಯೊಳಕ್ಕೆ ಹೋಗುತ್ತಲೇ ಬಬ

ಗೃಹಸ್ಥನು ದಡಬಡನೆ ಕೈಯೊಳಗಿನ ನಶ್ಯವನ್ನು ಚಲ್ಲಿ ಒರಸಿಕೊಂಡು ಥಟ್ಟನೆ ಕಾಲಹತ್ತಿರ ಬಂದು ಅವನಿಗೆ ಪ್ರಣಾಮ ಮಾಡಿ, ಎದ್ದು ನಿಂತು ಹೇಳಹತ್ತಿದನು. "ನಾನು ವನಮಾಲಿ ಪಾಠಕ–ನಿಮ್ಮ ಇಸ್ಕೂಲಿನ ಹೆಡ್ಮೇಷ್ಟರು. ಎರಡು ದಿನಗಳು ಬಂದು ಹೋದೆ. ದರ್ಶನ ಸಿಗಲಿಲ್ಲ; ಆದ್ದರಿಂದ ಹೇಳ—"

ರಮೇಶ ಆದರಿಸಿ ಉಪಾಧ್ಯರನ್ನು ಕುರ್ಚಿಯ ಮೇಲೆ ಕೂಡಿಸ ಹೋದನು. ಅವರಾದರೆ ಸಂಕೋಚದಿಂದ ನಿಂತುಕೊಂಡೇ ಎಂದರು. "ಸ್ವಾಮಿ, ನಾನು ತಮ್ಮ ನೌಕರ."

ಮನುಷ್ಯ ವಯಸ್ಸಿನಲ್ಲಿ ಹಿರಿಯ, ಇನ್ನೂ ಏನೇ ಆಗಲಿ ಒಂದು ವಿದ್ಯಾಲಯದ ಶಿಕ್ಷಕ. ಅವನ ಈ ಅತಿ ವಿನಯ ಮತ್ತು ಸಂಕೋಚಗಳಿಂದ ರಮೇಶನ ಮನಸ್ಸಿನಲ್ಲಿ ಒಂದು ಬಗೆ ಅಶ್ರದ್ಧೆಯ ಭಾವವೆದ್ದಿತು. ಅವರು ಏನ ಮಾಡಿದರೂ ಆಸನವನ್ನು ಸ್ವೀಕರಿಸಲಿಲ್ಲ; ನಿಂತೆ ತಮ್ಮ ಮಾತನ್ನು ಮುಂದುವರಿಸಿದರು. "ಇತ್ತ ಕಡೆ ಇದೊಂದೇ ಸ್ಕೂಲು, ಅತಿ ಸಣ್ಣದು. ಕಳ್ಳಂಬಿ ಮತ್ತು ಘೋಷಗೇರಿಯವರ ಯತ್ನದಿಂದ ಸ್ಥಾಪಿತ ವಾಗಿದ್ದಿತು. ಎರಡು ಮೂರು ಹರಿದಾರಿಗಳಿಂದ ಸಹ ಕೆಲ ವಿದ್ಯಾರ್ಥಿ ಗಳು ಬರುತ್ತಾರೆ. ಅಷ್ಟಿಷ್ಟು ಸರಕಾರಿ ಸಹಾಯ ಕೂಡ ಇದೆ. ತಥಾಪಿ ಇನ್ನು ಸ್ಕೂಲು ನಡೆಯಲು ಸಾಗದೆ ಹೋಗಿದೆ. ಹುಡುಗತನದಲ್ಲಿ ಈ ವಿದ್ಯಾಲಯದಲ್ಲಿಯೇ ರಮೇಶ ಸಹ ಕೆಲದಿನಗಳು ಓದಿದ್ದನು. ಅವನಿಗೆ ನೆನಪು ಸಹವಿದೆ. ಉಪಾಧ್ಯರು ತಿಳಿಸಿದರು, ಮಾಳಿಗೆ ಮರಾಮ್ಮತ್ತು ಮಾಡದೆ ಹೋದರೆ ಬರುವ ಮಳೆಗಾಲದಲ್ಲಿ ವಿದ್ಯಾಲಯದಲ್ಲಿ ಯಾರೂ ಕೂತುಕೊಳ್ಳುವಂತೆ ಇಲ್ಲ. ಆದರೆ ಇದನ್ನು ಆ ಮೇಲೆ ಯೋಚಿಸಿದರೂ ನಡೆಯುವುದು. ಸದ್ಯದಲ್ಲಿ ಉಂಟಾಗಿರುವ ದೊಡ್ಡ ಯೋಚನೆ ಏನಂದರೆ, ಮೂರು ತಿಂಗಳುಗಳಿಂದ ಉಪಾಧ್ಯರಾರಿಗೂ ತಿಂಗಳ ಸಂಬಳ ಸಿಕ್ಕಿಲ್ಲ. ಸುತರಾಂ ಮನೆಯದು ತಿಂದು ಕಾಡುಕೋಣಗಳನ್ನು ಓಡಿಸಿ ಅಲೆಯ ಲಿಕ್ಕೆ ಇನ್ನಾರಿಂದಲೂ ಸಾಗದಾಗಿದೆ."

ಇಸ್ಕೂಲಿನ ಮಾತಿನಿಂದ ರಮೇಶನು ಥಟ್ಟನೆ ಎಚ್ಚರವಾದನು. ಹೆಡ್ಮಾಸ್ಟರು ಮಹಾಶಯರನ್ನು ಬೈಟಕ್ಖಾನೆಯಲ್ಲಿ ಕೂರಿಸಿಕೊಂಡು

ಒಂದೊಂದಾಗಿ ಸಮಸ್ತ ವರ್ತಮಾನವನ್ನೂ ಗ್ರಹಿಸುತ್ತ ಹೋದನು. ಮೇಷ್ಟರು ನಾಲ್ಕು ಜನ. ಅವರ ಮೂಳೆ ಮುರಿಯಾ ಕೆಲಸದ ಫಲವಾಗಿ ಓದುಗರೀರ್ವರು ಪ್ರತಿವರುಷ ಮಿಡಲಸ್ಕೂಲ ಪರೀಕ್ಷೆಯಲ್ಲಿ ತೇರ್ಗಡೆಯಾಗುತ್ತಿದ್ದಾರೆ. ಅವರ ಹೆಸರು, ಸ್ಥಾನ, ವಿವರಣೆ ಉಪಾಧ್ಯ ಮಹಾಶಯರು ಬಾಯಿಪಾಠಮಾಡಿದ್ದಂತೆ ಒಪ್ಪಿಸಿದರು. ಮಕ್ಕಳಿಂದ ದೊರೆಯುವ ಹಣದಿಂದ ಹಾಗೂ ಹೀಗೂ ಕೆಳಗಣ ಇಬ್ಬರು ಮೇಷ್ಟರ, ಗವ್ಹರ್ನಮೇಂಟು ಸಹಾಯದಿಂದ ಇನ್ನೊಬ್ಬರ ಸಂಬಳ ಕೂಡಿಸಲಾಗುತ್ತೆ. ಒಬ್ಬರ ಮಟ್ಟಿಗೆ ಗ್ರಾಮದಿಂದ ಮತ್ತು ಹೊರಗಣಿಂದ ಚಂದಾ ಎತ್ತಿ ಕೂಡಿಸಬೇಕಾಗಿದೆ. ಈ ಚಂದಾ ಸಾಧಿಸುವ ಭಾರವೂ ಮಾಷ್ಟರುಗಳ ಮೇಲೆಯೆ— ಅವರು ಕಳೆದ ಮೂರು ನಾಲ್ಕು ತಿಂಗಳು ಪರ್ಯಾಯ ಕ್ರಮವಾಗಿ ಮನೆಮನೆಗೆ ಎಂಟು ಹತ್ತು ಸಲ ತಿರುಗಿದರೂ ಏಳು ರೂಪಾಯಿಗಳು ನಾಲ್ಕು ಆಣೆಗಳಿಗಿಂತ ಹೆಚ್ಚಿಗೆ ಆದಾಯವಾಗಲಿಲ್ಲ.

ಮಾತು ಕೇಳಿ ರಮೇಶ ಸ್ತಂಭಿತನಾದನು. ಐದು ಆರು ಗ್ರಾಮಗಳ ಮಧ್ಯದಲ್ಲಿರುವುದೊಂದೆ ವಿದ್ಯಾಲಯ. ಈ ಐದಾರು ಗ್ರಾಮಗಳಲ್ಲಿ ಮೂರು ತಿಂಗಳು ಪರ್ಯಾಯವಾಗಿ ತಿರುಗಿ ೭–೪–೦ ಮಾತ್ರ ವಸೂಲಾಗಿದೆ! ರಮೇಶ ಪ್ರಶ್ನೆ ಹಾಕಿದನು. "ತಮ್ಮ ಸಂಬಳವೆಷ್ಟು?"

ಮೇಷ್ಟರೆಂದರು. "ರಸೀದಿ ಕೊಡಬೇಕು ಇಪ್ಪತ್ತೈದು ರೂಪಾಯಿಗಳಿಗೆ, ಕೈಗೆ ಸಿಗುವುದು ಹದಿಮೂರು ರೂಪಾಯಿ ಹದಿನೈದು ಆಣೆಗಳು."

ಮಾತು ರಮೇಶನಿಗೆ ಅರ್ಥವಾಗಲಿಲ್ಲ. ಅವರ ಮೊಗವನ್ನೇ ನೋಡುತ್ತಿದ್ದನು. ಮೇಷ್ಟರು ಅದನ್ನರಿತು ಹೇಳಿದರು. "ಸ್ವಾಮಿ, ಗೌರ್ನಮೇಂಟ ಅಪ್ಪಣೆ ತಾನೆ, ಆದ್ದರಿಂದ ಇಪ್ಪತ್ತೈದು ರೂಪಾಯಿಗಳ ರಸೀದಿ ಬರೆದುಕೊಟ್ಟು ಸಬ್ ಇನಸ್ಪೇಕ್ಟರ ಸಾಹೇಬರಿಗೆ ತೋರಿಸಬೇಕು, ಇಲ್ಲದೆ ಹೋದರೆ ಸರಕಾರ ಸಹಾಯ ನಿಂತು ಹೋಗುತ್ತೆ. ಎಲ್ಲರೂ ಬಲ್ಲರು, ತಾವು ಯಾವ ಛಾತ್ರರನ್ನ ಕೇಳಿದರೂ ಗೊತ್ತಾಗುತ್ತೆ, ನಾನು ಸುಳ್ಳು ಹೇಳುತ್ತಿರುವುದಿಲ್ಲ."

ರಮೇಶ ಬಹಳ ಹೊತ್ತು ಸುಮ್ಮನಿದ್ದು ಕೇಳಿದನು. "ಇದರಿಂದ ಛಾತ್ರರಲ್ಲಿ ತಮ್ಮ ಸನ್ಮಾನ ಹಾನಿಯಾಗುವುದಿಲ್ಲವೆ?"

ಮೇಷ್ಟರಿಗೆ ನಾಚಿಕೆಯಾಯಿತು. "ಏನು ಮಾಡುವುದು ರಮೇಶರಾಯರೆ! ವೇಣೀರಾಯರು ಈ ಅಲ್ಪ ಹಣವನ್ನು ಕೊಡಲು ಇಷ್ಟಪಡರು" ಎಂದರು.

"ಅವರೇ ಮುಖಂಡರೊ?"

ಮೇಷ್ಟರು ಒಂದು ಸಲ ತಡವರಿಸಿದರು. ಆದರೆ ಅವರು ಹೇಳದೆ ಇರಲಾಗದು. ಆದುದರಿಂದ ಅವರು ಮೆಲ್ಲಮೆಲ್ಲಗೆ ಹೀಗೆಂದು ತಿಳುಹಿಸಿದರು. "ಅವರು ತಾವಾಗಿಯೆ ಒಂದು ಕಾಸನ್ನೂ ವೆಚ್ಚ ಮಾಡರು. ಕಳ್ಳಂಬಿಯವರ ಮಗಳು ಸತೀ ಲಕ್ಷ್ಮೀ ಆಕೆ. ಆಕೆಯ ದಯವಿಲ್ಲದೆ ಹೋಗಿದ್ದರೆ ಇಸ್ಕೂಲು ಬಹು ದಿನಗಳ ಮುಂಚೆಯೆ ಎದ್ದು ಹೋಗುತ್ತಿತ್ತು. ಈ ವರುಷ ಅವರೆ ಸ್ವಂತ ಖರ್ಚಿನಿಂದ ಮಾಳಿಗೆಯನ್ನು ಮರಹಮತ್ತು ಮಾಡಿಸಿಕೊಡುವುದಾಗಿ ಹೇಳಿದ್ದರು. ಹಠಾತ್ತಾಗಿ ಏಕೊ ಎಲ್ಲ ಸಹಾಯವನ್ನೂ ನಿಲ್ಲಿಸಿ ಬಿಟ್ಟಿದ್ದಾರೆ; ಅದರ ಕಾರಣ ಯಾರೂ ಹೇಳಲಾರದೆ ಇದ್ದಾರೆ."

ರಮೇಶ ಕುತೂಹಲನಾಗಿ ರಮೆಯ ಸಂಬಂಧವಾದ ಇನ್ನೂ ಕೆಲವು ಪ್ರಶ್ನೆಗಳನ್ನು ಕೇಳಿದಮೇಲೆ ವಿಚಾರಿಸಿದನು. "ಅವರ ಒಬ್ಬ ತಮ್ಮ ಈ ಸ್ಕೂಲಿನಲ್ಲಿ ಓದುತ್ತಿಲ್ಲವೆ?"

ಮೇಷ್ಟರೆಂದರು. "ಜಯರಾಮ ತಾನೆ? ಓದದೆ ಏನು?"

ರಮೇಶನೆಂದನು. "ನಿಮಗೆ ಸ್ಕೂಲಿಗೆ ಹೊತ್ತಾಯಿತು; ಇವತ್ತು ತಾವು ಹೊರಡಿ, ನಾಳೆ, ನಾನು ತಮ್ಮಲ್ಲಿಗೇ ಬರುತ್ತೇನೆ."

"ಅಪ್ಪಣೆ ಸ್ವಾಮಿ" ಎಂದು ಹೆಡ್ಮಾಷ್ಟರು ಇನ್ನೊಂದಾವರ್ತಿ ರಮೇಶನಿಗೆ ಪ್ರಣಾಮಮಾಡಿ ಬಲವಂತದಿಂದ ಅವನ ಪಾದಧೂಳಿಯನ್ನು ತೆಗದು ತಲೆಗೆ ಮುಟ್ಟಿಸಿಕೊಂಡು ಬೀಳ್ಕೊಂಡರು.

೬

ವಿಶ್ವೇಶ್ವರಿಯು ಅಂದಿನ ಮಾತು ಅಂದೆ ಹತ್ತಾರು ಹಳ್ಳಿಗಳಿಗೆ ಹರಿದಿ ಹೋಯಿತು. ವೇಣಿ ಯಾರ ಮುಖದ ಮೇಲೆಯೂ ಬರಟು

ಮಾತುಗಳನ್ನು ಆಡಲಾರ; ಆದುದರಿಂದ ಹೋಗಿ ಅವನು ಚಿಕ್ಕಿಯನ್ನು ಕರೆತಂದಿದ್ದನು. ಅವಳು ನಿನ್ನೆಯೆ ತಕ್ಷಕನಹಲ್ಲು ಕಿರದೇನೊ ಭಾರಿಯೊಂದು ಅಶ್ವತ್ಥಮರವನ್ನು ಸುಟ್ಟು ಬೂದಿಮಾಡಿದ್ದಳು. ಇದೆ ಚಿಕ್ಕಿಯೆ ಅಂದು ಬೆಳಿಗ್ಗೆಯೂ ಮನೆಯಲ್ಲಿ ರೇಗಿ ಕಾರಿಹೋದ ವಿಷದಿಂದ ವಿಶ್ವೇಶ್ವರಿಯು ವೈ ರಕ್ತಮಾಂಸಗಳಿಂದ ಆದುದೆಂತಲೊ, ಕಟ್ಟಿಗೆಯಿಂದ ಆದುದಲ್ಲವೆಂತಲೊ ಅಥವಾ ಅವಳು ಈಗಾಗಿನ ಕಾಲದವಳಲ್ಲವೆಂತಲೊ ಸುಟ್ಟು ಬೂದಿಗುಡ್ಡೆಯಾಗಲಿಲ್ಲ. ಅಪಮಾನವನ್ನೆಲ್ಲ ಬಾಯಿಮುಚ್ಚಿಕೊಂಡು ಸಹಿಸಿಕೊಂಡಿದ್ದಳು. ಏಕೆಂದರೆ ಇದು ತನ್ನ ಮಗನ ಮೂಲಕವೆ ಉಂಟಾದುದು. ಇದು ಅವಳರಿಯದೆ ಇರಲಿಲ್ಲ. ಮಾತಿಗೆ ಮಾತು ಜವಾಬು ಕೊಡಹೋದೊಡನೆಯೆ ಈ ಹೆಂಗಳ ಬಾಯಿಂದ ಎತ್ತಿಕೊಳ್ಳುತ್ತಲೆ ಅವಳ ಸ್ವಂತ ಮಗನ ಮಾತೆ ಹೊರಬಿದ್ದು ಎಲ್ಲರಿಗೂ ತಿಳಿಯುವುದು ಮತ್ತು ಅದು ರಮೇಶನ ಕಿವಿಯವರೆಗೂ ಹೋಗುವುದು; ಈ ನಿದಾರುಣವಾದ ಲಜ್ಜೆಯಿಂದ ಮೊದಲಿಂದ ಕೊನೆಯವರೆಗೂ ಸೊಲ್ಲಿಲ್ಲದವಳಂತೆ ಕೂತಿದ್ದಳು. ಆದರೆ ಹಳ್ಳಿಗಾಡಿನಲ್ಲಿ ಮುಚ್ಚುಮರೆಗೆ ಅವಕಾಶವೆ ಇಲ್ಲ.

ರಮೇಶನಿಗೂ ತಿಳಿಯಿತು. ದೊಡ್ಡಮ್ಮನ ವಿಷಯವಾಗಿ ಸರಿಸುಮಾರಾಗಿ ಅವನಿಗೆ ಮೊದಲಿನಿಂದಲೂ ಮನಸ್ಸಿನಲ್ಲಿ ಗಾಬರಿ ಇದ್ದೆ ಇದ್ದಿತು, ಮತ್ತು ಇದರ ಕಾರಣವಾಗಿ ತಾಯಿ–ಮಗನಿಗೆ ಜಗಳವೊಂದಾಗುವುದೆಂಬ ಶಂಕೆಯೂ ಉಂಟಾಗಿತ್ತು. ಆದರೆ ವೇಣಿ ಹೊರಗಡೆಯವರನ್ನು ಮನೆಗೆ ಕರೆತಂದು ಸ್ವಂತ ತಾಯಿಗೆ ಹೀಗೆ ಮಾಡಿ ಅಪಮಾನಿಸಿ ಮುಟ್ಟಾ ಹಾಕಿದನೆಂಬುದು ಥಟ್ಟನೆ ಅವನಿಗೆ ಒಂದು ಬಗೆ ಸೃಷ್ಟಿಗೆ ವಿರೋಧವೆಂತ ಮನಸ್ಸಿಗೆ ಹೊಳೆಯಿತು ಮತ್ತು ಮುಂದಿನ ಕ್ಷಣದಲ್ಲಿಯೆ ಅವನ ರೋಷದ ಕಿಚ್ಚು ಬ್ರಹ್ಮರಂಧ್ರವನ್ನು ಭೇದಿಸಿಕೊಂಡು ಭಗ್ಗನೆದ್ದಿತು. ಆ ಮನೆಗೆ ಓಡಿಹೋಗಿ ಬಾಯಿಗೆ ಬಂದ ಹಾಗೆ ವೇಣಿಯನ್ನು ಬೈದುಬರಬೇಕೆಂದುಕೊಂಡನು; ಏಕೆಂದರೆ ತಾಯಿಗೆ ಹೀಗೆ ಅಪಮಾನ ಮಾಡಬಲ್ಲವನಿಗೆ ಎದರಪಮಾನಮಾಡುವುದರಲ್ಲಿ ಯಾವ ಬಗೆಯ ವಿಚಾರಗಿಚಾರ ಮಾಡುವ ಅವಶ್ಯವಿಲ್ಲ. ಆದರೆ ಪರಕ್ಷಣದಲ್ಲಿಯೆ ಮನಸ್ಸಿಗೆ

ಹೋಳೆಯಿತು, ಅದು ಸರಿಯಲ್ಲ. ಏಕಂದರೆ, ದೊಡ್ಡಮ್ಮನ ಅಪಮಾನದ ಮಾತ್ರೆಯೆ ಇದರಿಂದ ಹೆಚ್ಚೀತೆ ಹೊರತು ತಗ್ಗದು. ಅಂದು ದೀನಸಿಂದ ನಿನ್ನೆ ಮೇಷ್ಟರಿಂದ ಕೇಳಿ ರಮೆಯ ಮೇಲೆ ಭಾರಿಯೊಂದು ಶ್ರದ್ಧೆಯ ಭಾವವೆದ್ದಿತ್ತು. ನಾಲ್ಕು ಕಡೆಯಲ್ಲಿಯೂ ಕವಿದಿರುವ ಹೆಡ್ಡತನ ಮತ್ತು ಸಾವಿರಾರು ಬಗೆಯ ಹೊಲಸು ಕೀಳುದೆಸೆಗಳೊಳಗೆ ದೊಡ್ಡಮ್ಮನ ಹೃದಯದೊಂದೆ ತುಣುಕುಬಿಟ್ಟರೆ ಗ್ರಾಮವೆಲ್ಲಾ ಕಗ್ಗತ್ತಲೆಯಲ್ಲಿ ಮುಳಿಗಿಹೋಗಿದೆಯೆಂದು ಅವನು ಖಂಡಿತ ಮಾಡಿಕೊಂಡಿರುವಾಗ ಈ ಕಳ್ಳಂಬಿಯ ಮನೆಯ ಕಡೆ ನೋಡಿ ಕೊಂಚ ಬೆಳಕಿನ ಭಾಸ ಅದು ಎಷ್ಟೆ ಅಲ್ಪಸ್ವಲ್ಪವಾದರೂ ಅವನ ಮನಸ್ಸಿಗೆ ಬಹಳ ಆನಂದವನ್ನು ತಂದಿತ್ತು. ಆದರೆ ಇಂದಿನ ಈ ಘಟನೆಯಿಂದ ರಮೆಗೆ ವಿರೋಧವಾಗಿ ಅವನ ಮನಸ್ಸೆಲ್ಲಾ ಬೇಸರ ಜಿಗುಪ್ಸೆಗಳಿಂದ ತುಂಬಿಹೋಯಿತು. ವೇಣಿಯೊಡನೆ ಬೆರತು ಇವರಿಬ್ಬರೂ ಚಿಕ್ಕಿ ಮತ್ತು ಅವಳಕ್ಕನ ಮಗಳು ಈ ಅನ್ಯಾಯವನ್ನು ನಡೆಸಿದ್ದಾರೆ ಎಂಬುದರಲ್ಲಿ ಅವನಿಗೆ ರಾಗಿಯಷ್ಟು ಸಂಶಯವೂ ಇರಲಿಲ್ಲ. ಈ ಇಬ್ಬರು ಹೆಂಗಸರ ವಿರೋಧವಾಗಿ ಅವನೇನು ತಾನೆ ಮಾಡಲಾದೀತು ? ಮತ್ತು ವೇಣಿಗಾದರೂ ಶಾಸ್ತ್ರಿಯನ್ನು ವಶ ಮಾಡಿಕೊಡಬಹುದು ಎಂಬುವುಗಳನ್ನು ಬಗೆಬಗೆಯಾಗಿ ಆಲೋಚಿಸಿ ತೋಚದೆ ಇದ್ದನು.

ಇಂತಹ ಸಮಯದಲ್ಲಿ ಕಾಂಡವೊಂದು ಒದಗಿತು. ಕಳ್ಳಂಬಿಯವರ ಮತ್ತು ಘೋಷಗೇರಿಯವರ ಆಸ್ತಿಗಳಲ್ಲಿ ಇದುವರೆಗೂ ಭಾಗವಾಗದೆ ಕೆಲವು ಮುದ್ದಕದಲ್ಲಿಯೆ ಇದ್ದವು. ಆಚಾರ್ಯರ ಮನೆಯ ಹಿಂದುಗಡೆಯ 'ಗಡಿ' ಎಂಬ ಸೀಗೆ ಬೇಲಿಯೊಂದು ಈ ಬಗೆಯ ಮುದ್ದಕದ ಆಸ್ತಿ. ಬಂದಾನೊಂದು ಕಾಲದಲ್ಲಿ ಇದು ಬಲು ದೊಡ್ಡದೆ ಆಗಿತ್ತು; ವಿಚಾರಣೆಯಿಲ್ಲದೆ ಇದೊಂದು ಸಾಮಾನ್ಯ ಸಣ್ಣ ಪೊದೆಗೆ ಇಳಿದಿತ್ತು. ಒಳ್ಳೆಯ ಫಸಲೇನೂ ದೊರೆಯುತ್ತಿರಲಿಲ್ಲ, ಆದರೂ ಫಸಲು ಕೊಂಚವೇನೋ ಇರುತಿತ್ತು. ಭುಜಂಗಾಚಾರ್ಯರು ಮೇಲುಸಿರಿಕ್ಕುತ್ತಾ ಬಂದರು. ಹೊರಗಡೆಯ ವರಾಂಡದ ಪಕ್ಕದ ಕೋಣೆಯಲ್ಲಿ ಗೋಪಾಲ ಗುಮಾಸ್ತನು ಲೆಕ್ಕದ ಕಡತಗಳನ್ನು ಬರೆಯುತ್ತಿದ್ದನು. ಭುಜಂಗ ಬಡಬಡನೆ

ಎಂದನು. "ಸ್ವಾಮೀ ಜನಾಸ ಕಳುಹಿಸಲಿಲ್ಲವೆ? ಗಡಿಯಲ್ಲಿ ಕಾಯಿ ಕೆಡುವುತ್ತಾರೆಯಲ್ಲಾ."

ಗುಮಾಸ್ತೆ ಲೆಕ್ಕಣಿಕೆಯನ್ನು ಕಿವಿಸಂದಿನಲ್ಲಿ ಸಿಗಿಸಿ ಮೊಗವನ್ನೆತ್ತಿ ಕೇಳಿದನು. "ಕೆಡವಿಸುವರಾರು?"

"ಇನ್ನಾರು? ವೇಣೀರಾಯರ ಆಳು ನಿಂತಿದಾನೆ, ಕಳ್ಳಂಬಿಯವರ ಹಿಂದೂಸ್ಥಾನಿ ಬಂಟ ಅಲ್ಲಿದ್ದಾನೆ. ನೋಡಿದೆ ನಮ್ಮ ಕಡೆಯವರಾರೂ ಇಲ್ಲ. ಬೇಗನೆ ಕಳುಹಿಸಿಕೊಡಿ."

ಗೋಪಾಲ ಕೊಂಚವೂ ಚಂಚಲತೆಯನ್ನು ತೋರದೆ, ಎಂದನು "ನಮ್ಮ ರಾಯರು ಆಸೀಗೆಬೀಸಿಗೆ ಉಪಯೋಗಿಸೊಲ್ಲ."

"ಉಪಯೋಗಿಸದೆ ಹೋಗಲಿ, ಭಾಗವನ್ನಾದರೂ ಬರಮಾಡಿಕೊಳ್ಳಬೇಕಷ್ಟೆ?"

ಗೋಪಾಲನೆಂದನು. "ನಮಗೆ ನಾಲ್ಕು ಜನ ಬೇಕಷ್ಟೆ; ರಾಯರು ಬದುಕಿದ್ದರೆ ಅವರೂ ಅದೇ ಬೇಕೆನ್ನುತ್ತಿದ್ದರು. ಆದರೆ ರಮೇಶರಾಯರು ಬೇರೆ ಬಗೆ, ಎಂದು ಭುಜಂಗನ ಮೊಗದಲ್ಲಿ ಅಚ್ಚರಿಯ ಕುರುಹನ್ನು ಕಂಡು ಹಾಸ್ಯದಿಂದ ಕೊಂಚ ಶ್ಲೇಷವಾಡಿ ಎಂದನು, "ಇದಂತು ಹೀನವಾದೊಂದೆರಡು ಸಿಂಗಡಿಸಿದ ಸೀಗೆಕಾಯಿಗಳು, ಆಚಾರ್ರೆ. ಅಂದಿನ ದಿನ ಸಂತೆಯ ಬಡಗಲಲ್ಲಿನ ಆ ದೊಡ್ಡ ಹುಣಸೆ ಮರವನ್ನು ಕಡಿದು ಅವರಿಬ್ಬರೂ ಸಮಭಾಗ ಹಂಚಿಕೊಂಡರು, ನಮ್ಮ ಪಾಲಿಗೆ ಒಂದು ಬರಲನ್ನು ಸಹ ತೋರಲಿಲ್ಲ. ನಾನು ಓಡಿ ಬಂದು ರಾಯರಿಗೆ ತಿಳುಹಿಸಲು, ಒಂದು ಸಲ ಪುಸ್ತಕದೊಳಗಿಂದ ಮೊಗವನ್ನು ಮೇಲಕ್ಕೆತ್ತಿ ನಕ್ಕು ತಿರುಗೂ ಓದಿಗೆ ಕೂತರು. ಕೇಳಿದೆ, ರಾಯರೆ ಏನ ಮಾಡಲಿಯಂತ? ನಮ್ಮ ರಮೇಶರಾಯರಿಗೆ ತಿರಗೂ ಪುಸ್ತಕದಿಂದ ತಲೆಯತ್ತಲಿಕ್ಕೆ ಪುರಸತ್ತು ಸಿಗಲಿಲ್ಲ. ಪೀಡಿಸಿ ಗೋಳಾಡಿದ ಮೇಲೆ ಪುಸ್ತಕ್ಕನ್ನು ಮುಚ್ಚಿಟ್ಟು ಒಂದು ಸಲ ಆಕಳಿಸಿ ಎಂದರು, 'ಕಟ್ಟಿಗೆಯೆ! ಇನ್ನೇನು ಹುಣಸೆಮರಗಳಿಲ್ಲವೆ?! ಕೇಳು ಎಂದೆ, 'ಇರದೆ ಉಂಟೆ?! ಆದರೆ ನ್ಯಾಯತಃ ಭಾಗವನ್ನು ಬಿಡುವುದುಂಟೆ, ಇನ್ನೆಲ್ಲಿ ಈ ಪ್ರಕಾರ ಸಿಕ್ಕೀತು? ರಮೇಶರಾಯರು ತಿರುಗೂ ಪುಸ್ತಕವನ್ನು ತೆರೆದು

ಹಿಡಿದುಕೊಂಡು ಒಂದೈದು ನಿಮಿಷಗಳು ಸುಮ್ಮನಿದ್ದು ಹೇಳಿದರು. 'ಅದು ಸರಿ, ಆದರೆ ಒಂದೆರಡು ಹಾಳು ಕಟ್ಟಿಗೆ ಸೀಳಿಗೆ ಇನ್ನು ಜಗಳ ಕಾಯಲಿಕ್ಕೆ ಆದೀತೆ!"

ಭುಜಂಗ ಅತಿಶಯವಾಗಿ ಆಶ್ಚರಿಗೊಂಡು ಎಂದನು. "ಹೀಗುಂಟೆ!"

ಗೋಪಾಲ ಗುಮಾಸ್ತೆ ಅರಳುನಗೆ ಬೀರಿ ಒಂದೆರಡು ಸಲ ತಲೆದೂಗಿ ಎಂದನು. "ಚೆನ್ನಾಯಿತು, ಚೆನ್ನಾಯಿತು, ಆಚಾರ್ಯರೆ ಚೆನ್ನಾಯಿತು! ನಾನು ಅಂದೆ ತಿಳಿದುಕೊಂಡೆ, ಸುಳ್ಳೇತಕ್ಕೆ! ಚಿಕ್ಕ ಮನೆಯ ತಾಯಿ ಲಕ್ಷ್ಮಿ ತಿಮ್ಮಣ್ಣರಾಯರ ಜೊತೆಯಲ್ಲೆ ಮುಳುಗಿ ಕೊಂಡಳು!"

ಭುಜಂಗ ಕೊಂಚಹೊತ್ತು ಸುಮ್ಮನೆ ಇದ್ದು ಎಂದನು. "ಆದರೆ ಗಡಿ ನಮ್ಮ ಮನೆಯ ಹಿಂದೆಯೇ. ನಾನೊಂದು ಸಲ ತಿಳುಹಿಸಲೆಬೇಕು."

ಗೋಪಾಲನೆಂದನು. "ಒಳ್ಳೇದು ಆಚಾರ್ಯರೆ, ಒಂದು ಸಲ ತಿಳಿಸಿಬನ್ನಿ. ರಾತ್ರಿ ಹಗಲು ಬುಕ್ಕು ಹಿಡಿದು ಕೂತಿದ್ದು, ಇನ್ನು ಸರೀಕರಿಗೆ ಇಷ್ಟು ಬೆದರಿದರೆ ಆಸ್ತಿಪಾಸ್ತಿ ಇನ್ನು ಉಳಿಸಿಕೊಳ್ಳೋಕೆ ಆದೀತೆ? ಕಳ್ಳಂಬಿಯವರ ಮಗಳು ಹೆಂಗಸು; ಆಕೆ ಸಹ ಕೇಳಿ ನಕ್ಕು ನುಚ್ಚುನುರಿಯಾಗಿ ಗೋವಿಂದ ಗಂಗಾಳಿಯನ್ನು ಕರೆದೇನೊ ಕುಚೋದ್ಯ ಮಾಡಿದಳಂತೆ. 'ರಮೇಶರಾಯರಿಗೆ ಹೋಗಿ ಹೇಳು, ಒಂದು ತಿಂಗಳ ಸಂಬಳ ಗೊತ್ತುಮಾಡಿಕೊಳ್ಳಿ ತನಗೆ. ಆಸ್ತೀನೆಲ್ಲಾ ನನ್ನ ಕೈಗೆ ಬಿಟ್ಟು ಕೊಡಲಿ, ನಾನು ನಡಿಸುತ್ತೇನೆ ಎಂತ,' ಇನ್ನು ಇದಕ್ಕಿಂತ ಹೀನಾಯ ಉಂಟೆ?" ಎಂದು ಗೋಪಾಲನು ಸಿಟ್ಟಿನಿಂದಲೂ ದುಃಖದಿಂದಲೂ ತನ್ನ ಮುಖವನ್ನು ಸೊಟ್ಟಮಾಡಿಕೊಂಡು ತನ್ನ ಕೆಲಸಕ್ಕೆ ಕೂತನು.

ಮನೆಯಲ್ಲಿ ಹೆಂಗಸರಿಲ್ಲ. ಯಾವ ತಡೆಯಿಲ್ಲ. ಭುಜಂಗ ಒಳಗೆ ಬಂದು ನೋಡಿದನು; ರಮೇಶ ಎದುರಲ್ಲೆ ಕೈಸಾಲೆಯಲ್ಲಿ ಒಂದು ಮುರುಕಲು ಆರಾಮು ಕುರ್ಚಿಯಲ್ಲಿ ಬಿದ್ದಿದ್ದಾನೆ. ರಮೇಶನನ್ನು ಅವನ ಕರ್ತವ್ಯ-ಕೆಲಸಗಳಲ್ಲಿ ಹುರಿಗಟ್ಟಬೇಕೆಂದು ಆಸ್ತಿಯ ವಿಷಯ ವಾಗಿ ಸಾಧಾರಣ ಭೂಮಿಕೆಯೊಂದನ್ನು ಹೂಡಿ ಮಾತೆತ್ತಿದೊಡನೆಯೆ

ರಮೇಶ ಬಂದೂಕಿನ ಗೋಲಿಯನ್ನು ಕಂಡ ನಿದ್ರೆಗೈಯುತ್ತಿದ್ದ ಹುಲಿ-ಯಂತೆ ಗರ್ಜನೆ ಮಾಡಿದ್ದು ಎಂದನು. "ಏನು ದಿನವಹಿ ಚಾಲಕೊ! ಭಜುಯಾ!"

ಅವನ ಈ ಅಭಾವನೀಯವಾದ ಸಂಪೂರ್ಣ ಅಪ್ರತ್ಯಾಸಿತ ಉಗ್ರತೆಯಿಂದ ಭುಜಂಗ ದಿಗಿಲಿನಿಂದ ನಡುಗಿದನು; ಈ ಚಾಲಾಕು ಯಾರದು, ಅದು ಅವನಿಗೆ ತಿಳಿಯದೆ ಹೋಯಿತು! ಭಜುಯ ರಮೇಶನ ಗೊರಕ್ಪುರದ ಜಿಲ್ಲೆ (ನೇಪಾಳದ ಎಲ್ಲೆಯ ಹತ್ತಿರ ಸಂಯುಕ್ತ ಸಂಸ್ಥಾನದ ಗೋರಕ್ಪ (ಕ್ಷ) ನಾಥ ಮತ್ತು ಬುದ್ಧದೇವನ ಜನ್ಮ ಚರಿತ್ರೆಯಲ್ಲಿ ಪುಣ್ಯಮಯವೆಂದು ಪ್ರಸಿದ್ಧಿಗೊಂಡು ಗೋರಕ್ಪರೆಂಬ ನೇಪಾಳದ ಜನರಿಗೆ ಹೆಸರಿತ್ತ ಜಿಲ್ಲೆ) ಆಳೊಬ್ಬ. ಅತ್ಯಂತ ಬಲವಂತ ಮತ್ತು ನಂಬಿಕೆಯವನು. ಲಠ್ಠಾಲಠ್ಠಿ ಕಸರತ್ತಿನಲ್ಲಿ ಅವನು ರಮೇಶನ ಶಿಷ್ಯ; ತನ್ನ ಕೈ ತಯಾರಾಗಿರಿಸಿಕೊಳ್ಳಲು, ರಮೇಶ ತಾನೆ ಕಲಿತು ಇವನಿಗೆ ಕಲಿಸಿದ್ದನು. ಭಜುಯ ಬಂದೊಡನೆಯೆ ರಮೇಶ ಅವನಿಗೆ ಕಟ್ಟಪ್ಪಣೆ ಮಾಡಿಬಿಟ್ಟನು. ಕಾಯಿಯನ್ನೆಲ್ಲಾ ಕಿತ್ತು ತರುವದು, ಅದಾಗದೆ ಹೋದರೆ ಕೊಸೆಪಕ್ಷ ಒಂದು ಸಾಲು ಹಲ್ಲು ಮುರಿದು ಬರಬೇಕು. ಭಜುಯನಿಗೆ ಬೇಕಾದದ್ದೂ ಇದೆ. ಅವನು ತನ್ನ ಎಣ್ಣೆಯಲ್ಲಿ ಗಡಸು ಮಾಡಿದ ತನ್ನ ಲಠ್ಠಿಯನ್ನು ತರಲು ಸದ್ದುಮಾಡದೆ ಕೋಣೆಯೊಳಗೆ ಹೊಕ್ಕನು. ನಡತೆಯನ್ನು ನೋಡಿ ಭುಜಂಗ ಭಯ ಬಿದ್ದು ನಡುಗಿ ಹೋದನು. ಅವನು ಈ ದೇಶದ ಎಣ್ಣೆನೀರಿನ ಮನುಷ್ಯ. ಕೂಗುವುದು ಕಿರಿಚುವುದು ಇವಕ್ಕೆ ಭಯಪಡನು; ಆದರೆ ಇವನೊ ಅತಿ ಧೃಡಕಾಯ ಹಿಂದೂಸ್ತಾನಿ, ತುಂಡಾಳು ಮಾತಾಡಲಿಲ್ಲ, ಕೊರಳನ್ನೊಂದು ಸಲ ಸುಮ್ಮನೆಯಲುಗಿಸಿ ಹೊರಟು ಹೋದನು; ಈ ದುಶ್ಚಿಂತೆಯಿಂದ ಬಾಯಿ ಗಂಟಲುತನಕ ಒಣಗಿಕೊಂಡಿತು, ಅವನ ನೆನಪಿಗೆ ಬಂತು, ಕಡಿಯೋನಾಯಿ ಬೊಗಳುವುದಿಲ್ಲ, ಅದು ನೆಟ್ಟಗೆ ಕಡಿದು ಬಿಡುತ್ತೆ. ಭುಜಂಗ ನಿಜವಾಗಿಯೂ ರಮೇಶನ ಒಳಿತನ್ನು ಕೋರುವನಾದುದರಿಂದಲೆ ಅವನು ತಿಳುಹಿಸಲು ಬಂದನು. ರಾಶಿ ಮಾಡುತ್ತಿರುವಲ್ಲಿಗೆ ಹೋಗಿ ಕಕಾರ ಮಕಾರ ಎರಡು ಮಾತುಗಳು ಕಿರಿಚಿ ಎರಡು ಒಳ್ಳೇದು ಕೆಟ್ಟದ್ದು ಕಾಯಿಗಳನ್ನು ತಂದು

ಹಾಕಿಕೊಂಡರೇ ಆಯಿತೆಂದೂ, ತಾನೂ ಇದರಲ್ಲಿ ಸಹಾಯ ಮಾಡೇನೆಂತಲೂ ಅಂದುಕೊಂಡಿದ್ದನು. ಆದರೆ ಎಲ್ಲಿ, ಅದೇನೂ ಆಗಲಿಲ್ಲ. ಬೈಗಳ ಗೀಗಳ ದಾರಿಯನ್ನೆ ಹಿಡಿಯಲಿಲ್ಲ. ಯಜಮಾನ ಬರಿಯೊಂದು ಹುಂಕಾರ ಹಾಕಿದ,ಆಳು ತುಟಿ ಸಹ ಅಲುಗಿಸಲಿಲ್ಲ, ಲಕ್ಷಿಯನ್ನು ತರಲು ಹೋದ. ಭುಜಂಗ ಬಡವ; ಕ್ರಿಮಿನಲ್ಲಿಗೆ ಸಿಕ್ಕಿಕೊಳ್ಳುವ ಸಾಹಸ ಅವನಿಗಿಲ್ಲ, ಇಚ್ಛೆಯೂ ಇಲ್ಲ. ತುಸು ಹೊತ್ತಾದೊಡನೆಯೆ ಉದ್ದನ್ನ ಬೊಂಬಿನ ಕೋಲನ್ನು ಕೈಲಿ ಹಿಡಿದು ಭಜು ಮನೆಯಿಂದ ಹೊರಗೆ ಹೊರಟ. ಮತ್ತು ಅದೆ ಲಕ್ಷಿಯನ್ನು ತಲೆಗೆ ಮುಟ್ಟಿಸಿ ದೂರದಿಂದಲೆ ರಮೇಶನಿಗೆ ನಮಸ್ಕಾರ ಮಾಡಿ ಹೊರಡಲು ಹೆಜ್ಜೆಯನ್ನಿಕ್ಕುತಲೆ, ಭುಜಂಗ ಅಕಸ್ಮಾತ್ತಾಗಿ ಅಳುತ್ತಾ ರಮೇಶನ ಕೈಗಳೆರಡನ್ನೂ ಬಿಗಿದು ಹಿಡಿದನು. "ಎಲೊ ಭಜುಯಾ, ಹೋಗಬೇಡ. ಅಪ್ಪಾ ರಮೇಶ, ಕಾಪಾಡಬೇಕು, ನಾನು ಬಡವ, ಒಂದು ಗಳಿಗೆ ಸಹ ಬದುಕಿರಲಾರೆ...."

ರಮೇಶ ಬೇಸರಗೊಂಡು ಕೈಬಿಡಿಸಿಕೊಂಡನು. ಅವನ ವಿಸ್ಮಯಕ್ಕೆ ಪಾರವೇ ಇಲ್ಲ. ಭಜುಯ ಬೆಪ್ಪಾಗಿ ಹಿಂದಿರುಗಿ ನಿಂತನು. ಭುಜಂಗ ಅಳುವ ದನಿಯಲ್ಲಿ ಹೇಳಿದನು. "ಈ ಮಾತು ಮುಚ್ಚುಮರೆಯಾಗಿ ಇರುವುದಿಲ್ಲ, ರಾಯ! ವೇಣೀರಾಯರ ಕೋಪಕ್ಕೆ ಸಿಕ್ಕಿದೆನೆಂದರೆ ಒಂದು ದಿನ ಸಹ ಬದುಕಲಾರೆ. ನನ್ನ ಮನೆ ಮಠ (ಮಠ= ಹೊಲ, ಗದ್ದೆ, ಬೈಲು) ಪರಿಯಂತ ಸುಟ್ಟು ಬೂದಿಯಾಗಿ ಹೋಗುವುದು, ಬ್ರಹ್ಮ ವಿಷ್ಣು ಮಹೇಶ್ವರರು ಬಂದರೂ ಕಾಪಾಡಲಾರರು."

ರಮೇಶ ಕೊರಳ ಬಗ್ಗಿಸಿ ಸ್ತಬ್ಧನಾಗಿ ಕೂತಿದ್ದನು. ಗಲಭೆಯನ್ನು ಕೇಳಿ ಕಡತಗಳನ್ನು ಬಿಸುಟು ಬಂದಿದ್ದ ಗೋಪಾಲನು "ಮಾತು ನಿಜ, ರಾಯರೆ," ಎಂದನು.

ರಮೇಶ ಅದಕ್ಕೂ ಉತ್ತರವೀಯಲಿಲ್ಲ; ಸುಮ್ಮನೆ ಕೈಯಾಡಿಸಿ ಭಜುಯನಿಗೆ ತನ್ನ ಕೆಲಸಕ್ಕೆ ಹೋಗುವಂತೆ ಅಪ್ಪಣೆಯಿತ್ತು, ಸದ್ದು ಮಾಡದೆ ತಾನು ಮನೆಯೊಳಕ್ಕೆ ಎದ್ದು ಹೋದನು. ಅವನ ಹೃದಯದಲ್ಲಿ ಈ ಭುಜಂಗನ ಅಪಾರವಾದ ಭೀತಿ ಮತ್ತು ಕಾತರೋಕ್ತಿ

ಹುಟ್ಟಿಸಿದ ಭಯಂಕರ ಬಿರುಗಾಳಿಯ ಹೊಡೆತವನ್ನು ಅಂತರ್ಯಾಮಿಯೊಬ್ಬನೆ ಬಲ್ಲ.

೭

" ಎಲೊ, ಜಯ, ಆಡುತಾ ಇದ್ದೀಯೆ, ಸ್ಕೂಲಿಗೆ ಹೋಗಲಿಲ್ಲವೇನೊ ? "

" ನಮಗೆ ಇವತ್ತೂ ನಾಳೆ ಎರಡುದಿನ ರಜಾ ಅಕ್ಕ ! "

ಚಿಕ್ಕೀ ಕಿವಿಗೆ ಬಿದ್ದು ಕುತ್ಸಿತವಾದ ಮೊಗವನ್ನು ಇನ್ನೂ ವಕ್ರ ಮಾಡಿ, " ಆ ಸುಡಗಾಡು ಸ್ಕೂಲಿಗೆ ತಿಂಗಳಿಗೆ ಹದಿನೈದು ದಿನ ರಜ. ನೀನು ಅದಕ್ಕೇನೆ ಸುಮ್ಮನೆ ಹಣ ಸುರಿತಾ ಇದ್ದಿ, ನಾನಾಗಿದ್ದರೆ ಬೆಂಕಿ ಇಟ್ಟುಬಿಡುತ್ತಾ ಇದ್ದೆ, " ಎಂದು ತನ್ನ ಕೆಲಸಕ್ಕೆ ಹೊರಟು ಹೋದಳು. ಹದಿನಾರಾಣೆ ಸುಳ್ಳು ಮಾತಿನವಳೆಂದು ಚಿಕ್ಕಿಯ ಅಪಯಶಸ್ಸನ್ನು ಹರಡುತ್ತಿದ್ದವರು ತಪ್ಪುಮಾಡುತಿದ್ದರು. ಹೀಗೆ ಒಂದು ಅರ್ಧ ನಿಜವನ್ನು ಹೇಳುವುದೂ ಅವಳಿಂದ ಆಗುತ್ತಿತ್ತು, ಮತ್ತು ಬೇಕಾದರೆಹೇಳುವುದಕ್ಕೂ ಅವಳು ಹಿಂದೇಟು ಹಾಕುತ್ತಿರಲಿಲ್ಲ. ರಮೆ ತಮ್ಮನನ್ನು ಹತ್ತಿರಕ್ಕೆ ಎಳೆದುಕೊಂಡು ಮೆಲ್ಲನೆ ಕೇಳಿದಳು. " ರಜಾ ಏಕೊ ಜಯಾ ? '

ಜಯ ಅಕ್ಕನ ಮಡಿಲನ್ನು ತಿಕ್ಕಿ ನಿಂತು ಎಂದನು. " ನಮ್ಮ ಇಸ್ಕೂಲಿನ ಮಾಳಿಗೆ ಸರಿಮಾಡುತ್ತಿದಾರೆ ಅಂದರೆ ! ಆ ಮೇಲೆ ಸುಣ್ಣ ಹೊಡೀತಾರಂತೆ, ಎಷ್ಟೊ ಬುಕ್ಕುಗಳು ಬಂದಿವೆ, ನಾಲಕ್ಕೈದು ಕುರ್ಚಿ, ಟೇಬಲ್ಲು, ಒಂದು ಅಲಮಾರಿ, ಒಂದು ದೊಡ್ಡ ಗಡಿಯಾರ ಒಂದು ಸಲ ನೀನೂ ಬಂದು ನೋಡಿಕೊಂಡು ಬರಬಾರದೆ ಅಕ್ಕ ? "

ರಮೆ ಅತ್ಯಂತ ಆಶ್ಚರ್ಯಪಟ್ಟು ಎಂದಳು, " ಏನಂತೀಯೋ ನೀನು ? "

" ಹೌದಕ್ಕ ಅಂದರೆ, ಎಲ್ಲಾ ನಿಜ. ರಮೇಶರಾಯರು ಬಂದಿದಾರಷ್ಟೆ ಅವರು ಎಲ್ಲಾ ಮಾಡಿಸಿಕೊಡುತಾರೆ, " ಎಂದು ಇನ್ನೂ ಏನನ್ನೊ ಹೇಳಲಿದ್ದನು, ಆದರೆ ಎದುರಿಗೆ ಚಿಕ್ಕಿ ಬರುವುದನ್ನು ಕಂಡು ರಮೆ

ದಡಬಡನೆ ಅವನನ್ನು ಕರೆದುಕೊಂಡು ತನ್ನ ಕೋಣೆಯೊಳಕ್ಕೆ ಹೊರಟು ಹೋದಳು. ಆದರಿಸಿ ಹತ್ತಿರ ಕೂಡಿಸಿಕೊಂಡು ಪ್ರಶ್ನೆ ಹಾಕಿ ಹಾಕಿ ಈ ಚಿಕ್ಕ ತಮ್ಮನ ಬಾಯಿಂದ ಅವಳು ರಮೇಶ ಮತ್ತು ಸ್ಕೂಲ ವಿಷಯದಲ್ಲಿ ಅನೇಕ ಕಥ್ಯಗಳನ್ನು ಸಂಗ್ರಹಿಸಿದಳು; ದಿನವಹಿ ಒಂದೆರಡು ಘಂಟೆಯಂತೆ ಅವನೂ ಸಹ ಪಾಠ ಹೇಳಿ ಹೋಗುತ್ತಾನೆ ಎನ್ನುವದನ್ನೂ ಕೇಳಿದಳು. ಥಟ್ಟನೆ ಪ್ರಶ್ನೆ ಹಾಕಿದಳು. "ಹೌದೊ ಜಯ ನಿನ್ನನ್ನು ಅವರು ಗುರ್ತು ಹಿಡಿದರೇನೊ?"

ಬಾಲಕ ಗರ್ವದಿಂದ ತಲೆಯಾಡಿಸಿ ಎಂದನು. "ಹೂ,"

"ನೀನು ಅವರನ್ನು ಏನಂತ ಕರೆಯುತ್ತೀ?"

ಈ ಸಲ ಜಯ ಸಿಕ್ಕಿಗೆ ಬಿದ್ದ. ಏಕಂದರೆ ಇಷ್ಟೊಂದು ಹತ್ತಿರಿನ ಸೌಭಾಗ್ಯ ಮತ್ತು ಸಾಹಸ ಇನ್ನಿದುವರೆಗೂ ಅವನಿಗಿಲ್ಲ. ಅವರು ಬಂದೊಡನೆಯೆ ದೋರ್ದಂಡ ಪ್ರತಾಪ ಹೆಡ್ಮಾಷ್ಟರವರಿಗೂ ತಟಸ್ಥರಾಗಿ ನಿಲ್ಲುವ ಬಗೆಯಿಂದ ಛಾತ್ರರರ ಮುಹಲುಗಳಲ್ಲಿ ಭಯಬೆರಗುಗಳ ಕೊನೆಯೆ ಇಲ್ಲ. ಕರೆಯುವುದು ದೂರದ ಮಾತು, ಭರವಸೆ ಪಡೆದು ಇವರಾರೂ ಅವರ ಮೊಗದಕಡೆ ಸಹ ನೆಟ್ಟಗೆ ನೋಡಲಾರರು. ಆದರೆ ಅಕ್ಕನ ಮುಂದೆ ಒಪ್ಪಿಕೊಳ್ಳುವುದು ಸಹಜವಲ್ಲ. ಮೇಷ್ಟರುಗಳು ಚಿಕ್ಕರಾಯ ರೆಂದು ಕರೆಯುವುದನ್ನು ಹುಡುಗರು ಕೇಳಿದ್ದರು. ಬುದ್ಧಿ ವೆಚ್ಚಮಾಡಿ ಅದನ್ನೆ ಅವನು ಹೇಳಿದನು. "ನಾವೂ ಚಿಕ್ಕರಾಯರು ಅಂತೀವೆ."

ಆದರೆ ಅವನ ಮುಖಭಾವವನ್ನು ನೋಡಿ ರಮೆಗೆ ತಿಳಿಯಬೇಕಾದುದೇನೂ ಉಳಿದಿರಲಿಲ್ಲ. ಆ ತಮ್ಮನನ್ನು ಇನ್ನೂ ಹತ್ತಿರ ಎದೆಗೆಳಪ್ಪಿ ಹಾಸ್ಯವಾಗಿ ಎಂದು. "ಚಿಕ್ಕರಾಯರುಂಬೇನೊ! ಅವರು ನಿನಗೆ ಅಣ್ಣ ಕಾಣೊ. ವೇಣಿರಾಯರನ್ನು ದೊಡ್ಡಣ್ಣ ಅಂತೀಯೊ ಇಲ್ಲವೊ ಹಾಗೆ ಇವರನ್ನು ಚಿಕ್ಕಣ್ಣ ಅಂತ ಕರೀಲಾರಿಯಾ?"

ಬಾಲಕ ವಿಸ್ಮಯಾನಂದಗಳಿಂದ ಚಂಚಲನಾಗಿ ಎದ್ದು, "ನಮ್ಮಣ್ಣನೆ ಅವರು? ನಿಜವೇನೆ ಅಕ್ಕ?"

"ಹೌದು ಕಾಣೊ" ಎಂದು ರಮೆ ತಿರಗೂ ತುಸನಕ್ಕಳು. ಇನ್ನು ಜಯನನ್ನು ಹಿಡಿದಿರಲು ಕಷ್ಟವಾಯಿತು. ವರ್ತಮಾನವನ್ನು

ಸಂಗಾತಿಗಳಲ್ಲಿ ಹರಡಿದರೇನೆ ಅವನು ಬದುಕ್ಯಾನು. ಆದರೆ ಇಸ್ಕೂಲ ಮುಚ್ಚಿದೆ. ಈ ಎರಡು ದಿನಗಳು ಕಳೆಯುವತನಕ ಧೈರ್ಯವಿಡಿದಿರಲೇ ಬೇಕು. ಆದರೆ ಈ ನೆರೆಯಲ್ಲೇ ಇರುವ ಹುಡುಗರಿಗೆಲ್ಲಾ ಅವನು ವರ್ತಮಾನಕೊಡದೆ ಇರುವುದು ಹೇಗೆ? ಅವನು ಇನ್ನೊಂದು ಸಲ ಚಟಪಟಗುಟ್ಟಿ ಎಂದನು. "ಇನ್ನು ಹೋಗತೇನಕ್ಕಾ ?

"ಇಷ್ಟು ಹೊತ್ತಿನಲ್ಲಿ ಎಲ್ಲಿಗೆ ಹೋಗುತ್ತೀಯೊ ?" ಎಂದು ರಮೆ ಅವನನ್ನು ಹಿಡಿದಿಟ್ಟಳು. ಹೋಗಲಾಗದೆ ಜಯ ಸಪ್ಪೆ ಮೊಗದಿಂದ ಸುಮ್ಮನೆ ಕೊಂಚ ಹೊತ್ತು ಇದ್ದು ಎಂದನು. "ಇಷ್ಟುದಿನ ಅವರೆಲ್ಲಿ ದ್ದರು ಅಕ್ಕಾ ?"

ರಮೆ ಮುದ್ದುಗರೆಯುವ ದನಿಯಲ್ಲಿ ಎಂದಳು. "ಇಷ್ಟುದಿನ ಓದುಬರಹ ಕಲಿಯೋಕೆ ಹೋಗಿ ಹೊರದೇಶದಲ್ಲಿದ್ದರು. ದೊಡ್ಡವನಾದ ಮೇಲೆ ನೀನೂ ಹೊರದೇಶಕ್ಕೆ ಹೋಗಿರಬೇಕಾಗುತ್ತೆ. ನನ್ನ ಬಿಟ್ಟು ಇರತೀಯಾ, ಜಯಾ ?" ಎಂದು ತಮ್ಮನನ್ನು ಅವಳಿನ್ನೊಂದಾವರ್ತಿ ಎದೆಗಪ್ಪಿದಳು. ಬಾಲಕನಾದರೂ ಅವನು ತನ್ನ ಅಕ್ಕನ ದನಿಯಲ್ಲಿ ಏನೋ ಒಂದು ಬಗೆಯ ಬದಲಾವಣೆಯನ್ನು ಅನುಭವಿಸಿ ವಿಸ್ಮಿತಭಾವದಲ್ಲಿ ಮೊಗವನ್ನು ನೋಡುತ್ತಲಿದ್ದನು. ಏಕೆಂದರೆ ರಮೆ ತನ್ನ ಈ ತಮ್ಮನನ್ನು ಪ್ರಾಣಪದಕದಂತೆ ಪ್ರೀತಿಸುತ್ತಿದ್ದರೂ ಅವಳ ಮಾತು ನಡವಳಿಯ ಲ್ಲಿಯೂ ಈ ಬಗೆಯ ಸೆಳತ ಉಬ್ಬಳಿಕೆಗಳು ಹೊರಬಿದ್ದುದೆಂದೂ ಇಲ್ಲ.

ಜಯ ಕೇಳಿದನು. "ಚಿಕ್ಕಣ್ಣ ಓದನ್ನೆಲ್ಲಾ ಮುಗಿಸಿಬಿಟ್ಟಿ ದಾನೆಯೆ, ಅಕ್ಕ ?"

ರಮೆ ಕೋಮಲದನಿಯಲ್ಲಿ ಉತ್ತರವಿತ್ತಳು. "ಹೌದು, ಮಗು, ಅವರ ಓದೆಲ್ಲಾ ಸಾಂಗವಾಗಿದೆ !"

ಜಯ ತಿರಗೂ ಕೇಳಿದನು. "ನಿನಗೆ ತಿಳಿದದ್ದು ಹೇಗೆ ?"

ಪ್ರತ್ಯುತ್ತರಕ್ಕೆ ರಮೆ ಬರಿಯದೊಂದು ನಿಟ್ಟುಸಿರು ಹೊಯ್ದು ತಲೆಯಲ್ಲಾಡಿಸಿದಳು. ವಸ್ತುತಃ ಈ ವಿಷಯದಲ್ಲಿ ಅವಳಾಗಲಿ ಆ ಹಳ್ಳಿಯವರಾಗಲಿ ಯಾರೂ ಏನೂ ಅರಿಯರು. ಅವಳ ಅನುಮಾನ ಸತ್ಯವಿರಬೇಕೆಂತಲ್ಲ; ಇತರ ಮಕ್ಕಳ ಓದುಬರಹಕ್ಕಾಗಿ ಈ ಅತ್ಯಲ್ಪ

ಕಾಲದಲ್ಲಿ ಈ ಬಗೆಯಲ್ಲಿ ಹೇಗೂ ಎಚ್ಚರಗೊಂಡು ತಾನು ಮೂರ್ಖಳಲ್ಲೆಂದು ಅವಳಿಗೆ ತೋಚಿತು.

ಜಯ ಈ ವಿಷಯದಲ್ಲಿ ಇನ್ನು ಜೇರಿಸಲಿಲ್ಲ. ಕಾರಣ ಇಷ್ಟರಲ್ಲಿ ಹಠಾತ್ತಾಗಿ ಅವನ ತಲೆಯಲ್ಲಿ ಇನ್ನೊಂದು ಪ್ರಶ್ನೆ ತಲೆಹಾಕಲು ಚಟ್ಟನೆ ಕೇಳಿಬಿಟ್ಟನು. ಒಳ್ಳೇದಕ್ಕಾ, ಚಿಕ್ಕಣ್ಣ ಏಕೆ ನಮ್ಮ ಮನೆಗೆ ಬರೋಲ್ಲ? ದೊಡ್ಡಣ್ಣನಂತೂ ದಿನವಹಿ ಬರುತ್ತಾನೆ."

ಪ್ರಶ್ನೆಯಿಂದ ಗುರಿಯಿಟ್ಟಂತೆ ಆಕಸ್ಮಿಕವಾಗಿ ಬೇನೆಯೊಂದು ರಮೆಯ ಅಂಗಗಳಲ್ಲೆಲ್ಲಾ ಮಿಂಚಿನ ವೇಗದಿಂದ ಹರಿದುಹೋಯಿತು. ಆದರೂ ನಕ್ಕು ಎಂದಳು. "ಅವರನ್ನ ಕರೆದುಕೊಂಡು ಬರಲಾರೆಯಾ?"

"ಈಗಲೆ ಹೋಗುತ್ತೇನಕ್ಕಾ!" ಎಂದು ತಕ್ಷಣ ಜಯ ಎದ್ದು ನಿಂತನು.

"ಎಲಯಲಾ ನೀನೆಂತಹ ಹುಚ್ಚು ಹುಡುಗ ಕಾಣೊ" ಎಂದು ರಮೆ ಎನೆಯಿಕ್ಕುವುದರಲ್ಲಿ ಭಯದಿಂದದರುತ್ತಿರುವ ತೋಳುಗಳೆರಡನ್ನೂ ಚಾಚಿ ಅವನನ್ನು ಬಿಗಿದು ಹಿಡಿದಳು. "ಜೋಕೆ ಜಯ, ಎಂದಿಗೂ ಲಂಥ ಕೆಲಸ ಮಾಡೀಯೆ, ತಮ್ಮ ಎಂದೆಂದಿಗೂ ಬೇಡ!" ಎಂದು ತಮ್ಮನನ್ನು ಅವಳು ಪ್ರಾಣಕ್ಕೆ ಹೊಣೆಮಾಡಿದ ಬಲದಿಂದ ಎದೆಗಪ್ಪಿ ಹಿಡಿದುಕೊಂಡಳು. ಅವಳ ಅತಿವೇಗವಾಗಿ ಬಡಿದುಕೊಳ್ಳುತ್ತಿರುವ ಎದೆಯ ಡವಡವವನ್ನು ಸ್ಪಷ್ಟವಾಗನುಭವಿಸಿ ಜಯ ಬಾಲಕನಾದರೂ ಈ ಸಲ ಬಹಳ ಬೆರಗಾಗಿ ಮೊಗವನ್ನು ನೋಡುತ್ತಾ ಸುಮ್ಮನಿದ್ದನು. ಒಂದು, ಹೀಗೆ ತನ್ನ ಹಿಡಿದದ್ದು ಇದಕ್ಕೆ ಮೊದಲೆಂದೂ ಅರಿಯ, ಅದಲ್ಲದೆ, ಚಿಕ್ಕರಾಯರನ್ನು ಚಿಕ್ಕಣ್ಣನೆಂದು ತಿಳಿದು ಅವನ ಮನಸ್ಸು ಸಂಪೂರ್ಣವಾಗಿ ಬೇರೆ ಹಾದಿಯಲ್ಲಿ ಹೋಗುತ್ತಿರುವಾಗ ಅಕ್ಕನು ಏತಕ್ಕೆ ಅವನ ವಿಷಯವಾಗಿ ಇಷ್ಟು ದಿಗಲು ಜೇಳುತ್ತಾಳೆ ಎಂಬುದನ್ನು ಯೋಚಿಸಿ ಅವನು ಸುತರಾಂ ತಿಳಯಲಾರದೆ ಹೋದನು. ಇಂತಹ ಹೊತ್ತಿನಲ್ಲಿ ಚಿಕ್ಕಿಯ ಕೀರಲು ಕೂಗು ಕಿವಿಗೆ ಬಿದ್ದೊಡನೆ ರಮೆ ಜಯನನ್ನು ಬಿಟ್ಟು ದಡಬಡನೆ ಎದ್ದು ನಿಂತಳು. ಅಷ್ಟರಲ್ಲಿ ಅವಳೆ ಬಂದು ಬಾಗಿಲಲ್ಲಿ ನಿಂತು ಎಂದಳು. "ನಾನು ನದೀಘಟ್ಟಕ್ಕೆ ಏಕೆಯೋಕೆ ಹೋಗಿದ್ದೀಯಂತಿದ್ದೆ,

ಏಕಾದಸಿಯಾದರೆ ತಾನೆ ಇಷ್ಟೊತ್ತಾದರೂ ತಲೆಮೇಲೆ ಒಂದು ತಂಬಿಗೆ ನೀರು ಸುರಿಕೊಬೇಕಿಲ್ಲವೆ? ಮೊಗ ಒಣಗಿ ಮಸಿಯಾಗಿದೆಯಲ್ಲಾ.''

ರಮೆ ಬಲವಂತಮಾಡಿ ಕೊಂಚ ನಕ್ಕು ಎಂದಳು. "ನೀನು ಹೋಗು, ಚಿಕ್ಕಿ, ನಾನು ಇದೊ ಬರುತ್ತೇನೆ''

"ಬರೋದಿನ್ನಾವಾಗ? ಹೊರಕ್ಕೆ ಬಂದು ನೋಡು, ವೇಣೀಯವರು ನೀಗೆಕಾಯಿ ಹಂಚೋಕೆ ಬಂದಿದಾರೆ.'' ನೀಗೇಕಾಯಿ ಹೆಸರೆತ್ತುತ್ತಲೆ ಜಯ ಹಾರಿ ಓಡಿದನು. ಚಿಕ್ಕಿಯ ಕಣ್ಣಿಗೆ ಬೀಳದಂತೆ ಮೊಗವನ್ನು ಸೆರಗಿಂದ ಬಲವಾಗಿ ಒರಸಿಕೊಂಡು ರಮೆ ಅವಳ ಹಿಂದೆ ಹೊರಗೆ ಬಂದು ನಿಂತಳು. ಅಂಗಳದಲ್ಲಿ ದೊಡ್ಡ ಕೋಲಾಹಲ. ನೀಗೇಕಾಯಿ ಅಷ್ಟೇನೂ ಕಮ್ಮಿ ಸಿಕ್ಕಿಲ್ಲ. ಒಂದು ರಾಸಿಯಾಗಿದೆ. ಹಂಚುವುದಕ್ಕೆ ವೇಣಿ ತಾನೆ ಹಾಜರಾಗಿದ್ದಾನೆ. ಹಳ್ಳಿಯ ಹುಡುಗ ಹುಡುಗಿಯರೆಲ್ಲಾ ಗುಂಪು ಗುಂಪಾಗಿ ಬಂದು ನಿಂತು ಗಲಭೆ ಮಾಡುತ್ತಿದ್ದಾರೆ.

ಕೆಮ್ಮಿನ ಸದ್ದು ಕೇಳಿಸಿತು. ಮರುಗಳಿಗೆಯಲ್ಲಿಯೆ 'ಎಷ್ಟು ನೀಗೇ ಕಾಯಿ ಬಿತ್ತು, ವೇಣಿ'' ಎಂದು ಕೋಲೂರಿಕೊಂಡು ಧರ್ಮದಾಸನು ಹೊಕ್ಕನು.

"ಹಾಗೆಲ್ಲಿ ಬಿತ್ತು'' ಎಂದು ವೇಣಿ ಮೊಗವನ್ನು ಸಿಂಗಡಿಸಿದನು. ತೋಟಿಯನ್ನು ಕರೆದು, " ಇನ್ನೇಕೆ ತಡಮಾಡುತ್ತೀಯೊ? ಬೇಗಬೇಗನೆ ಎರಡುಪಾಲು ಮಾಡಿ ಬಿಡು.''

ತೋಟಿ ಪಾಲು ಮಾಡಲು ಮೊದಲಿಟ್ಟನು.

"ಅದೇನೆ ಅದು ರಮೆ? ಬಹಳ ದಿನದಿಂದ ಇತ್ತ ಬರಲಿಲ್ಲ; ನಿಮ್ಮ ಕ್ಷೇಮಸಮಾಚಾರ ಒಂದು ಸಲ ತಿಳಿದುಕೊಂಡು ಹೋಗೋಣವೆಂತ ಬಂದೆ,'' ಎಂದು ಗೋವಿಂದ ಗಂಗಾಳೆ ಮನೆಯನ್ನು ಹೊಕ್ಕನು.

"ಬನ್ನಿ'' ಎಂದು ರಮೆ ಬಾಯಿಮುಚ್ಚಿಕೊಂಡು ನಕ್ಕಳು.

ಇಷ್ಟು ದೊಂಬಿ ಏತರದು,'' ಎಂದು ಗಂಗಾಳೆ ಮುಂದು ಬಿದ್ದು

ಕಾಯಿ ಬಹಳ ಕಮ್ಮಿಯೇನೂ ಉದಿರಿಸಿಲ್ಲವೆಂತ ಕಾಣುತ್ತೆ. ದೊಡ್ಡ ಬೇಲಿಯೆಲ್ಲಾ ಜಾಲಿಸಿರಬೇಕಲ್ಲವೆ? '

ಈ ಹಲವು ಪ್ರಶ್ನೆಗಳಿಗೆ ಉತ್ತರವೀಯುವುದು ಎಲ್ಲರೂ ಹೆಚ್ಚಿನ ದೆಂದು ಮನಸ್ಸಿನಲ್ಲಿ ಮಾಡಿಕೊಂಡು ಸೀಗೆಯ ಪಾಲಿನ ಕಡಿಗೆ ಬಗ್ಗಿದ್ದರು; ಮತ್ತು ಕೊಂಚ ಹೊತ್ತಿನಲ್ಲಿಯೆ ಅದು ಮುಗಿಯಿತು. ವೇಣಿ ತನ್ನ ಭಾಗಕ್ಕೆ ಬಂದದ್ದರಲ್ಲಿ ಸುಮಾರೆಲ್ಲವನ್ನೂ ಆಳಿನ ತಲೆಯ ಮೇಲೆ ಹೊರಿಸಿ ತೋಟಿಯ ಕಡೆಗೆ ಒಂದು ಗೋಪ್ಯವಾದ ಸನ್ನೆಯನ್ನು ಮಾಡಿ ಮನೆಗೆ ಹಿಂದಿರುಗುವದರ ಯತ್ನಮಾಡುತ್ತಿದ್ದನು: ಮತ್ತು ಕಳ್ಳಂಜಿಯ ವರಿಗೆ ಇದರಿಂದ ಪ್ರಯೋಜನ ಕಡಮೆಯೆಂದು ರಮೆಯ ಭಾಗದಿಂದ ಅಲ್ಲಿದ್ದ ಎಲ್ಲರೂ ಅವರವರ ಯೋಗ್ಯತೆಗನುಸಾರವಾಗಿ ಅಷ್ಟಿಷ್ಟು ಹಂಚಿಕೊಂಡು ಹಿಂತಿರುಗಲೂ ಮೊದಲು ಮಾಡುತ್ತಿದ್ದರು, ಇಂತಹ ಹೊತ್ತಿನಲ್ಲಿ ಎಲ್ಲರೂ ಆಶ್ಚರಿಗೊಂಡು ನೋಡಿದರು, ರಮೇಶ ಘೋಷಗೇರಿಯ ಆ ಹಿಂದೂಸ್ತಾನಿ ತುಂಡಾಳು—ತಲೆಯುದ್ದದ ಬೊಂಬಿನ ಲಟ್ಠಿಯನ್ನು ಹಿಡಿದು ಒಂದೇ ಏಟಿಗೆ ಅಂಗಳದಲ್ಲಿ ಬಂದು ನಿಂತಿದಾನೆ. ಅವನ ಹಗೆತನದ ಚಹರೆ ಇಷ್ಟುಮಟ್ಟಿನದು ಎಲ್ಲರೂ ಅವನನ್ನು ನೋಡಲೆ ತೀರಬೇಕು, ಮತ್ತು ನೋಡಿದ ಮೇಲಂತೂ ಮರೆಯಲಸಾಧ್ಯ. ಹಳ್ಳಿಯ ಹುಡುಗರು ಹಿರಿಯರು ಎಲ್ಲರೂ ಅವನನ್ನು ಗುರ್ತಿಸಿ ತಿಳಿದಿದ್ದರು; ಅಷ್ಟೇಯೇನು, ಅವನ ವಿಷಯವಾಗಿ ಬಗೆಬಗೆಯ ಹುಚ್ಚಾಪಟ್ಟೆ ಕಟ್ಟು ಕತೆಗಳು ಮೆಲ್ಲಮೆಲ್ಲನೆ ಹರಡಿ ರಟ್ಟಾಗಲಿಕ್ಕೆ ಮೊದಲಾಗಿದ್ದವು. ಅವನು ಇಷ್ಟು ಮಂದಿ ನಡುವೆ ರಮೆಯನ್ನೆ ಯಜಮಾನಿಯೆಂದು ಗುರ್ತಿಸಿದ ನೆಂತೊ ಅದನ್ನು ಅವನೆ ಬಲ್ಲ. ದೂರದಿಂದ ದೊಡ್ಡದೊಂದು ಸಲಾಮು ಹಾಕಿ, "ಅಮ್ಮಾವರೆ" ಎಂದು ಸಂಬೋಧಿಸಿದನು ಮತ್ತು ಹತ್ತಿರ ಬಂದು ನಿಂತನು. ಅವನು ಹೇಗಾದರೂ ಇರಲಿ, ದನಿ ದಪ್ಪ ಮತ್ತು ಒಡಕಲು. ಇನ್ನೊಂದು ಸಲಾಮು ಹೊಡೆದು ಹಿಂದಿ ಕನ್ನಡ ಬೆರದ ಮಾತಿನಲ್ಲಿ ಸಂಕ್ಷೇಪವಾಗಿ ತಿಳಿಸಿದನು; ತಾನು ರಮೇಶರಾಯರ ಆಳು ಮತ್ತು ಸೀಗೆಕಾಯಿನ ಮೂರು ಪಾಲಿನಲ್ಲಿ ಒಂದು ಪಾಲನ್ನು ತೆಗೆದು ಕೊಳ್ಳಲು ಬಂದಿದ್ದೇನೆ. ರಮೆ ವಿಸ್ಮಯದ ಪ್ರಭಾವದಿಂದಲೆ ಆಗಲಿ ಅಥವಾ

ಅವನ ಸಂಗತವಾದ ಪ್ರಾರ್ಥನೆಗೆ ವಿರುದ್ಧವಾದ ಉತ್ತರ ಹುಡುಕಿ ಸಿಗದೇಯೊ ಧಟ್ಟನೆ ಉತ್ತರವನ್ನು ಹೇಳಲಾರದೆ ಹೋದಳು. ಅವನು ಚಕ್ಕನೆ ಕತ್ತು ತಿರುವಿ ವೇಣಿಯ ಆಳನ್ನು ಕುರಿತು ಗಂಭೀರದನಿಯಲ್ಲಿ ಎಂದನು. "ಇದೊ ನಿಲ್ಲು." ಆಳು ಭಯದಿಂದ ನಾಲ್ಕು ಹೆಜ್ಜೆ ಹಿಮ್ಮೆಟ್ಟಿ ಬಂದು ನಿಂತನು. ಅರ್ಧನಿಮಿಷದ ತನಕ ಎಲ್ಲೂ ಸದ್ದಿಲ್ಲ. ಆಗ ವೇಣಿ ಸಾಹಸ ಮಾಡಿದನು. ಅವನು ಇದ್ದ ಕಡೆಯಿಂದಲೆ ಎಂದನು. "ಯಾರ ಪಾಲು?"

ಭಜುಯ ತಕ್ಷಣ ಅವನಿಗೆ ಒಂದು ಸಲಾಮು ಹಾಕಿ ಸಂಭ್ರಮ ದಿಂದ ಹೇಳಿದನು. "ರಾಯರೆ, ತಮ್ಮನ್ನು ಕೇಳಲಿಲ್ಲ."

ಚಿಕ್ಕಿಯು ಬಲುದೂರ ಅಟ್ಟದಿಂದ ತೀಕ್ಷ್ಣ ದನಿಯಲ್ಲಿ ಎಂದಳು. "ಏನೊ ಭಂಟ, ಹೊಡೀತೀಯೇನೊ!"

ಭಜುಯ ಒಂದು ಗಳಿಗೆ ಅವಳ ಕಡೆ ದಿಟ್ಟಿಸಿ ನೋಡುತ್ತಿದ್ದನು; ಮರುಗಳಿಗೆಯಲ್ಲಿಯೆ ಅವನ ಒಡಕಲು ದನಿಯ ಭಯಂಕರ ನಗೆಯಿಂದ ಮನೆಯಲ್ಲ ತುಂಬಿತುಳುಕಿತು. ಕೊಂಚ ಹೊತ್ತಿನಲ್ಲೆ ನಗೆಯನ್ನು ನಿಲ್ಲಿಸಿ ಕೊಂಚ ನಾಚಿ ತಿರುಗೂ ರಮೆಯ ಕಡೆ ನೋಡುತಲಿದ್ದನು. ಈ ಸಲ ಅವಳು ಮಾತಾಡಿದಳು. "ನಿಮ್ಮ ರಾಯರಿಗೇನುಬೇಕು?" ರಮೆಯ ಬೇಸರವನ್ನು ಲಕ್ಷಿಸಿ ಭಜುಯನು ಹಠಾತ್ತು ಸಂಕೋಚ ಪಟ್ಟು ಕೊಂಡವನಂತೆಯಾದನು. ಆದ್ದರಿಂದ ಸಾಧ್ಯವಾದಮಟ್ಟಿಗೆ ಆ ಕರ್ಕಶ ಕಂಠವನ್ನು ಕೋಮಲ ಮಾಡಿ ಅವನು ಪ್ರಾರ್ಥನೆ ಪುನರಾವೃತ್ತಿ ಮಾಡಿ ದನು. ಆದರೆ ಮಾಡಿದರೇನಾದೀತು— ಸೀಗೆಕಾಯಿ ಪಾಲಾಗಿ ಹಂಚಿಕೆ ಯಾಗಿ ಹೋಗಿದೆ. ಇಷ್ಟು ಮಂದಿಯ ಮುಂದೆ ಅವಳು ಹೀನಳಾಗ ಲೊಲ್ಲಳು, ಆದುದರಿಂದ ಕಟು ದನಿಯಲ್ಲಿ ಎಂದಳು. "ನಿನ್ನ ರಾಯ ರಿಗೆ ಇದರಲ್ಲಿ ಯಾವ ಪಾಲೂ ಇಲ್ಲ. ಹೇಳು ಹೋಗು ಬೇಕಾದ್ದು ಮಾಡಲಿ!"

"ಬಹಳ ಒಳ್ಳೇದು ಅಮ್ಮಾವರೆ," ಎಂದು ಭಜುಯ ತಕ್ಷಣ ಒಂದು ಉದ್ದವಾದ ಸಲಾಮು ಹೊಡೆದು ವೇಣಿಯ ಭಂಟನನ್ನು ಕೈಯಾ ಡಿಸಿ ಹೋಗುವಂತೆ ಸನ್ನೆಮಾಡಿ ಮರುಮಾತಿಲ್ಲದೆ ತಾನೂ ಹೊರಡಲು

ಉಪಕ್ರಮ ಮಾಡಿದನು. ಅವನ ನಡತೆಯಿಂದ ಮನೆಯವರೆಲ್ಲಾ ಅತ್ಯಂತ ಆಶ್ಚರ್ಯ ಹೊಂದಿ ಹೋಗಿರಲು ಅವನು ಥಟ್ಟನೆ ಹಿಂದಕ್ಕೆ ತಿರುಗಿ ನಿಂತು, ರಮೆಯ ಮೊಗದ ಕಡೆ ನೋಡಿ, ಹಿಂದಿ ಕನ್ನಡ ಮಿಶ್ರವಾದ ಮಾತಿನಲ್ಲಿ ತನ್ನ ಕಠೋರ ದನಿಗೋಸ್ಕರ ಕ್ಷಮೆಯನ್ನು ಬೇಡಿ ಆ ಮೇಲೆಂದನು. "ಅಮ್ಮಾವರೆ ಮಂದಿಯ ಮಾತು ಕೇಳಿ ಗಡಿಯಿಂದ ಸೀಗೆಕಾಯಿಯನ್ನು ತರಲು ರಾಯರು ನನಗೆ ಹುಕುಂ ಮಾಡಿದ್ದರು. ರಾಯರಾಗಲಿ ನಾನಾಗಲಿ ಯಾರೂ ಸೀಗೆಕಾಯನ್ನು ಮುಟ್ಟುವವರಲ್ಲವೇ ಅಲ್ಲ, ಆದರೂ" ಎಂದು ತನ್ನ ವಿಶಾಲದ ಭುಜವನ್ನು ತಟ್ಟಿ ಹೇಳಿದನು. "ರಾಯರ ಹುಕುಂನಿಂದ ಈ ಪ್ರಾಣವನ್ನು ಗಡಿಯ ಹತ್ತಿರವೆ ಈ ಹೊತ್ತು ಒಪ್ಪಿಸಬೇಕಾಗಿತ್ತು. ಆದರೆ ರಾಮಜಿ ರಕ್ಷಿಸಿದ, ರಾಯರ ಕೋಪ ಬಿದ್ದುಹೋಯಿತು. ನನ್ನನ್ನು ಕರೆದು ಹೇಳಿದರು. "ಭಜುಯ, ಹೋಗು, ಅಮ್ಮಾವರನ್ನು ವಿಚಾರಿಸಿ ಬಾ, ಆ ಗಡಿಯಲ್ಲಿ ನನಗೆ ಭಾಗ ಇದೆಯೆ ಇಲ್ಲವೆ" ಎಂದು, ಅವನು ಅತಿ ಸಂಭ್ರಮದಿಂದ ಬಡಿಗೆ ಸಹಿತ ಎರಡು ಕೈಗಳನ್ನೂ ರಮೆ ಕಡೆಗೆ ಮೇಲಕ್ಕೆತ್ತಿ ತಲೆಗೆ ತಗುಲಿಸಿ ನಮಸ್ಕಾರ ಮಾಡಿ ಹೇಳಿದನು. "ರಾಯರು ಅಪ್ಪಣೆ ಕೊಡಿಸಿದರು, ಯಾರು ಬೇಕಾದ್ದು ಹೇಳಲಿ, ಭಜುಯ, ನನಗೆ ನಿಜವಾಗಿ ತಿಳಿಯುವುದು, ಅಮ್ಮಾವರ ನಾಲಿಗೆಯಿಂದ ಸುಳ್ಳು ಮಾತು ಎಂದಿಗೂ ಹೊರಡದು, ಅವರು ಎಂದಿಗೂ ಹೆರರ ಸ್ವತ್ತನ್ನು ಕಳವು ಮಾಡರು," ಎಂದು ಅವನು ಆಂತರಿಕ ಸಂಭ್ರಮದೊಡನೆ ಬಾರಿ ಬಾರಿಗೂ ನಮಸ್ಕಾರ ಮಾಡಿ ಹೊರಟು ಹೋದನು.

ಹೋದೊಡನೆಯೆ ವೇಣಿ ಹಂಗಸಿನ ಸ್ವರವಾದ ದನಿಯಲ್ಲಿ ಅಪ್ಪಳಿಸಿ, "ಹೀಗೆ ಮಾಡಿಯೇ ಅವನು ಆಸ್ತಿಯನ್ನು ಕಾಪಾಡಿಕೊಳ್ಳುವುದು! ಇಗೊ ನಿನ್ನ ಹತ್ತಿರ ಪ್ರಮಾಣ ಮಾಡುತ್ತೇನೆ, ನಾನು ಈ ಹೊತ್ತಿನಿಂದ ಗಡಿಯ ಒಂದು ಸಣ್ಣ ರೆಂಬೆಗೆ ಕೈ ಹಾಕುವುದಕ್ಕೆ ಸಹ ಬಿಡೆ; ತಿಳಿಯಲಿಲ್ಲವೆ, ರಮೆ!" ಎಂದು ಆಹ್ಲಾದದಿಂದ ಹಿ, ಹಿ, ಎಂದು ಎಳೆದು ನಗಹತ್ತಿದನು. ರಮೆಯ ಕಿವಿಯೊಳಗೆ ಇವನ ಒಂದು ಮಾತೂ ಪ್ರವೇಶಿಸಲಿಲ್ಲ. 'ಅಮ್ಮಾವರ ನಾಲಿಗೆಯಿಂದ ಎಂದಿಗೂ ಸುಳ್ಳು ಮಾತು ಹೊರಡದು,

ಭಜುಯನ ಈ ವಾಕ್ಯ ಆಗ ಅವಳೆರಡು ಕಿವಿಗಳಲ್ಲಿಯೂ ಲಕ್ಷ ಕೈತಾಳ ಗಳ ದನಿಯ ಒಟ್ಟು ಗೂಡಿದ ಝುಮ್ ಝುಮ್ ಶಬ್ದ ತಲೆಯನ್ನು ಘಳೆಂದು ಸೀಳುತ್ತಿತ್ತು. ಅವಳ ಬಿಳುಪು ಬಣ್ಣದ ಮೊಗವು ಎವೆಯಿಕ್ಕು ವುದರಲ್ಲಿ ಕೆಂಪೇರಿ ಒಂದು ತೊಟ್ಟು ರಕ್ತವಿಲ್ಲದಂತೆ ಸಪ್ಪೆಗಿಳಿದು ಹೋಯಿತು. ಈ ಬಗೆಯ ಮೊಗ ಯಾರ ಕಣ್ಣಿಗಾದರೂ ಬಿದ್ದೀತೆಂಬೊ ಎಚ್ಚರ ಮಾತ್ರ ಅವಳಿಗೆ ಉಳಿದಿತ್ತು. ಆದ್ದರಿಂದ ಅವಳು ಸೆರಗಿನಿಂದ ಮೊಗವನ್ನು ಮುಚ್ಚಿಕೊಂಡು ಬೇಗನೆ ನಡೆದು ಕಣ್ಮರೆಯಾದಳು.

೮

"ದೊಡ್ಡಮ್ಮಾ!"

"ಯಾರು ರಮೇಶನೆ? ಬಾ, ಅಪ್ಪಾ, ಒಳಕ್ಕೆ ಬಾ!" ಎಂದು ಕರೆದು ವಿಶ್ವೇಶ್ವರಿ ದಡಬಡನೆ ಒಂದು ಚಾಪೆಯನ್ನು ಹಾಸಿದಳು. ಒಳಕ್ಕೆ ಕಾಲಿಟ್ಟೊಡನೆ ರಮೇಶ ಬೆದರಿದನು. ಏಕೆಂದರೆ, ದೊಡ್ಡಮ್ಮನ ಹತ್ತಿರ ಕೂತಿದ್ದ ಹಂಗಸಿನ ಮೊಗ ಕಾಣಿಸದೆ ಹೋದರೂ ಅವನು ತಿಳಿದನು, ಇವಳೆ ರಮೆ. ಅವನ ಚಿತ್ತಕ್ಕೆ ಭಾರಿಯೊಂದು ಕಿಚ್ಚು ಹತ್ತಿ ಅವನಿಗೆ ತೋರಿತು, ಇವರು ಚಿಕ್ಕಿಯನ್ನು ಮುಂದು ಮಾಡಿ ಅಪಮಾನ ಮಾಡ ಲಿಕ್ಕೂ ಕಡಮೆ ಮಾಡರು, ಆ ಮೇಲೆ ಸುತರಾಂ ನಾಚಿಕೆಯಿಲ್ಲದವರಂತೆ ಒಳಗೆ ಬಂದು ಏಕಾಂತಕ್ಕೆ ಸಹ ಕೂಡುತ್ತಾರೆ! ಇತ್ತ ರಮೇಶನ ಆಕ ಸ್ಮಿಕಾಗಮನದಿಂದ ರಮೆಗೂ ಅವಸ್ಥಾಸಂಕಟ ಕಡಮೆಯೇನೂ ಆಗಲಿಲ್ಲ. ಕಾರಣವೇನೆಂದರೆ, ಅವಳು ಬರಿ ಈ ಹಳ್ಳಿಯ ಹುಡುಗಿಯಂತಲ್ಲ; ಅವಳಿಗೂ ರಮೇಶನಿಗೂ ಇದ್ದ ಸಂಬಂಧದಲ್ಲಿ ಅವಳು ಅವನೆದುರಿಗೆ ನಿಲ್ಲದೆ ಎದ್ದು ಹೋಗುವುದಕ್ಕೂ ನಾಚಿಕೆಗೇಡೆಂತ ತಿಳಿದಳು. ಅದಲ್ಲದೆ ಆ ದಿನ ಸೀಗೆ ಕಾಯಿನ ವಿಷಯವಾಗಿ ಒಂದು ಕಾಂಡವಾಗಿ ಹೋಗಿತ್ತು. ಆದುದ ರಿಂದ ಅವಳು ಅಲ್ಲಿರಲು ಆದಷ್ಟುಮಟ್ಟಿಗೆ ಮರೆಯಾಗಿ ಕೂತಿದ್ದಳು. ರಮೇಶ ಅತ್ತಕಡೆ ನೋಡಲಿಲ್ಲ. ಕೋಣೆಯಲ್ಲಿ ಮತ್ತಾರೂ ಇಲ್ಲೆಂದು ತಿಳಿದು ಮೆಲ್ಲನೆ ಸ್ವಸ್ಥವಾಗಿ ಚಾಪೆಯ ಮೇಲೆ ಕುಳಿತು ಎಂದನು, "ದೊಡ್ಡಮ್ಮಾ!"

ದೊಡ್ಡಮ್ಮನು, "ಇದೇನು ಮಧ್ಯಾಹ್ನದ ಹೊತ್ತಿನಲ್ಲಿ ರಮೇಶು ?"

ರಮೇಶನೆಂದನು, "ಮಧ್ಯಾಹ್ನದಲ್ಲಿ ಬಾರದೆ ಹೋದರೆ ನಿನ್ನ ಹತ್ತಿರ ಕೊಂಚ ಹೊತ್ತು ಕೂತುಕೊಳ್ಳಲು ಅವಕಾಶವಿಲ್ಲ. ನಿನಗೆ ಕೆಲಸವೇನೂ ಕಮ್ಮಿಯಾಗಿಲ್ಲ."

ದೊಡ್ಡಮ್ಮ ಅದಕ್ಕೇನೂ ಹೇಳದೆ ಒಂದಷ್ಟು ನಕ್ಕಳು. ರಮೇಶ ವಿಂದು ನಗೆಯಿಂದ ಎಂದನು, "ಮುಂಚೆ ಹುಡುಗುತನದಲ್ಲಿ ಒಂದು ಸಲ ನಿನ್ನಲ್ಲಿ ಬೀಳ್ಕೊಂಡು ಹೋಗಿದ್ದೆ. ತಿರುಗೂ ಇಂದಿನ್ನೊಮ್ಮೆ ಹೇಳಿ ಹೋಗಲು ಬಂದಿದ್ದೇನೆ. ಇದೇ ಕೊನೆಯ ಸಲವಾಗಬಹುದು ದೊಡ್ಡಮ್ಮ !" ಅವನ ಮೊಗದಲ್ಲಿ ನಗೆ ಸೂಸಿದರೂ ದನಿಯಲ್ಲಿ ದಗ್ಧ ಹೃದಯದ ಬಹು ಆಳದಲ್ಲಿನ ಭಗ್ನವ್ಯಥೆಯೊಂದಿಸಿರು ಹೊರಬಿದ್ದಿತು; ಕೇಳುತ್ತಲಿದ್ದವರಿಬ್ಬರೂ ವಿಸ್ಮಯವ್ಯಥೆಗಳಿಂದ ಬೆಚ್ಚಿ ಬಿದ್ದರು.

"ಬಿಡಿ, ತಪ್ಪು ! ಇದೆಂಥಾ ಮಾತೋ, ಮಗು," ಎಂದು ವಿಶ್ವೇಶ್ವರಿಯ ಕಂಗಳೆರಡೂ ಚಲಚಲಗೊಂಡವು. ರಮೇಶ ನಕ್ಕನು, ಅಷ್ಟೆ. ವಿಶ್ವೇಶ್ವರಿ ವಾತ್ಸಲ್ಯದಿಂದ ವದ್ದೆಯಾದ ದನಿಯಲ್ಲಿ ಕೇಳಿದಳು, ಮೈಗೆ ಚೆನ್ನಾಗಿ ಇಲ್ಲೇನು ಅಂಟದೆ ಇದೆಯೆ–ಅಪ್ಪ ?"

ರಮೇಶ ತನ್ನ ಎತ್ತರವಾದ ಅತ್ಯಂತ ಬಲಿಷ್ಠವಾದ ದೇಹವನ್ನು ಒಂದೆರಡು ಸಲ ನೋಡಿ ಎಂದನು. "ಇದು ತುಂಡಾಡಿಗರ ದೇಶದಲ್ಲಿ ಬೇಳೆ ರೊಟ್ಟಿಯಿಂದ ಬೆಳೆದ ಮೈ, ದೊಡ್ಡಮ್ಮ, ಇದೇನು ಇಷ್ಟು ಬೇಗನೆ ಕೆಟ್ಟೀತೆ ? ಅದಲ್ಲ ಮೈ ನನ್ನದು ಒಳ್ಳೆ ಚೆನ್ನಾಗಿಯೆ ಇದೆ, ಆದರೆ ಇಲ್ಲಿ ನಾನು ಒಂದು ಗಳಿಗೆ ಸಹ ಹತ್ತಿಕೊಂಡು ಇರಲಾರೆ; ನನ್ನ ಪ್ರಾಣವೆಲ್ಲಾ ಏನೊ ಇರಸುಮುರಸಾಗಿ ಎಡವಿ ಮುಗ್ಗರಿಸುತ್ತಿದೆ."

ಮೈ ಕೆಡಲಿಲ್ಲವೆಂತ ಕೇಳಿ ವಿಶ್ವೇಶ್ವರಿ ನಿಶ್ಚಿಂತಳಾಗಿ ನಗೆಮೊಗದಿಂದ ಕೇಳಿದಳು. "ಇದು ನೀನು ಹುಟ್ಟಿದ ಸ್ಥಳ. ಇಲ್ಲಿ ಹತ್ತಿಕೊಂಡು ಇರಲಾರೆಯಾ, ಏಕೆ ಹೇಳು ನೋಡೋಣ ?"

ರಮೇಶ ತಲೆಯನ್ನು ಅಲುಗಿಸಿ ಎಂದನು, "ಅದನ್ನು ನಾನು ಹೇಳಲಾರೆ. ನನಗೆ ಗೊತ್ತು, ನೀನು ಎಲ್ಲವನ್ನೂ ಬಲ್ಲೆ."

ವಿಶ್ವೇಶ್ವರಿ ಕ್ಷಣ ಹೊತ್ತು ಸುಮ್ಮನಿದ್ದು ಕೊಂಚ ಗಂಭೀರಳಾಗಿ

ಎಂದಳು. ಎಲ್ಲಾ ತಿಳಿಯದೆ ಹೋದರೂ ಕೊಂಚ ಅರಿತಿದ್ದೇನೆ, ಆದರೂ ಹೇಳುತ್ತೇನೆ, ನೀನು ಇನ್ನೆಲ್ಲಿ ಹೋದರೂ ನಡೆಯದು, ರಮೇಶ. ''

'' ಏಕೆ ನಡೆಯುವುದಿಲ್ಲ ದೊಡ್ಡಮ್ಮ ? ಇಲ್ಲಿ ನಾನು ಯಾರಿಗೂ ಬೇಡ, '' ಎಂದು ರಮೇಶ ನುಡಿದನು.

ದೊಡ್ಡಮ್ಮನೆಂದಳು. '' ಬೇಡವೆಂತಲೆ ನೀನು ಇನ್ನೆಲ್ಲಿಯೂ ಓಡಿ ಹೋಗಲು ನಾನು ಬಿಡೆ. ಇದೆ ಬೇಳೆ ಭಕ್ಕರಿಯ ಮೈ ಬಡಾಯಿ ಕೊಚ್ಚುತ್ತಿದ್ದೆಲ್ಲೊ, ಅದೇನು ಓಟ ಕೀಳುಯುವುದಕ್ಕೇಯೆ ? ''

ರಮೇಶ ಸುಮ್ಮನಿದ್ದನು. ಈ ಹೊತ್ತು ಅವನ ಚಿತ್ತವೆಲ್ಲಾ ಹಳ್ಳಿಯ ವಿರುದ್ಧವಾಗಿ ವಿದ್ರೋಹದ ಕಿಚ್ಚು ಹತ್ತಿ ಬೇಯುತ್ತಿತ್ತು; ಅದಕ್ಕೆ ವಿಶೇಷ ಕಾರಣವೂ ಒಂದಿತ್ತು, ಹಳ್ಳಿಯಿಂದ ರೈಲು ಸ್ಟೆಷನ್‌ಗೆ ನೇರವಾಗಿ ಹೋಗುವ ದಾರಿಯೊಂದಿತ್ತು. ಅದು ಒಂದೆಡೆಯಲ್ಲಿ ಎಂಟೊಂಭತ್ತು ವರುಷಗಳ ಹಿಂದೆ ಮಳೆ ನೀರಿನಿಂದ ಕೊಂಚ ಕಿತ್ತು ಹೋಗಿ, ಅಂದಿನಿಂದ ಒಡಕು ಬರುಬರುತ ಉದ್ದವೂ ಆಳವೂ ಆಗುತ್ತ ಹೋಗಿತ್ತು; ಪ್ರಾಯವಾಗಿ ನೀರು ನಿಂತಿರುವುದು. ಆ ಸ್ಥಳವನ್ನು ದಾಟಬೇಕಾದರೆ ಎಲ್ಲರಿಗೂ ಕೊಂಚ ಹಿಂಸೆಯಾಗುತ್ತಿತ್ತು. ಬೇರೆ ಕಾಲದಲ್ಲಿ ಹೇಗೊ ಮೆಟ್ಟಿಂಗುಲು ಇಟ್ಟು ಉಡುಗೆಯನ್ನು ಎತ್ತಿ ಹಿಡಿದು ಬಲು ಎಚ್ಚರದಿಂದ ಇದನ್ನು ದಾಟಬಹುದು; ಮಳೆಗಾಲದಲ್ಲಿ ಯಾದರೆ ತೊಂದರೆಗೆ ಎಣೆಯಿಲ್ಲ. ಒಂದು ವರುಷ ಒಂದು ಈಚಲ ಕೊರಡನ್ನು ಹಾಕಿ ಅದರ ಮೇಲಿನಿಂದ ಜನರು ಪಾರಾಗುತ್ತಿದ್ದರು. ಇಷ್ಟು ತೊಂದರೆಯಾದರೂ ಗ್ರಾಮದವರು ಇದುವರೆಗೂ ಅದನ್ನು ಸರಿಪಡಿಸಲು ಯತ್ನ ಸಹ ಮಾಡಿರಲಿಲ್ಲ. ಮರಾಮತ್ತಿಗೆ ದುಡ್ಡು ಕಾಸು ಬೇಕು. ಈ ಹಣವನ್ನು, ರಮೇಶ ತಾನೇ ಕೊಡದೆ ಚಂದಾ ವಸೂಲು ಮಾಡುವದಕ್ಕೆ ಈ ಏಳೆಂಟು ದಿನಗಳಿಂದ ಅಲೆದಿದ್ದಾನೆ; ಎಂಟು ದುಗ್ಗಾಣಿ ಸಹ ಯಾರಿಂದಲೂ ಹೊರಕ್ಕೆ ತೆಗೆಸಲಾರದೆ ಹೋಗಿದ್ದಾನೆ. ಅಷ್ಟೆ ಅಲ್ಲ. ಇವತ್ತು ಬೆಳಿಗ್ಯೆ ತಿರುಗಿಕೊಂಡು ಬರುವಾಗ್ಯೆ ದಾರಿಯ ಬದಿಯಲ್ಲಿನ ಹಸರುವಾಣಿಯಂಗಡಿಯಲ್ಲಿ ಈ ಪ್ರಸಂಗದ ಮಾತುಗಳು ಧಟ್ಟನೆ ಕಿವಿಗೆ ಬೀಳಲು ಅವನು ಹೊರಗೆ ನಿಂತು ಕೇಳಿದನು. ಯಾರೋ

ಒಬ್ಬನು ಇನ್ನೊಬ್ಬನಿಗೆ ನಕ್ಕು ಹೇಳುತ್ತಲಿದ್ದಾನೆ– "ಒಂದು ಕಾಸು ಸುದಾ ಕೊಡಬೇಡಿ. ಕಾಣತಾ ಇಲ್ಲವೆ, ಇದರಲ್ಲಿ ತನ್ನ ದರದೇ ದೊಡ್ಡದು? ಕಾಲಜೋಡಿನ ಬಣ್ಣ ಕೆಟ್ಟು ಹೋಗತೈತೆ ಅಂತ ತಾನೆ! ಕೊಡದೆ ಹೋದರೆ ಅವನು ತನ್ನಷ್ಟಕ್ಕೆ ಸರಿಪಡಿಸುತ್ತಾನೆ, ನೋಡುತ್ತಿರು. ಅದಲ್ಲದೆ ಇದು ಇಷ್ಟು ದಿನ ಇರಲಿಲ್ಲವೆ, ನಮಗೆ ಸ್ಟೇಶನ್ನಿಗೆ ಹೋಗಾಕೆ ಏನಪ್ಪಾ, ಅಡಚಣೆ ಆದ್ದು?"

ಇನ್ನೊಬ್ಬನಾರೊ ಹೇಳಿದ. "ತಡೀಬಾರದಾ? ದೀನರಾಯರು ಅನ್ನತಾವರೆ, ಅವನಿಗೆ ತಲೆಸವರಿ ಕಾಳಮ್ಮನ ಗುಡಿ ಸಹ ಠೀಕರಾಕು ಮಾಡಿಕೊಬಹುದು. ಖುಷಾಮತ್ತು ಮಾಡಿ ಒಂದೆರಡು ತಡವೆ ರಾಯರು, ಸಾಹೇಬರು ಎಂದಂದರೇನೆ ಸಾಕಪ್ಪ!"

ಆಗಳಿಂದ ಬೆಳಗೆಲ್ಲಾ ಈ ಎರಡು ಮಾತುಗಳು ಅವನಿಗೆ ಬೆಂಕಿಯಿಟ್ಟು ಉರಿಸುತ್ತಿದ್ದವು. ದೊಡ್ಡಮ್ಮ ನೇರವಾಗಿ ಇದೇ ತಾನಲ್ಲಿ ಪೆಟ್ಟಿಟ್ಟಳು, ಎಂದಳು. "ಆ ಕೊರಕಲು ಸರಿಮಾಡುವ ಯತ್ನ ಮಾಡುತ್ತಿದ್ದೆಯಲ್ಲಾ ಅದೇನಾಯಿತು?"

ರಮೇಶ ಬೇಸರದಿಂದ ಎಂದನು. "ಅದಾಗೋದಿಲ್ಲ, ದೊಡ್ಡಮ್ಮ ಯಾರೂ ಒಂದು ಕಾಸು ಸಹ ಚಂದಾ ಕೊಡರು."

ವಿಶ್ವೇಶ್ವರಿ ನಕ್ಕು ಎಂದಳು. "ಕೊಡೋದಿಲ್ಲ ಎಂತ ಆಗೋದಿಲ್ಲವೇನೊ. ನಿನಗೆ ನಿಮ್ಮ ಅಣ್ಣೋರಿಂದ ಬಹಳ ಹಣ ಸಿಕ್ಕಿದೆ. ಈ ತುಸ ಹಣ ನೀನೆ ಕೊಡಬಹುದು!"

ರಮೇಶ ಒಂದೇ ಏಟಿಗೆ ಬೆಂಕಿ ಬೆಂಕಿಯಾಗಿ ಎಂದನು. "ಏಕೆ ಕೊಡಬೇಕು? ತಿಳಿಯದೆ ಬಹಳ ಹಣ ಇವರ ಸ್ಕೂಲಿಗೋಸ್ಕರ ಖರ್ಚುಮಾಡಿ ಹಾಳು ಮಾಡಿದೆ. ಈ ಗ್ರಾಮದವರಾರಿಗೂ ಏನೂ ಮಾಡಬಾರದು," ರಮೆಯ ಕಡೆ ಓರೆಗಣ್ಣಿಂದೊಂದು ಸಲ ನೋಡಿ, "ಇವರುಗಳು ದಾನಮಾಡಿದರೆ ಹೆದ್ದನೆಂದು ತಿಳಿಯುತ್ತಾರೆ; ಒಳ್ಳೇದು ಮಾಡಿದರೆ ದರದನ್ನು ಹುಟ್ಟಿ ಹಾಕುತ್ತಾರೆ! ಕ್ಷಮೆಗೈಯುವುದು ಸಹ ಇವರಲ್ಲಿ ಮಹಾಪಾತಕ ಹೇಡಿ ಹಿಮ್ಮೆಟ್ಟಿನೆಂದು ಅಂದುಕೊಳ್ಳುತ್ತಾರೆ!"

ದೊಡ್ಡಮ್ಮ ದೊಡ್ಡದಾಗಿ ನಕ್ಕಳು; ಆದರೆ ರಮೆಯ ಕಣ್ಣು ಮೊಗ ಒಂದೇ ಪೆಟ್ಟಿಗೆ ಕೆಂಡದಂತೆ ಕೆಂಚಾಯಿತು.

"ರಮೇಶ ರೇಗಿ, ನಗುತ್ತೀಯಲ್ಲಾ, ದೊಡ್ಡಮ್ಮ ?"

"ನಗದೆ ಇನ್ನೇನು ಮಾಡಲಿ, ಹೇಳು ಮಗು ?" ಎಂದು ಥಟ್ಟನೆ ನಿಟ್ಟುಸಿರೊಂದನ್ನು ಹಾಕಿ ವಿಶ್ವೇಶ್ವರಿ ಹೇಳಿದಳು. "ಒಳ್ಳೇದ ಕ್ಕೇನೆ ಹೇಳುತ್ತೇನೆ; ನೀನು ಇಲ್ಲಿ ಉಳಕೊಳ್ಳಬೇಕಾದುದು ಎಲ್ಲದು ಕ್ಕಿಂತಲೂ ಅವಶ್ಯ. ಕೋಪಗೊಂಡು ಜನ್ಮಭೂಮಿಯನ್ನು ಬಿಟ್ಟು ಹೋಗಬೇಕೆನ್ನುವಿಯಲ್ಲಾ, ರಮೇಶು, ಹೇಳು ನೋಡೋಣ, ನಿನ್ನ ಸಿಟ್ಟಿಗೆ ಯೋಗ್ಯರಾದವರು ಇಲ್ಲಿರುವರಾರು ?" ಕೊಂಚ ನಿಂತು ಆಮೇಲೆ ತನ್ನಷ್ಟಕ್ಕೆ ತಾನೆ ಹೇಳಿಕೊಂಡಳು. "ಆಹಾ ! ಇವರು ಎಷ್ಟು ದುಃಖಿ ಗಳು, ಎಷ್ಟು ದುರ್ಬಲರು—ಅದನ್ನು ಕಂಡಿದ್ದರೆ, ರಮೇಶು, ಇವರ ಮೇಲೆ ಕೋಪಗೊಳ್ಳುವುದಕ್ಕೆ ನಿನಗೆ ನಾಚಿಕೆಯಾಗುತ್ತಿತ್ತು. ದೇವರು ದಯಮಾಡಿ ನಿನ್ನನ್ನು ಕಳುಹಿರುವಾಗ್ಗೆ ನೀನು ಇವರ ಮಧ್ಯದಲ್ಲಿಯೆ ಇರು, ಮಗು !"

"ಆದರೆ ಇವರು ನನ್ನ ಒಲ್ಲರಲ್ಲೆ, ದೊಡ್ಡಮ್ಮ !"

ದೊಡ್ಡಮ್ಮನೆಂದಳು. "ಆದ್ದರಿಂದಲೆ ಇದ್ದೆ ತಿಳಿಯಲಾರೆಯಾ, ಮಗು, ಇವರು ನಿನ್ನ ಕೋಪ, ಸಿಟ್ಟು, ಅಭಿಮಾನಕ್ಕೆ ಎಳ್ಳಷ್ಟೂ ತಕ್ಕವ ರಲ್ಲವೆಂತ ? ಬರಿ ಇವರೆ ಅಲ್ಲ. ಯಾವ ಗ್ರಾಮದಲ್ಲಿ ಬೇಕಾದರೂ ತಿರುಗಿ ಕೊಂಡು ಬಾ, ಕಂಡುಕೊಳ್ಳುವೆ ಎಲ್ಲಾ ಒಂದೇ ಬಗೆ." ಥಟಕ್ಕನೆ ರಮೆಯ ಕಡೆ ಕಣ್ಣಿಕ್ಕಿ ಹೇಳಹತ್ತಿದಳು. "ನೀನೇನು ಆಗಿನಿಂದಲೂ ತಲೆಬಾಗಿ ಸುಮ್ಮನೆ ಕುಳಿತಿದ್ದೀಯಲ್ಲಾ ?– ಹೌದು ರಮೇಶ, ನೀವಿ ಬ್ಬರು ಅಣ್ಣತಂಗಿಯರು ಮಾತುಕಥೆಯಾಡುವುದಿಲ್ಲವೆ ? ಇಲ್ಲವೆ, ರಮೆ, ಮಾತನಾಡು. ಅವನ ತಂದೆಯೊಡನೆ ನಿಮ್ಮದು ಆದುದೆಲ್ಲಾ ಆ ಚಿಕ್ಕಪ್ಪನ ಸಾವಿನ ಸಂಗಡಲೇ ಕೊನೆಗಂಡಿತು. ಅದನ್ನು ಕಟ್ಟಿಕೊಂಡು ನೀವಿಬ್ಬರೂ ಮನಾಂತರ ಮಾಡಿಕೊಂಡಿದ್ದರೆ ಏನೂ ನಡೆಯದು."

ರಮೆ ಮೊಗವನ್ನು ಕೆಳಗೆ ಮಾಡಿಕೊಂಡೆ ಮೆಲ್ಲಗೆ ಎಂದಳು. "ನಾನು ಮನಾಂತರ ಮಾಡಲೊಲ್ಲೆ, ದೊಡ್ಡಮ್ಮ ! ರಮೇಶಣ್ಣ—."

ಅಕಸ್ಮಾತ್ತಾಗಿ ಅವಳ ಮಿದುದನಿಯು ರಮೇಶನ ಗಂಭೀರವಾದ ಕುದಿಯುವ ದನಿಯಲ್ಲಿ ಮುಳುಗಿ ಹೋಯಿತು. ಅವನು ಎದ್ದು ನಿಂತು ಎಂದನು "ಇದರೊಳಗೆ ನೀನು ಕೊಂಚವೂ ಸಿಕ್ಕು ಹಾಕಿಕೊಳ್ಳಬೇಡ, ದೊಡ್ಡಮ್ಮ. ಅಂದಿನ ದಿನ ಹೇಗೊ ದೈವಗತಿ ಅವಳ ಚಿಕ್ಕಿಯ ಕೈಯಿಂದ ಜೀವ ಉಳಿಯಿತು, ಇಂದು ತಿರುಗೂ ಇವಳು ಹೋಗಿ ಅವಳನ್ನು ಕಳುಹುತ್ತಾಳೆ—ಒಂದೆ ಬಾರಿಗೆ ನಿನ್ನನ್ನು ಸಿಗಿದು ಹೀರಿ ಸಿಪ್ಪೆಮಾಡಿ ಆಮೇಲೆ ಅವಳು ಹಿಂತಿರುಗುವುಳು;" ಎಂದಂದು ಯಾವಬಗೆಯ ವಾದ ಪ್ರತಿವಾದಗಳಿಗೆ ನಿಂತುಕೊಳ್ಳದೆ ಬೇಗನೆ ಹೊರಟು ಹೋದನು.

ವಿಶ್ವೇಶ್ವರಿ ಕಿರಿಚಿ ಕೂಗಿದಳು." ಹೋಗಬೇಡ, ರಮೇಶು, ಮಾತು ಕೇಳಿ ಹೋಗು."

ರಮೇಶ ಬಾಗಿಲ ಹೊರಗಡೆಯಿಂದಲೆ ಎಂದನು. "ಇಲ್ಲ ದೊಡ್ಡಮ್ಮ ಹಮ್ಮೆಚ್ಚಿ ನಿನ್ನ ಪಾದದೂಳಿಯಲ್ಲಿ ನಸಿಕಿ ನಡೆಯುವರ ಪಕ್ಷವನ್ನು ವಹಿಸಿ ನೀನೊಂದು ಮಾತನ್ನೂ ಹೇಳಬೇಡ—" ಎಂದು ಅವಳು ಎರಡನೆ ಸಲ ಬಲವಂತ ಮಾಡುವುದಕ್ಕೆ ಮುಂಚೆಯೆ ಹೊರಟು ಹೋದನು.

ಬೆಚ್ಚಿಬಿಡಿದವಳಂತೆ ರಮೆ ಕೆಲ ಹೊತ್ತು ವಿಶ್ವೇಶ್ವರಿಯ ಮೊಗವನ್ನು ನೋಡುತ್ತಿದ್ದು ಅತ್ತು ಬಿಟ್ಟಳು. "ಈ ಕಳಂಕ ನನ್ನ ಮೇಲೇಕೆ, ದೊಡ್ಡಮ್ಮ? ನಾನೇನು ಚಿಕ್ಕಿಗೆ ಕಲಿಸಿಕೊಡುತ್ತೇನೆಯೆ, ಅಲ್ಲದೆ, ಅವಳಿಗಾಗಿ ನಾನು ಜವಾಬುದಾರಳೆ?"

ದೊಡ್ಡಮ್ಮ ಅವಳ ಕೈಯನ್ನು ಹಿಡಿದು ತನ್ನ ಕೈಯಲ್ಲಿಟ್ಟು ಕೊಂಡು ಸ್ನೇಹದಿಂದ ಎಂದಳು, "ಕಲಿಸಿಕೊಡುವುದೇನೊ ಇಲ್ಲ, ಈ ಮಾತು ನಿಜ, ಆದರೆ ಅವಳ ಪಕ್ಷವಾಗಿ ದಾಯಿತ್ವ ಅಷ್ಟಿಷ್ಟು ನಿನ್ನ ಮೇಲೆ ಬಂದೆ ಬರುತ್ತೆ!"

ರಮೆ ಬಿಡುವಾದ ಕೈಯಿಂದ ಕಣ್ಣೊರಸಿಕೊಳ್ಳುತ್ತಾ ತಡೆದ ಸಿಟ್ಟಿನಿಂದ ಪ್ರತಿಭಟಿಸಿ ಎಂದಳು. "ಏತಕ್ಕೆ ನಾನು ದಾಯಿ? ಎಂದಿಗೂ ಅಲ್ಲ. ನನಗೆ ಇದರ ಸನ್ನೆ ಸೂಚನೆ ಸಹ ತಿಳಿದಿರಲಿಲ್ಲ, ದೊಡ್ಡಮ್ಮ!

ಹಾಗಾದರೆ ಏಕೆ ನನ್ನ ಮೇಲೆ ಸುಳ್ಳು ತಪ್ಪು ಹೊರೆ ಹೊರಿಸಿ ಅಪಮಾನ ಮಾಡಿ ಅವನು ಹೋದ್ದು! ''

ವಿಶ್ವೇಶ್ವರಿ ಇದನ್ನು ಕುರಿತು ಇನ್ನೂ ತರ್ಕ ಮಾಡಲಿಲ್ಲ. ಧೈರ್ಯ ವಾಗಿ ಎಂದಳು. '' ಎಲ್ಲರೂ ಒಳಗಿನ ಮಾತನ್ನು ತಿಳಿಯಲಾರರಮ್ಮಾ, ರಮೆ. ಆದರೆ ನಿನಗೆ ಅಪಮಾನ ಮಾಡಬೇಕೆಂಬ ಇಚ್ಛೆ ಅವನಿಗೆಂದಿಗೂ ಇಲ್ಲ. ಈ ಮಾತನ್ನು ನಾನು ನಿನಗೆ ಖಂಡಿತ ಹೇಳ ಬಲ್ಲೆ. ನಿನಗೆ ತಿಳಿ ಯದು, ಅಮ್ಮಾ; ನಾನಾದರೆ ಗೋಪಾಲ ಗುಮಾಸ್ತೆಯಿಂದ ಕೇಳಿ ತಿಳಿ ದಿದ್ದೇನೆ, ನಿನ್ನ ಮೇಲೆ ಅವನಿಗೆ ಎಷ್ಟೊ ಶ್ರದ್ಧೆ, ನಂಬುಗೆ. ಅಂದು ಹುಣುಸೆ ಮರವನ್ನು ಕಡಿದು ಎರಡು ಮನೆಗಳಿಗೇನೆ ಪಾಲು ಮಾಡಿ ಹಂಚಿಕೊಂಡಿರಲ್ಲಾ, ಆಗಲೂ ಆರ ಮಾತಿಗೂ ಕಿವಿಗೊಡಲಿಲ್ಲ, ಅದರಲ್ಲಿ ಅವನಿಗೆ ಭಾಗವಿತ್ತೆಂದು ಎಷ್ಟೋ ಹೇಳಿದರು, ಅವರ ಮೊಗದ ಮೇಲೆ ನಕ್ಕು ಎಂದಿದ್ದನು, ಚಿಂತೆಯ ಕೆಲಸವಿಲ್ಲ; ರಮೆ ಇರುವಾಗ್ಗೆ ನನ್ನ ನ್ಯಾಯ ವಿಭಾಗವು ನನಗೆ ದೊರೆತೆ ದೊರೆಯುತ್ತೆ, ಅವಳೆಂದಿಗೂ ಪರರ ಸ್ವತ್ತನ್ನು ಅಪಹರಿಸುವಳಲ್ಲ! ನಾನು ಚೆನ್ನಾಗಿ ಬಲ್ಲೆ, ಅಮ್ಮಾ, ಇಷ್ಟು ವಿವಾದ ಸಂವಾದಗಳಾದ ಮೇಲೂ ನಿನ್ನ ಮೇಲೆ ಅವನ ಆ ನಂಬುಗೆಯೆ ಇದ್ದಿತು, ಆ ಗಡಿ ನೀಗೆ '' ಮಾತಿನ ಮಧ್ಯದಲ್ಲೆ ವಿಶ್ವೇಶ್ವರಿ ಥಟ್ಟನೆ ನಿಂತು ಎವೆಯಿಕ್ಕದೆ ಕೊಂಚ ಹೊತ್ತಿನತನಕ ರಮೆಯ ಬಾಗಿದ ಒಣ ಮೊಗದ ಕಡೆ ನೋಡುತ್ತಿದ್ದು ಕೊನೆಗೆಂದಳು.

'' ಇವತ್ತು ಒಂದು ಮಾತು ಹೇಳುತ್ತೇನೆ ಅಮ್ಮಾ, ನಿನಗೆ. ಆಸ್ತಿಸಂಪತ್ತುಗಳನ್ನು ಉಳಿಸಿಕೊಳ್ಳುವ ಬೆಲೆ ಎಷ್ಟೇ ಆಗಿರಲಿ ರಮೆ, ಈ ರಮೇಶನ ಪ್ರಾಣದ ಬೆಲೆ ಅದಕ್ಕಿಂತ ಬಹಳ ಹೆಚ್ಚು ಹೆಚ್ಚು. ಯಾರ ಮಾತಿನ ಮೇಲೂ, ಯಾವ ಜಿನಿಸಿನ ಮೇಲಿನ ಲೋಭದಿಂದಲೂ, ಅಮ್ಮಾ, ಆ ಸಾಮಾನನ್ನು ನೀವು ನಾಲ್ಕು ಕಡೆಗಳಿಂದಲೂ ಪೆಟ್ಟಿಕ್ಕಿ ಹಾಳು ಮಾಡಿ ಹಾಕಬೇಡಿ. ನಾಡಿಗೆ ಅದರಿಂದುಂಟಾಗುವ ಹಾನಿ, ನಾನು ನಿಜವಾಗಿ ಹೇಳುತ್ತೇನೆ ನಿನಗೆ ಏತರಿಂದಲೂ ಏನು ಬದಲು ಕೊಟ್ಟರೂ ಇನ್ನು ನಿಮ್ಮಿಂದ ತೀರಿಸಲಾಗದು. ''

ರಮೆ ಬಿಗಿದುಕೊಂಡು ಕೂತಿದ್ದಳು, ಒಂದು ಮಾತಿಗೂ

ಪ್ರತ್ಯುತ್ತರವನ್ನೀಯಲಿಲ್ಲ. ವಿಶ್ವೇಶ್ವರಿಯೂ ಇನ್ನೇನನ್ನೂ ಹೇಳಲಿಲ್ಲ. ಕೊಂಚ ಹೊತ್ತಿನ ಮೇಲೆ ರಮೆ ಗೊಣಗಿನ ಮೆದುದನಿಯಲ್ಲಿ ಎಂದಳು. "ಹೊತ್ತಾಯಿತು, ಇವತ್ತು ಮನೆಗೆ ಹೋಗುತ್ತೇನೆ ದೊಡ್ಡಮ್ಮ!" ಎಂದು ಪ್ರಣಾಮ ಮಾಡಿ ಪಾದಧೂಳಿಯನ್ನು ತಲೆಗೆ ಮುಡಿದು ಹೊರಟು ಹೋದಳು.

೯

ಎಷ್ಟೆ ರೋಷದಿಂದ ರಮೇಶನು ಬಂದಿದ್ದರೂ ಮನೆಗೆ ಸೇರಿದೊಡ ನೆಯೆ ಅವನ ಉತ್ಸಾಹವೆಲ್ಲಾ ನೀರಾಗಿಳಿದು ಹೋಯಿತು. ಅವನು ಬಾರಿ ಬಾರಿಗೂ ಹೇಳಿಕೊಂಡನು. "ಈ ನೆಟ್ಟನೆಯ ಮಾತನ್ನು ಅರಿಯದೆ ಎಂಥಹ ಕಷ್ಟ ಅನುಭವಿಸುತ್ತಿದ್ದೆ! ವಾಸ್ತವಿಕವಾಗಿ ಕೋಪಮಾಡು ವುದು ಯಾರ ಮೇಲೆ? ಯಾರು ಇಷ್ಟು ಕಿರಿದಾದ ತೆರನಲ್ಲಿ ಸ್ವಾರ್ಥಪರರು ಅವರ ನಿಜವಾದ ಕಲ್ಯಾಣವು ಎಲ್ಲೆಂಬುದನ್ನು ಕಣ್ತೆರೆದು ನೋಡಲರಿ ಯರು, ಶಿಕ್ಷಣ ಇಲ್ಲದುದರಿಂದ ಇಷ್ಟು ಕುರಡರು ಹೇಗಾದರನೆ ನೆರೆ ಯನ ಬಲವನ್ನು ತಗ್ಗುಬಡಿಯುವುದೆ ತಮ್ಮ ಬಲದ ಪೇರ್ಚಿಗೆಯ ಉತ್ತಮೋಪಾಯವೆಂದು ಮನಸ್ಸಿನಲ್ಲಿ ತಿಳಿದುಕೊಳ್ಳುವರು; ಒಳಿತನ್ನು ಮಾಡಹೋದರೆ ಸಂಶಯದಿಂದ ಮುಳ್ಳುಮುರಿದಂತೆ ನೆಗೆಯುವುದು; ಇಂಥವರ ಮೇಲೆ ಸಿಟ್ಟು ಮಾಡಿ ಪ್ರಯೋಜನವುಂಟೆಂದು ತಿಳಿಯುವಷ್ಟು ಭ್ರಾಂತಿ ಇನ್ನು ಬೇರೆ ಯಾವುದರಲ್ಲಿಯೂ ಇಲ್ಲ." ಅವನ ಮನಸ್ಸಿಗೆ ಬಂತು ದೂರದ ಪಟ್ಟಣದಲ್ಲಿ ಕೂತು ಪುಸ್ತಕವನ್ನು ಓದಿ ಕತೆಯನ್ನು ಕೇಳಿ, ಕಲ್ಪನೆ ಮಾಡಿ ಎಷ್ಟೋ ಸಲ ಭಾವಿಸಿದಾನೆ. "ನಮ್ಮಗಳ ಜಾತಿ ಯಲ್ಲಿ ಇನ್ನೇನೂ ಇಲ್ಲದೆ ಇದ್ದರೂ ಒಂಟೊಂಟಿಯಾಗಿರುವ ಒಳಪ್ರದೇಶದ ಗ್ರಾಮಗಳಲ್ಲಿ ಆ ಶಾಂತಿಸ್ವಚ್ಛಂದಕೆ ಈ ಹೊತ್ತೂ ಇದೆ. ಬಹು ಜನಾ ತೀರ್ಣವಾದ ಪಟ್ಟಣಗಳಲ್ಲಿ ಅದು ಎಲ್ಲಿ ಬಂದೀತು. ಅಲ್ಲಿ ಸ್ವಲ್ಪರಿಂದಲೆ ಸಂತುಷ್ಟರಾದ ಸರಳ ಗ್ರಾಮವಾಸಿಗಳು ಪರಸ್ಪರ ಸಹಾನುಭೂತಿಯಿಂದ ಕರಗುತ್ತಾರೆ. ಒಬ್ಬನ ದುಃಖದಲ್ಲಿ ಇನ್ನೊಬ್ಬನು ಎದೆಗೊಟ್ಟು ಬಂದೊ ದಗುವನು, ಒಬ್ಬನ ಸುಖದಲ್ಲಿ ಇನ್ನೊಬ್ಬನು ಕರೆಯದೆಯೆ ಬಂದು

ಸಂತೋಷಿಸುವನು. ಶುದ್ಧವಾಗಿ ಅಲ್ಲಿಯೇ ಅವರ ಹೃದಯಗಳಲ್ಲಿ ಇನ್ನಿದುವರೆಗೂ ಕರ್ನಾಟಕರ ಸತ್ಯಸ್ವರೂಪವಾದ ಐಶ್ವರ್ಯ ಅಕ್ಷಯವಾಗಿದೆ. ಆಹಾ! ಇದೆಂತಹ ಭಯಾನಕಭ್ರಾಂತಿ! ಅವನಿಗೆ ಪಟ್ಟಣಿನಲ್ಲಿಯೂ ಈ ಬಗೆಯ ವಿರೋಧ, ಇಷ್ಟು ಪರಶ್ರೀಕಾತರತೆ ಕಂಗಳಿಗೆ ಬೀಳಲಿಲ್ಲ! ತಿರುಗೂ ಆ ಮಾತು ಮನಸ್ಸಿಗೆ ಬಂದು ಅವನ ಸರ್ವಾಂಗಗಳಲ್ಲಿಯೂ ಲೆಕ್ಕವಿಲ್ಲದಷ್ಟು ಹಾವುಚೇಳುಗಳು ಹರಿದಂತಾಯಿತು. ನಗರದ ಜೀವದಿಂದ ಚಂಚಲವಾದ ಹಾದಿಯ ಬದಿಯಲ್ಲಿ ಪಾಪದ ಕುರುಹುಗಳು ಕಣ್ಣಿಗೆ ಬಿದ್ದಾಗಲೆಲ್ಲಾ ಅಂದುಕೊಳ್ಳುತ್ತಿದ್ದನು. ತನ್ನ ಜನ್ಮಭೂಮಿ ಆ ಸಣ್ಣಹಳ್ಳಿಗೆ ಯಾವಾಗ ಹೋಗಿ ಬೀಳುವೆನೊ ಆಗ ಈ ಸಕಲ ದೃಶ್ಯಗಳಿಂದ ಚಿರಕಾಲ ಬಿಡುಗಡೆ ಪಡೆದು ಬದುಕಬಹುದು. ಎಲ್ಲದಕ್ಕಿಂತಲೂ ದೊಡ್ಡದು ಧರ್ಮವೆಂಬುದೆಯಲ್ಲಾ ಅದು ಅಲ್ಲಿ ಇದೆ ಮತ್ತು ಸಾಮಾಜಿಕ ಚರಿತ್ರೆ ಇಂದು ಅಲ್ಲಿ ಅಕ್ಷುಣ್ಣವಾಗಿ ವಿರಾಜಿಸುತ್ತಿದೆ. ಹಾ ಭಗವಂತ! ಎಲ್ಲಿ ಆ ಚರಿತ್ರೆ, ನಮ್ಮ ಪುರಾತನ ಗ್ರಾಮಗಳಲ್ಲಿ ಎಲ್ಲಿ ಆ ಜೀವಂತಧರ್ಮ. ಧರ್ಮದಪ್ರಾಣ ಕಳೆದು ಹೋಗಿರಲು ಅದರ ಹೆಣವನ್ನೇಕೆ ಕಾಪಾಡಿಕೊಂಡಿರಬೇಕು? ಈ ಬಣ್ಣಗೆಟ್ಟ ವಿಕಾರದ ಶವದೇಹವನ್ನು ಗ್ರಾಮ್ಯಸಮಾಜವು ಯಥಾರ್ಥಧರ್ಮವೆಂದಂದುಕೊಂಡು ಜೀವಕ್ಕೆ ಸಂಚಕಾರವಿತ್ತು ಬಿಕ್ಕೊಂಡಿರುವುದು. ಅದರಿಂದುಂಟಾಗಿರುವ ವಿಷಮಯವಾಗಿ ನಾರುತ್ತಿರುವ ರೊಚ್ಚಿನಪಾಚಿಯಲ್ಲಿ ಹಗಲಿರಳು ಕೆಳಕೆಳಕ್ಕೆ ಜಾರಿ ಹೋಗುತ್ತಿದ್ದಾರೆ! ಇಷ್ಟಾದರೂ ಕರುಳುಕೊಯ್ಯುವ ಮರ್ಮದವರಿಗೂ ಮುಟ್ಟುವ ತಮಾಷೆ ಇದೇನೆ ಈ ಪಟ್ಟಣವಾಸಿಗಳಲ್ಲಿ ಜಾತಿಕುಲಧರ್ಮಗಳಿಲ್ಲವೆಂತ ಹಳ್ಳಿಗರು ತಿರಸ್ಕಾರ ಮತ್ತು ಹೀನಾಯ ಮಾಡುತ್ತಿದ್ದಾರೆ.

ರಮೇಶ ಮನೆಯೊಳಕ್ಕೆ ಕಾಲಿಡುತ್ತಲೆ ಕಂಡನು, ಅಂಗಳದೊಂದೆಡೆಯಲ್ಲಿ ಒಬ್ಬ ವಿಡತರದ ಹೆಂಗಸು ಹನ್ನೊಂದ್ಹನ್ನೆರಡು ವರುಷದೊಂದು ಹುಡುಗನನ್ನು ಕರೆತಂದು ಮಂಕು ಬಡಿದವಳಂತೆ ಕೂತಿದ್ದವಳೆದ್ದು ನಿಂತಳು. ಏನೂ ಅರಿಯದೆಯೆ ಹುಡುಗನ ಮೊಗವನ್ನು ನೋಡಿದ ಮಟ್ಟಿಗೇನೆ ಅಳುವಂತೆಯಾಯಿತು. ಗೋಪಾಲ ಗುಮಾಸ್ತೆ ಇನ್ನೊಂದು

ಮೂಲೆಯಲ್ಲಿ ಕೂತು ಬರೆಯುತ್ತಿದ್ದನು; ಎದ್ದು ಬಂದೆಂದನು. “ಹುಡುಗ ತೆಂಕಲು ಕೇರಿಯ ದ್ವಾರಕಾಚಾರರ ಮಗ, ತಮ್ಮಲ್ಲಿ ಏನಾದರೂ ಕೊಂಚ ತಿರುಪೆಗೆ ಬಂದಿದ್ದಾನೆ.”

ತಿರುಪದ ಹೆಸರೆತ್ತಿದೊಡನೆಯೆ ರಮೇಶ ಕಿಡಿಕಿಡಿಯಾಗಿ ಎಂದನು.

“ನಾನೇನು ಸುಮ್ಮನೆ ತಿರುಪೆ ಹಂಚಲಿಕ್ಕೇನೆ ಊರಿಗೆ ಬಂದಿದ್ದೇನಯ್ಯಾ ಗುಮಾಸ್ತೆ? ಊರಿನಲ್ಲೇನು ಇನ್ನು ಜನಗಳೆ ಇಲ್ಲವೊ?”

ಗೋಪಾಲ ಕೊಂಚ ಬೆದರಿ ಎಂದನು. “ಅದು ಸರಿ ರಾಯರೆ! ಆದರೆ ಯಜಮಾನರು ಎಂದಿಗೂ ಯಾರನ್ನೂ ಹಿಂದಿರುಗಿಸುತ್ತಿರಲಿಲ್ಲ; ಆದುದರಿಂದ ದಾಯಕ್ಕೆ ಸಿಕ್ಕಿಕೊಂಡೊಡನೆಯೆ ಈ ಮನೆಯ ಕಡೆಗೆ ಜನಗಳು ಓಡಿಬರುತ್ತಾರೆ.”

ಹುಡುಗನ ಕಡೆ ನೋಡಿ ಎಡತರದ ಹೆಂಗಳನ್ನು ಕುರಿತು ಎಂದನು. “ಹೌದು, ಕಾಮಮ್ಮ ಇವರ ತಪ್ಪೇನೂ ಕಮ್ಮಿಯಿಲ್ಲ, ಮಗು! ಬದುಕಿರುವಾಗಲೆ ಪ್ರಾಯಶ್ಚಿತ್ತ ಮಾಡಿ ಬಿಡಬಾರದಾಗಿತ್ತೆ, ಈಗ ಹೆಣ ಎತ್ತಲಿಕ್ಕೆ ಆಗದೆ ಬಿದ್ದಿರುವಾಗ ದುಡ್ಡಿಗೋಸ್ಕರ ಓಡಾಟವೆ! ಮನೆಯಲ್ಲಿ ತಂಬಿಗೆ ಪಂಚಪಾತ್ರೆ ಸಹ ಇಲ್ಲವೆ ಮಗು?”

ಕಾಮಮ್ಮನು ಜಾತಿಯಲ್ಲಿ ಸಾದರವಳು, ಈ ಹುಡುಗನ ನೆರೆ! ತಲೆಯಾಡಿಸಿಯೆಂದಳು. “ನಂಬಿಗೆಯಾಗದೆ ಇದ್ದರೆ, ಅಪ್ಪಾ ಹೋಗಿ ನೋಡಿ ಒಸ್ಸಿ. ನನ್ನದೇನಾದರೂ ಇದ್ದರೂನೂ ಸತ್ತ ತಂದೆಯನ್ನು ಬಿಡಿಸಿ ಇವನನ್ನು ತಿರುಪಕ್ಕೆ ಕರುತರುತ್ತಿದ್ದೆನೆ? ಕಣ್ಣಿಂದ ಕಾಣದೆ ಹೋದರೂ ಕೇಳಿದ್ದೀರಷ್ಟೆ ಎಲ್ಲಾವ? ಆರುತಿಂಗಳು ಕಳೆಯಿತು, ನನ್ನ ಎಲ್ಲಾನು ಇದಕ್ಕಾಗಿಯೆ ಖರ್ಚಾಗಿ ಹೋಯಿತು; ಎಂತೇನೆ, ಮನೆಯ ಪಕ್ಕದಲ್ಲಿ ಬ್ರಾಂಬರು ಮಕ್ಕಳು ಹೆಣ್ಣು, ಗಂಡು ಹೊಟ್ಟೆಗಿಲ್ಲದೆ ಸತ್ತಾವಲ್ಲಾ ಎಂತ.”

ರಮೇಶ ಈ ಸಲ ವಿಷಯವನ್ನು ಕೊಂಚ ಅನುಮಾನಿಸಬಲ್ಲವನಾದನು. ಆಗ ಗೋಪಾಲ ತಿಳಿಯಪಡಿಸಿದ, “ಈ ಹುಡುಗನ ತಂದೆ ದ್ವಾರಕಾಚಾರರು, ಆರು ತಿಂಗಳಿಂದ ಕೆಮ್ಮಲು ರೋಗದಿಂದ ಹಾಸಿಗೆ

ಹಿಡಿದಿದ್ದು ಮುಂಜಾನೆಯಲ್ಲಿ ಸತ್ತುಹೋದರು; ಪ್ರಾಯಶ್ಚಿತ್ತವಾಗ ಲಿಲ್ಲವೆಂದು ಯಾರೂ ಶವವನ್ನು ಸ್ಪರ್ಶಮಾಡಲೊಲ್ಲರು, ಈಗ ಅದನ್ನು ಮಾಡಬೇಕಾದುದು ಅತ್ಯಂತ ಅವಶ್ಯಕ. ಕಾಮಮ್ಮನು ಹೋದ ಆರು ತಿಂಗಳಿಂದ ತನ್ನ ಸರ್ವಸ್ವವನ್ನೂ ಈ ಬ್ರಾಹ್ಮಣ ಮಕ್ಕಳುಮರಿಗಾಗಿ ಖರ್ಚು ಮಾಡಿ ಬಿಟ್ಟಿದ್ದಾಳೆ. ಆದ್ದರಿಂದ ಹುಡುಗನನ್ನು ಕರೆದುಕೊಂಡು ನಿಮ್ಮಲ್ಲಿ ಬಂದಿದ್ದಾಳೆ."

ರಮೇಶ ಕೊಂಚ ಹೊತ್ತು ಸುಮ್ಮನಿದ್ದು ಕೇಳಿದನು. "ಹೊತ್ತು ಸುಮಾರು ಎರಡು ಗಂಟೆ ಹೊಡೆಯುತ್ತದೆ. ಪ್ರಾಯಶ್ಚಿತ್ತವಾಗದೆ ಹೋದರೆ ಹೆಣ ಬಿದ್ದೇಯಿರುತ್ತೆಯೆ ?"

ಗುಮಾಸ್ತರು ನಕ್ಕು ಎಂದರು. "ಉಪಾಯವೇನಿದೆ, ರಾಯರೆ ? ಅಶಾಸ್ತ್ರೀಯವಾದ ಕೆಲಸವಂತೂ ಮಾಡಲೆ ಆಗದು. ಇನ್ನು ಇದಕ್ಕೆ ಆ ಕೇರಿಯವರನ್ನು ತಾನೆ ದೋಷಿಗಳೆಂತ ಯಾರು ಅಂದಾರು ? ಏನೆ ಆಗಲಿ, ಹೆಣ ಬಿದ್ದಿರುವುದಿಲ್ಲ; ಏನಾದರೂ ಮಾಡಿ, ಕೆಲಸ ಅವರು ಮಾಡಲೇ ಬೇಕು. ಅದಕಾಗಿಯೇ ತಿರುಪೆ– ಹೌದಮ್ಮಾ ಕಾಮಮ್ಮ, ಇನ್ನೆಲ್ಲಾದರೂ ಹೋಗಿದ್ದಿರಾ ? '

ಹುಡುಗನು ಹಿಡಿಯನ್ನು ಬಿಚ್ಚಿ ಒಂದು ನಾಲ್ಕಾಣೆ ಬಿಲ್ಲೆ ಮತ್ತು ನಾಲ್ಕು ಮೂರು ಕಾಸಿನ ಬೊಟ್ಟುಗಳನ್ನು ತೋರಿದನು. ಕಾಮಮ್ಮ ನೆಂದಳು, "ನಾಲ್ಕಾಣೆ ಬಿಲ್ಲೆ ಕಳ್ಳಂಬಿಯವರವರು ಕೊಟ್ಟದ್ದು, ನಾಲ್ಕು ಒಟ್ಟಗಳು ಹಲಧರರಾಯರಿತ್ತದ್ದು; ಆದರೆ ಎಷ್ಟು ಕಡಿಮೆ ಎಂದರೂ ಎರಡೂಕಾಲು ರೂಪಾಯಿಗಳಿಗಿಂತ ಕಡಮೆಯಾಗದು, ಆದ್ದರಿಂದ ರಾಯರು ಏನಾದರೂ. . "

ರಮೇಶ ದಡಬಡನೆ ಎಂದನು. "ನೀವು ಮನೆಗೆ ಹೋಗಿ, ಇನ್ನೆ ಲ್ಲಿಯೂ ಹೋಗಬೇಕಾಗಿಲ್ಲ! ನಾನು ವ್ಯವಸ್ಥೆ ಮಾಡಿ ಜನಗಳನ್ನು ಕಳುಹಿಸುತ್ತೇನೆ." ಅವರನ್ನು ಕಳುಹಿಸಿ ರಮೇಶನು ಗೋಪಾಲ ಗುಮಾಸ್ತನ ಮೊಗದ ಕಡೆ ಅತ್ಯಂತ ವ್ಯಥೆಯ ಕಂಗಳೆರಡನ್ನೂ ಎತ್ತಿ ಕೇಳಿದನು. "ಇಂಥಹ ಹುಟ್ಟದರಿದ್ರರ ಮನೆಗಳು ಈ ಹಳ್ಳಿಯಲ್ಲಿ ಎಷ್ಟಿವೆ, ನೀವು ಬಲ್ಲಿರಾ ?"

ಗುಮಾಸ್ತರು ಹೇಳಿದರು. "ಎರಡು ಮೂರು ಮನೆಗಳಿವೆ, ಶಾನೆ ಇಲ್ಲ. ಇವರಿಗೂ ದಪ್ಪಕ್ಕಿ ಗಾಥಾಬಟ್ಟೆಗೆ ತಕ್ಕಷ್ಟು ಆಸ್ತಿಯೇನೊ ಇತ್ತು, ರಾಯರೆ; ಬರಿಯೊಂದು ಅಮಟೆ ಮರಕ್ಕಾಗಿ ಮೊಕದ್ದಮೆ ಮಾಡಿ ದ್ವಾರಕಾಚಾರ್ರು ಮತ್ತು ಹಳೆ ಹಾಲಪ್ಪ ಈ ಎರಡು ಮನೆಯ ವರೂ ಈಗ ಐದು ವರುಷಗಳ ಮುಂಚೆಯೆ ಕೊನೆಗೊಂಡು ಹೋದರು."
ದನಿಯನ್ನು ಕೊಂಚ ಗಡಸು ಮಾಡಿ ಎಂದನು. "ಇಷ್ಟು ದೂರಕ್ಕೆ ಹತ್ತುತ್ತಿರಲಿಲ್ಲ, ರಾಯರೆ, ಬರಿ ನಮ್ಮ ದೊಡ್ಡರಾಯರು ಮತ್ತು ಗೋವಿಂದ ಗಂಗಾಳೆ ಇಬ್ಬರು ಎತ್ತಿ ಕಟ್ಟಿ ಉಬ್ಬಿಸಿ ಕುಣಿಸಿ ಇಷ್ಟಕ್ಕೆ ತಂದರು!"

"ಆ ಮೇಲೆ?"

ಗುಮಾಸ್ತನೆಂದನು. "ನಮ್ಮ ದೊಡ್ಡ ರಾಯರಲ್ಲಿಯೆ ಎರಡು ಮನೆಯವರೂ ಕೊರಳತನಕ ಸಾಲದಲ್ಲಿ ಮುಳಿಗಿದ್ದರು. ಹೋದ ವರುಷ ಅವರು ಬಡ್ಡಿ ಅಸಲು ಸೇರಿಸಿ ಎಲ್ಲವನ್ನೂ ಕೊಂಡುಕೊಂಡರು. ಹೌದು, ಒಕ್ಕಲುಮಗಳು ಅವಳು ಕಾಮುಮ್ಮ! ಕಷ್ಟದಲ್ಲಿ ಬ್ರಾಹ್ಮಣ ನಿಗೆ ಅವಳು ಮಾಡಿದ ಉಪಕಾರ ಇನ್ನೆಲ್ಲೆಲ್ಲಿಯೂ ಕಂಡರಿಯೆ!"

ರಮೇಶ ನಿಟ್ಟುಸಿರು ಬಿಟ್ಟು ಸುಮ್ಮನಿದ್ದನು. ಆ ಮೇಲೆ ಗೋಪಾಲ ಗುಮಾಸ್ತೆಯನ್ನು ಅನುಕೂಲಗಳನ್ನೆಲ್ಲಾ ಮಾಡಿಕೊಡು ವಂತೆ ಕಳುಹಿಸಿ ಕೊಟ್ಟು ಮನಸ್ಸಿನಲ್ಲಿಯೆ ಅಂದುಕೊಂಡನು, "ನಿನ್ನ ಅಪ್ಪಣೆಯನ್ನು ತಲೆಯ ಮೇಲೆ ಹೊತ್ತೆ, ದೊಡ್ಡಮ್ಮ! ಸತ್ತೇನೊ, ಅದೂ ಇಲ್ಲಿಯೆ ಆಗಲಿ, ಅದೆ ಉತ್ತಮ, ಅಂತೂ ಈ ದುರ್ಭಾಗ್ಯ ಗ್ರಾಮವನ್ನು ಬಿಟ್ಟು ಇನ್ನೆಲ್ಲಿಯೂ ಹೋಗಬೇಕಾಗದು."

## ೧೦

ಮೂರು ತಿಂಗಳುಗಳಾದ ಮೇಲೆ ಒಂದು ದಿನ ಬೆಳಿಗ್ಗೆ ನಂಜನ ಗೂಡ ನದಿಯ ಮೆಟ್ಟಿಲ ಹತ್ತಿರ ಒಬ್ಬ ಹೆಂಗುಸಿನೊಡನೆ ರಮೇಶನಿಗೆ ಒಂದೇ ಪೆಟ್ಟಿಗೆ ಎದುರು ಬದರು ನೋಟವಾಗಿ ಹೋಯಿತು. ತುಸ ಹೊತ್ತಿನ ತನಕ ಅವನು ಮಂಕು ಬಡಿದವನಂತೆ ಅಭದ್ರ ಭಾವದಿಂದ

ಅವಳ ಮೊಗವನ್ನೂ ನೋಡುತ್ತ ನಿಂತು ತಕ್ಷಣವೇ ದಾರಿಯನ್ನು ಬಿಟ್ಟು ಸರಿದು ನಿಲ್ಲುವದನ್ನು ಸಹ ಮರೆತನು. ಹೆಂಗಸಿನ ವಯಸ್ಸು ಇಪ್ಪತ್ತಕ್ಕೆ ಹೆಚ್ಚಿಲ್ಲ. ಸ್ನಾನಮಾಡಿ ವದ್ದೆಯುಟ್ಟು ಮೇಲಕ್ಕೆ ಹತ್ತುತ್ತಿದ್ದಳು, ದಡಬಡನೆ ಕೊಂಕಳಲ್ಲಿನ ಬಿಂದಿಗೆಯನ್ನು ಕೆಳಗಿಟ್ಟು ಒದ್ದೆಯ ಬಟ್ಟೆಯ ಕೆಳಗೆ ಎರಡು ಕೈಗಳಿಂದಲೂ ಎದೆಯನ್ನು ಮುಚ್ಚಿಕೊಂಡು, ತಲೆಯನ್ನು ಬಾಗಿಸಿ ಮಿದುದನಿಯಲ್ಲಿ ಎಂದಳು. "ನೀವು ಇದೇನು ಇಲ್ಲಿ?"

ರಮೇಶನ ವಿಸ್ಮಯಕ್ಕೆ ಪಾರವೆ ಇಲ್ಲ; ಆದರೆ ಅವನ ಕಳವಳ ತೊಡೆದು ಹೋಯಿತು. ಪಕ್ಕಕ್ಕೆ ಸರಿದು ನಿಂತು ವಿಚಾರಿಸಿದನು. "ನೀವೇನು ನನ್ನನ್ನು ಬಲ್ಲಿರಾ?"

ಹೆಂಗುಸೆಂದಳು. "ಬಲ್ಲೆ, ತಾವಾವಾಗ ನಂಜನಗೂಡಿಗೆ ಬಂದದ್ದು?"

ರಮೇಶನೆಂದನು. ಇವತ್ತೆ ಮುಂಜಾನೆಯಲ್ಲಿ, ನಮ್ಮ ಮಾವ ನವರ ಮನೆಯಿಂದ ಹೆಂಗಸರು ಬರುವ ಮಾತಿತ್ತು, ಆದರೆ ಅವರು ಬರಲಿಲ್ಲ ?

"ಇಲ್ಲಿ ಎಲ್ಲಿ ಇಳಿದಿದ್ದೀರಿ?"

ರಮೇಶನೆಂದನು, "ಎಲ್ಲಿಯೂ ಇಲ್ಲ. ನಾನು ಇಲ್ಲಿಗೆ ಹಿಂದೆಂದೂ ಬಂದವನಲ್ಲ. ಆದರೆ ಈ ಹೊತ್ತು ಇಲ್ಲಿ ಉಳುಕೊಳ್ಳಲೆ ಬೇಕು. ಎಲ್ಲಿ ಯಾದರೂ ಆಗಲಿ ಸ್ಥಳವೊಂದನ್ನು ಹುಡುಕಿಕೊಳ್ಳುತ್ತೇನೆ?"

"ಜೊತೆಯಲ್ಲಿ ಆಳು ಇದ್ದಾರೆಯಷ್ಟೆ?"

"ಇಲ್ಲ, ನಾನೊಬ್ಬನೆ ಬಂದೆ"

"ಒಳ್ಳೇದು ಆದದ್ದಾಗಲಿ," ಎಂದು ಹೆಂಗಸು ನಕ್ಕು ಮೊಗ ವನ್ನು ಎತ್ತುತ್ತಲೆ ತಿರುಗೂ ಇಬ್ಬರ ನೋಟಗಳು ಬೆರತವು. ಅವಳು ನೋಟವನ್ನು ತಗ್ಗಿಸಿಕೊಂಡು, ಮನಸ್ಸಿನಲ್ಲಿಯೆ ಇರಬೇಕು, ಕೊಂಚ ಹಿಂದು ಮುಂದೆ ಮಾಡಿ, "ಹಾಗಿದ್ದರೆ ನನ್ನ ಜೊತೆಯಲ್ಲೆ ಬನ್ನಿ," ಎಂದು ಬಿಂದಿಗೆಯನ್ನು ಎತ್ತಿಕೊಂಡು ಮುಂದೆ ನಡೆಯಲು ತಯಾ ರಾದಳು.

ರಮೇಶ ಕಷ್ಟಕ್ಕೆ ಸಿಕ್ಕಿದನು. "ನಾನು ಬರಬಲ್ಲೆ, ಏಕಲ್ಲ,

ಇದರಲ್ಲಿ ದೋಷವಿದ್ದಿದ್ದರೆ ತಾವೆಂದಿಗೂ ಕರೆಯುತ್ತಿರಲಿಲ್ಲ. ತಮ್ಮನ್ನು ನಾನು ಗುರ್ತು ಹಿಡಿಯಲಾರದೆ ಇದ್ದೇನೆ; ಅಷ್ಟೆಯಲ್ಲ ಹೇಗೆ ಹೇಗೆ ಮಾಡಿದರೂ ನನಗೆ ನೆನಪಿಗೆ ಬಾರದೆ ಇದೆ, ತಮ್ಮ ಪರಿಚಯವನ್ನು ಕೊಡಬೇಕಾಗಬೇಕು."

"ಹಾಗಿದ್ದರೆ ದೇವಸ್ಥಾನದ ಹೊರಗೆ ಕೊಂಚ ಕಾಯಬೇಕಾಗಲಿ, ನಾನು ಪೂಜೆ ಮುಗಿಸಿ ಬರುತ್ತೇನೆ! ದಾರಿಯಲ್ಲಿ ನಡೆಯುತ್ತಾ ನನ್ನ ಪರಿಚಯವನ್ನು ತಿಳುಹುತ್ತೇನೆ," ಎಂದು ದೇವಸ್ಥಾನದ ಕಡೆ ಹೊರಟು ಹೋದಳು.

ರಮೇಶನು ಮೂಗನಂತೆ ನೋಡುತ್ತಿದ್ದನು. ಇದೇನು ಸುಭಗವಾದ ಮಿತಿಮೀರಿದ ಯೌವನಶ್ರೀ ಇವಳ ತೊಯ್ದುಡುಗೆಯನ್ನು ಬಿರಿದು ಹೊರಹೊಮ್ಮುವಂತಿದೆ! ಅವಳ ಮೊಗದ ಮಾಟ, ಕಾಲನಡಗೆ ಸಹ, ರಮೇಶನಿಗೆ ಗುರ್ತಿದೆ, ಆದರೂ ಬಹುದಿನಗಳಿಂದ ಮುಚ್ಚಿದ ಜ್ಞಾಪಕದ ಬಾಗಿಲು ಅವನೇನ ಮಾಡಿದರೂ ತೆರೆಯಲಾಗದಿದೆ. ಅರ್ಧ ತಾಸಿನ ಮೇಲೆ ಪೂಜೆಯನ್ನು ಮುಗಿಸಿ ಹೆಂಗಸು ತಿರುಗೂ ಹೊರಗೆ ಬರಲು ಇನ್ನೊಂದು ಸಲ ಅವಳ ಮೊಗ ರಮೇಶನಿಗೆ ನೋಡಲು ಸಿಕ್ಕಿತು, ಆದರೂ ಹಾಗೆಯೆ ಅಪರಿಚಯದ ದುರ್ಭೇದ್ಯ ಪಾಳಿಯ ಹೊರಗೆಯೆ ಇದ್ದನು. ದಾರಿಯನ್ನು ನಡೆಯುತ್ತಲೆ ರಮೇಶನು ವಿಚಾರಿಸಿದನು. " ಜತೆಯಲ್ಲಿ ನಿಮ್ಮವರಾರೂ ಇಲ್ಲವೆ ?"

ಹೆಂಗಸು ಉತ್ತರವಿತ್ತಳು. " ಇಲ್ಲ, ಆಳು ಇದ್ದಾಳೆ. ನಾನು ಇಲ್ಲಿಗೆ ಬರುತ್ತಲೆ ಇರುತ್ತೇನೆ, ಎಲ್ಲಾ ಗುರ್ತಿದೆ "

ಆದರೆ ನನ್ನನ್ನು ಜೊತೆಯಲ್ಲೇಕೆ ಕರೆದೊಯ್ಯುತ್ತೀರಿ ?"

ಹೆಂಗಸು ಕೊಂಚ ಹೊತ್ತು ಸುಮ್ಮನೆ ದಾರಿ ನಡೆದ ಮೇಲೆ ಎಂದಳು. " ಇಲ್ಲದೆ ಹೋದರೆ ತಮಗೆ ಊಟೋಪಚಾರಗಳಿಗೆ ಬಲು ಕಷ್ಟವಾಗುತ್ತಿತ್ತು ! ನಾನು ರಮ. "

* * * *

ಎಡೆಯ ಮುಂದೆ ಕೂತು ಉಣಿಸಿ, ವೀಳೆಯವನ್ನಿತ್ತು ವಿಶ್ರಾಮಕ್ಕಾಗಿ ತನ್ನ ಕೈಯಿಂದಲೆ ರತ್ನಗಂಬಳಿಯನ್ನು ಹಾಸಿ, ರಮೆ ಬೇರೆ

ಕೋಣೆಗೆ ಹೊರಟು ಹೋದಳು. ಅದೆ ಹಾಸುಗೆಯಲ್ಲಿ ಉರುಳಿಬಿದ್ದು ಕಣ್ಮುಚ್ಚಿ ರಮೇಶನ ಮನದಲ್ಲಿ ತನ್ನ ಈ ಇಪ್ಪತ್ತುಮೂರು ವರುಷ ವ್ಯಾಪಿಯಾದ ಬದುಕು ಒಂದೇ ಹೊತ್ತಿಗೆ ಬುಡಮುಟ್ಟ ಬದಲಾಯಿಸಿತೊ ಏನೋ ಎನಿಸಿತು. ಹುಡುಗತನದಿಂದಲೂ ಅವನು ವಿದೇಶದಲ್ಲಿ ಪರಾಶ್ರಯದಲ್ಲಿ ಕಾಲ ಕಳೆದಿದ್ದಾನೆ. ಊಟ ಮಾಡಿಸುವುದರಲ್ಲಿ ಸಂಕೋಚದ ನಡವಳಿವಿನಾ ಹೆಚ್ಚಿನದೇನಾದರೂ ಯಾವ ಅವಸ್ಥೆಯಲ್ಲಿಯೂ ಇರಬಹುದೆಂಬುದು ಅವನಿಗೆ ಅರಿವೇ ಇರಲಿಲ್ಲ. ಆದುದರಿಂದಲೆ, ಇಂದಿನ ಈ ಅಚಿಂತನೀಯ ಪರಿತೃಪ್ತಿಯಲ್ಲಿ ಅವನ ಮನಸ್ಸೆಲ್ಲಾ ವಿಸ್ಮಯ ಮಾಧುರ್ಯಗಳಿಂದ ಒಂದೆ ಪೆಟ್ಟಿಗೆ ಮುಳಿಗಿಹೋಯಿತು. ರಮೆಗೆ ಅವನ ಊಟೋಪಚಾರಕ್ಕಾಗಿ ಹೆಚ್ಚಿನದೇನನ್ನೂ ಕೂಡಿಸಲನುಕೂಲವಿರಲಿಲ್ಲ. ಸುತರಾಂ ಸಾಧಾರಣದ ಅಡುಗೆಯಿಂದಲೆ ಅವನಿಗೆ ಊಟ ಮಾಡಿಸಿದ್ದಾಳೆ. ಊಟ ಸರಿಯಾಗಿ ಮಾಡಿಸದೆ ಪರರಲ್ಲಿ ನಿಂದೆಗೆ ಎಲ್ಲಿ ಗುರಿಯಾಗಬೇಕಾಗುವುದೊ ಎಂದು ಅವಳಿಗೆ ಬಹಳ ಯೋಚನೆಯಾಗಿತ್ತು. ಊಟ ಸರಿಬೀಳದೆ ಹೋದೀತಲ್ಲವೆಂಬ—ತಲ್ಲಣವು ತನ್ನ ಸ್ವಂತದುದೆ ಎಷ್ಟೋ ಮತ್ತು ಅದು ಅವಳ ಒಳಗಣ ಅಂತರತಮದ ಗುಹೆಯಿಂದ ಅಕಸ್ಮಾತ್ತಾಗಿ ಎಚ್ಚರಗೊಂಡು ಅವಳೆಲ್ಲಾ ಬಗೆಯ ಸಂಶಯ ಸಂಕೋಚಗಳನ್ನು ಬಲವಂತದಿಂದ ವತ್ತಲಿಸಿತ್ತೆಸೆದು ಎಡೆಯ ಬಳಿಗೆ ಅವಳನ್ನು ತಳ್ಳಿ ತಂದಿತ್ತು. ಈ ಮಾತನ್ನು ಏನು ಮಾಡಿ ಇಂದು ತನ್ನಲ್ಲಿ ತಾನೆ ಮುಚ್ಚಿಟ್ಟುಕೊಳ್ಳಲಾದೀತು. ಇಂದಂತೂ ಯಾವ ನಾಚಿಕೆಯ ಕಟ್ಟಳೆಯೂ ಅವಳನ್ನು ಬಿಗಿದು ದೂರವಿರಿಸಲಾರದೆ ಹೋಯಿತು. ಕೊರತೆಯ ನ್ಯೂನತೆಯನ್ನು ಉಪಚಾರದಿಂದ ತುಂಬಲು ಅವಳೆ ಎದುರಿಗೆ ಬಂದು ಕೂತಳು. ಊಟವು ಸಂಕೋಚವಿಲ್ಲದೆ ಮುಗಿದ ಮೇಲೆ ಸಂಪೂರ್ಣ ಪರಿತೃಪ್ತಿಯ ನಿಟ್ಟುಸಿರೊಂದು ರಮೆಯ ಸ್ವಂತ ಹೃದಯದೊಳಗಿಂದಲೆ ಹೊರಬಿದ್ದಿತು. ಅದು ರಮೇಶನಿಗಿಂತ ತನ್ನದೆ ಎಷ್ಟು ಹೆಚ್ಚು ಎಂಬುದನ್ನು ಇನ್ನಾರು ಅರಿಯದೆ ಹೋದರೂ ಎಲ್ಲವನ್ನೂ ಬಲ್ಲವನ ಹತ್ತಿರ ಗೌಪ್ಯವಾಗಿರುವುದುಂಟೆ !

ಹಗಲ ನಿದ್ರೆ ರಮೇಶನಿಗೆ ಅಭ್ಯಾಸವಿಲ್ಲ. ಅವನೆದುರಿನ ಚಿಕ್ಕ ಕಿಟಕಿಯ ಹೊರಗೆ ಹೊಸ ಮೋಡವು ದೂಳಿನಿಂದ ದೂಸರವಾದ ಕಪ್ಪಿನಿಂದ

ಮುಗಿಲನ್ನು ಮುಸುಕುತಲಿತ್ತು. ಅರೆ ಮುಚ್ಚಿದ ಕಂಗಳಿಂದ ಅವನದನ್ನೆ ನೋಡುತ್ತಲಿದ್ದನು. ಅವನ ಸ್ವಂತ ಜನಗಳು ಬರುವುದರ ಅಥವಾ ಇಲ್ಲದ್ದರ ಮಾತು ಅವನ ಮನದಲ್ಲಿ ಇರಲೆ ಇಲ್ಲ. ಹಠಾತ್ತು ರಮೆಯ ದನಿಯು ಅವನ ಕಿವಿಗೆ ಬಿದ್ದಿತು, ಅವಳು ಬಾಗಿಲ ಹೊರಗೆ ನಿಂತು ಹೇಳುತ್ತಲಿದ್ದಳು. "ಈ ಹೊತ್ತು ಮನೆಗೆ ಹಿಂತಿರುಗುವುದಾಗದೆ ಹೋದರೆ ಇಲ್ಲೆ ಇದ್ದು ಬಿಡಿ."

ರಮೇಶ ದಡಬಡನೆ ಎದ್ದು ಕೂತು ಎಂದನು. "ಆದರೆ ಈ ಮನೆಯ ಯಜಮಾನರನ್ನು ಇನ್ನೂ ನೋಡಿಲ್ಲ. ಅವರು ಹೇಳದೆ ನಾನು ಇರುವುದು ಹೇಗೆ?"

ರಮೆ ಅಲ್ಲೆ ನಿಂತು ಉತ್ತರವಿತ್ತಳು. "ಆದರೆ ಅವರೇ ಹೇಳುತ್ತಾರೆ ಇರಿ ಅಂತ; ಈ ಮನೆ ನನ್ನದು."

ರಮೇಶ ಅಚ್ಚರಿಗೊಂಡು ಕೇಳಿದನು. "ಈ ಸ್ಥಳದಲ್ಲಿ ಮನೆಯೇಕೆ?"

ರಮೆಯಂದಳು. "ಈ ಸ್ಥಳ ನನಗೆ ಬಹಳ ಚೆನ್ನಾಗಿದೆ, ಇಲ್ಲಿ ಆಗಾಗ್ಗೆ ಬಂದಿರುತ್ತೇನೆ. ಈಗ ಜನವಿಲ್ಲವಾದರೂ, ಕೆಲಸಕಾರ್ಯಗಳ ಸಮಯಗಳಲ್ಲಿ ಇಲ್ಲಿ ಕಾಲಿಡಲಿಕ್ಕೆ ಸಹ ಸ್ಥಳವಿರುವುದಿಲ್ಲ."

ರಮೇಶನೆಂದನು. "ಒಳ್ಳೆದಾಯಿತು, ಆ ಸಮಯದಲ್ಲಿ ಬಾರದೆ ಹೋದರೆ ತೀರಿತು!"

ರಮೆ ಸುಮ್ಮನಿದ್ದು ತುಸು ನಕ್ಕಳು.

ರಮೇಶ ತಿರುಗೂ ಕೇಳಿದನು. "ಸಂಜನಗೂಡ ದೇವರಲ್ಲಿ ನಿಮಗೆ ಬಹಳ ಭಕ್ತಿಯಿರಬೇಕಲ್ಲವೆ?"

ರಮೆಯೆಂದಳು. "ಅಂತಹ ಭಕ್ತಿ ಇನ್ನೆಲ್ಲಿಯುಂಟು? ಆದರೆ ಬದುಕಿರುವವರೆಗೆ ಯತ್ನ ಮಾಡುತ್ತಿರಬೇಕಷ್ಟೆ."

ರಮೇಶ ಇನ್ನು ಪ್ರಶ್ನೆ ಹಾಕಲಿಲ್ಲ. ರಮೆ ಅಲ್ಲಿಯೆ ಹೊಸ್ತಿಲಕ್ಕೆ ಒರಗಿ ಕೂತುಕೊಂಡು ವಿಚಾರಿಸಿದಳು. "ರಾತ್ರಿ ನಿಮ್ಮ ಊಟದ ಕಟ್ಲೆಯೇನು?"

ರಮೇಶ ನಕ್ಕು ಎಂದನು. "ದೊರಕಿದ್ದನ್ನೆ ಉಣ್ಣುತ್ತೇನೆ. ನನಗೆ

ಎಡೆಯ ಮುಂಪೆ ಕೂಡುವವರೆಗೆ ಎಂದಿಗೂ ಊಟದ ಮಾತು ಮನಸ್ಸಿಗೆ ಬಾರದು. ಆದ್ದರಿಂದ ಅಡಿಗೆ ಆಚಾರ್ಯರ ವಿವೇಚನೆಯ ಮೇಲೆಯೆ ನಾನು ಸಂತುಷ್ಟನಾಗಿರಬೇಕಾಗಿದೆ.''

ರಮೆಯೆಂದಳು. "ಇಷ್ಟು ವೈರಾಗ್ಯವೇಕೆ?''

ಇದು ಮರೆಮಾಚಿದ ಹಗೆತನವೊ ಅಥವಾ ಸರಳ ಪರಿಹಾಸವಷ್ಟೆ ಗೇನೋ ರಮೇಶ ತಿಳಿಯಲಾರದೆ ಸಂಕ್ಷೇಪವಾಗಿ ಉತ್ತರವಿತ್ತನು. "ಇಲ್ಲ, ಇದು ಬರಿ ಆಲಸ್ಯ.''

"ಆದರೆ ಬೇರೆ ಕೆಲಸಗಳಲ್ಲಿ ನಿಮಗೆ ಆಲಸ್ಯವಿರುವುದು ಕಂಡು ಬಂದಿಲ್ಲ?''

ರಮೇಶನೆಂದನು. "ಅದಕ್ಕೆ ಕಾರಣವುಂಟು. ಪರರ ಕೆಲಸದಲ್ಲಿ ಆಲಸ್ಯವನ್ನು ತೋರಿದರೆ ದೇವರಲ್ಲಿ ಹೇಳಿಕೊಳ್ಳಬೇಕಾಗುತ್ತೆ. ಸ್ವಂತ ಕೆಲಸಕ್ಕೂ ಅದೆ ಉಂಟು, ಆದರೂ ಅಷ್ಟಿಲ್ಲ.''

ರಮೆ ಕೊಂಚ ಸುಮ್ಮನಿದ್ದು ಎಂದಳು. "ನಿಮ್ಮಲ್ಲಿ ಹಣವಿದೆ, ಅದಕ್ಕೇನೆ ತಾವು ಪರರ ಕೆಲಸಕ್ಕೆ ಮನಸ್ಸು ಕೊಡಬಲ್ಲಿರಿ; ಹಾಗಿಲ್ಲದವರಿಗಾದರೊ?''

ರಮೇಶನೆಂದನು. "ಅವರ ಮಾತು ನಾನು ಕಾಣೆ, ರಮೆ! ಏಕೆಂದರೆ, ಹಣವಿರುವುದಕ್ಕೂ ಪಾರವಿಲ್ಲ, ಮನಸ್ಸು ಕೊಡುವುದಕ್ಕೂ ಸೇರು ಒಟ್ಟುಯೆಂತ ಗೊತ್ತಾದ ಅಳತೆಯಿಲ್ಲ. ಹಣವಿರುವುದು ಇಲ್ಲದ್ದರ ಗಣನೆ ಇಹಪರಗಳ ಭಾರವನ್ನು ವಹಿಸಿರುವ ಭಗವಂತನೆ ಬಲ್ಲ.''

ರಮೆ ಕೊಂಚ ಹೊತ್ತು ಸುಮ್ಮನಿದ್ದು ಎಂದಳು. "ಆದರೆ ಪರ ಕಾಲದ ಚಿಂತೆ ಮಾಡುವ ವಯಸ್ಸು ನಿಮಗಿನ್ನೂ ಆಗಿಲ್ಲ. ನೀವು ನನ ಗಿಂತ ಮೂರು ವರುಷ ಮಾತ್ರ ದೊಡ್ಡವರು.''

ರಮೇಶ ನಕ್ಕು ಎಂದನು. "ಹಾಗೆಂದರೆ, ನಿನಗೆ ಇನ್ನೂ ಆಗಿಲ್ಲ ವೆಂತ! ದೇವರು ಹಾಗೆಯೆ ಮಾಡಿಸಲಿ, ನೀನು ಬಹುಕಾಲ ಬದುಕು; ಆದರೆ ನಾನು ನನ್ನ ಸ್ವಂತದ ವಿಷಯವಾಗಿ ಇವತ್ತೆ ನನ್ನ ಕೊನೆಯ ದಿನವಲ್ಲವೆಂಬೀ ಮಾತನ್ನು ಎಂದಿಗೂ ಮನಸ್ಸಿಗೆ ತಾರೆನು.''

ಅವನ ಮಾತಿನೊಳಗೆ ಮರೆಯಾಗಿ ಪೆಟ್ಟೊಂದಿದ್ದಿತು, ಅದು ವ್ಯರ್ಥ

ವಾಗಲಿಲ್ಲವೆಂದು ತೋರುತ್ತೆ. ಕೊಂಚ ಬಿಕ್ಕೊಂಡಿದ್ದು ರಮೆ ಧಟ್ಟನೆ ಕೇಳಿದಳು. “ತಾವು ಸಂಧ್ಯಾವಂದನೆ ಮಾಡಿದ್ದೂ ಕಾಣಿಸಲಿಲ್ಲ. ದೇವ ಸ್ಥಾನದಲ್ಲಿ ಏಸಿದೆ ಏನಿಲ್ಲವೆಂಬುದ ಸಹ ಹೋಗಿ ನೋಡದೆ ಹೋದಿರಿ, ಆದರೆ ಊಟಕ್ಕೆ ಕೂತಾಗ ಆಪೋಶನವನ್ನು ಸಹ ಮರೆತಿದ್ದಿರಾ?”

ರಮೇಶ ಮನಸಿನಲ್ಲೆ ನಕ್ಕು ಎಂದನು. “ಮರೆಯಲಿಲ್ಲ ಸರಿ, ಮರೆತರೂ ನಷ್ಟವೆಂದು ಭಾವಿಸಲಿಲ್ಲ. ಆದರೆ ಈ ಮಾತೇಕೆ?”

ರಮೆಯೆಂದಳು. “ಪರಕಾಲದ ಭಾವನೆ ತಮಗೆ ಹೆಚ್ಚಿಲ್ಲಾ, ಅದಕ್ಕೆ ಕೇಳಿದೆ.”

ರಮೇಶ ಇದಕ್ಕೆ ಉತ್ತರವೀಯಲಿಲ್ಲ. ಆದಾದ ಮೇಲೆ ಇಬ್ಬರೂ ಕೊಂಚ ಹೊತ್ತಿನವರೆಗೆ ಸುಮ್ಮನೆ ಇದ್ದರು. ರಮೆ ಮೆಲ್ಲ ಮೆಲ್ಲನೆ ಎಂದಳು. “ನೋಡಿ, ನನಗೆ ಬಹುಕಾಲ ಬದುಕೆಂದು ಹೇಳುವುದು ಬರಿ ಶಾಪ. ನಮ್ಮ ಹಿಂದುಗಳ ಮನೆಯಲ್ಲಿ ವಿಧವೆ ಬಹುಕಾಲ ಬದುಕಲೆಂದು ಯಾರೂ ಎಂದಿಗೂ ಆಶಿಸರು” ಎಂದು ತಿರುಗೂ ಕೊಂಚ ಸುಮ್ಮನೆ ಇದ್ದು ಹೇಳಿದಳು. “ನಾನು ಸಾಯುವುದಕ್ಕೆ ಹೆಜ್ಜೆ ಮುಂದಿಟ್ಟು ನಿಂತಿದ್ದೇನೆ, ಇದು ನಿಜವಲ್ಲ ಸರಿಯೆ, ಆದರೂ ಬಹುದಿನ ಬದುಕಿರ ಬೇಕಾದ ಮಾತು ಮನಸ್ಸಿಗೆ ಬಂದರೆ ನನಗೆ ಭಯವಾಗುತ್ತೆ. ತಮ್ಮ ವಿಷಯದಲ್ಲಿ ಮಾತ್ರ ಆ ಮಾತು ಒಪ್ಪದು! ತಮಗೆ ಬಲವಂತ ಮಾಡಿ ಯಾವ ಮಾತನ್ನು ಹೇಳುವುದೂ ನನ್ನಲ್ಲಿ ಹರಟೆಮಲ್ಲತನವೆನಿಸುತ್ತೆ; ಆದರೆ ಸಂಸಾರದಲ್ಲಿ ಹೊಕ್ಕು ಪರರಿಗೆ ತಲೆ ನೋಯಿಸಿಕೊಳ್ಳುವುದು ಅತ್ಯಂತ ಹುಡುಗಾಟವೆಂದು ಮನಸ್ಸಿಗೆ ತೋಚಿದಾಗ ನನ್ನ ಈ ಮಾತನ್ನು ಮನಸ್ಸಿಗೆ ತಂದುಕೊಳ್ಳಬೇಕು.”

ಪ್ರತ್ಯುತ್ತರವಾಗಿ ರಮೇಶ ಬರಿ ನಿಟ್ಟುಸಿರೊಂದನ್ನು ಬಿಟ್ಟನು. ಕೊಂಚ ಹೊತ್ತಿನ ಮೇಲೆ ರಮೆಯಂತೆಯೆ ಮೆಲ್ಲ ಮೆಲ್ಲನೆ ಎಂದನು. “ಆದರೆ ನಿನ್ನನ್ನು ನೆನೆದು ಹೇಳುತ್ತಲಿದ್ದೇನೆ, ಇಂದು ನನಗೆ ಈ ಮಾತು ಏನು ಮಾಡಿದರೂ ಮನಸಿಗೆ ಹತ್ತುವಹಾಗಿಲ್ಲ. ನಾನು ನಿನಗೆ ಯಾರೂ ಅಲ್ಲ, ರಮೆ, ಆದಕ್ಕೆ ಬದಲು ನಿನ್ನ ದಾರಿಯು ಮುಳ್ಳು. ಆದರೂ ನೆರೆ ಯೆಂದು ಇಂದು ನಿನ್ನಿಂದ ನಾನು ಪಡೆದ ಉಪಚಾರ ಸಂಸಾರ ಹೊಕ್ಕು

ತಮ್ಮ ಸ್ವಂತ ಜನಗಳಿಂದಲೆ ಪಡೆದವರೆಂದು ನನಗೆ ಹೊಳೆಯುತ್ತೆ, ಪರರ ದುಃಖಕಷ್ಟಗಳನ್ನು ಕಣ್ಣಾರಕಂಡದ್ದೆ ಆದರೆ ಹುಚ್ಚು ಹತ್ತಿ ಓಡಿ ಬಿಡುವುದು. ಈಗ ತಾನೆ ನಾನೊಬ್ಬನೆ ಕೂತು ಸುಮ್ಮನೆ ಭಾವಿಸುತ್ತಿದ್ದೆ, ನನ್ನ ಸಮಸ್ತ ಜೀವಮಾನವನ್ನು ನೀನು ಒಪ್ಪೊತ್ತಿನಲ್ಲಿ ಬುಡಮುಟ್ಟ ಬದಲಾಯಿಸಿ ಬಿಟ್ಟೆಯಲ್ಲಾ. ಹೀಗೆ ಯಾರೂ ಒಂದು ದಿನವಾದರೂ ನನಗೆ ಉಣ್ಣಲಿಕ್ಕೆ ಹೇಳಲಿಲ್ಲ; ಇಷ್ಟು ಯತ್ನಪಟ್ಟು ಯಾರೂ ನನಗೆ ಆದರ ತೋರಿಸಿದ್ದಿಲ್ಲ. ಊಟ ಮಾಡುವುದರಲ್ಲಿ ಇಷ್ಟೊಂದು ಆನಂದವಿದೆ ಎಂಬುದನ್ನು ನಿನ್ನಿಂದ ಮೊಟ್ಟಮೊದಲು ಇಂದು ಕಲಿತೆ, ರಮೆ."

ಮಾತು ಕೇಳಿ ರಮೆಯ ಸರ್ವಾಂಗವೂ ಮುಳ್ಳುಮುಳ್ಳಾಗಿ ಝುಮ್ ಝುಮ್ ಎಂದು ಅದುರುತಿತ್ತು; ಆದರೆ ಅವಳು ತಕ್ಷಣವೆ ಸ್ಥಿರಳಾಗಿ ಎಂದಳು. "ಇದನ್ನು ಮರೆಯಲಿಕ್ಕೆ ನಿಮಗೆ ಬಹಳ ವಿಳಂಬವಾಗದು. ಎಂದಾದರೊಂದು ದಿನ ಮನಸ್ಸಿಗೆ ಬಿದ್ದರೆ ಅತಿ ತುಚ್ಛವೆಂದೇ ತೋರೀತು."

ರಮೇಶ ಉತ್ತರವನ್ನೇನೂ ಕೊಡಲಿಲ್ಲ. ರಮೆಯೆಂದಳು. "ದೇಶಕ್ಕೆ ಹೋಗಿ ದೂಷಣೆ ಮಾಡಬೇಡಿ, ಅಷ್ಟೇ ನನ್ನ ಭಾಗ್ಯ."

ರಮೇಶ ತಿರುಗೂ ನಿಟ್ಟುಸಿರೊಂದಿಕ್ಕಿ ಮೆಲ್ಲ ಮೆಲ್ಲನೆ ಎಂದನು. "ಇಲ್ಲ, ರಮೆ, ದೂಷಣೆ ಮಾಡೆ, ಭೂಷಣೆ ಮಾಡಿಯೂ ಅಲೆಯೆ; ಈ ದಿವಸ ನನಗೆ ದೂಷಣೆ ಭೂಷಣೆಗಳಿಗೆ ಮೀರಿದುದು!"

ರಮೆ ಉತ್ತರವೇನನ್ನೂ ಕೊಡದೆ ತುಸ ಹೊತ್ತು ಸ್ಥಿರಳಾಗಿ ಕುಳಿತಿದ್ದು, ತನ್ನ ಕೋಣೆಗೆ ಎದ್ದು ಹೊರಟು ಹೋದಳು. ಅಲ್ಲಿ ಯಾರೂ ಇಲ್ಲದ ಕೋಣೆಯಲ್ಲಿ ಅವಳ ಎರಡೂ ಕಣ್ಣುಗಳೂ ಕಂಬನಿದುಂಬಿ ದಪ್ಪ ದಪ್ಪ ಹನಿಗಟ್ಟಿ ಟಪ ಟಪನೆ ಮಳೆಗರೆದವು.

## ೧೧

ಎರಡು ದಿನಗಳವರೆಗೂ ದೊಡ್ಡ ಮಳೆಯಾಗಿತ್ತು; ಆ ಮಧ್ಯಾಹ್ನ ಮಾತ್ರ ಕೊಂಚ ಬಿಡುವು ಕೊಟ್ಟಿದೆ. ಒಳಂಗಳದ ಜಗುಲಿಯ ಮೇಲೆ ಗೋಪಾಲ ಗುಮಾಸ್ತೆಯ ಹತ್ತಿರ ಕುಳಿತು ರಮೇಶ ಜಮೀನುದಾರಿ

ಕಡತಗಳನ್ನು ನೋಡುತ್ತಿದ್ದಾನೆ. ಅಕಸ್ಮಾತ್ತು ಸುಮಾರು ಇಪ್ಪತ್ತು ಜನ ರೈತರು ಬಂದು, "ಚಿಕ್ಕರಾಯರೆ, ಜೀವ ಉಳಿಸಬೇಕು, ನೀವಿಲ್ಲ ವೆಂದರೆ ಮಕ್ಕಳುಮರಿಗಳ ಕೈಹಿಡಿದು ತಿರಿದುಣ್ಣಬೇಕಾಗುತ್ತೆ!" ಎಂದು ಗೋಳಿಟ್ಟರು.

ರಮೇಶ ಬಿಪ್ಪಾಗಿ ಕೇಳಿದನು. "ಏನಾಯಿತು?"

ರೈತರೆಂದರು; "ಸೂರೆಕರೆಯಷ್ಟು ಗದ್ದೆಬೈಲು ಮುಳಿಗಿ ಹೋಯಿತು, ನೀರು ದೂಡದೆ ಹೋದರೆ ಭತ್ತವೆಲ್ಲಾ ಕೊಳೆತು ಹಾಳಾಗಿ ಹೋಗುತ್ತದೆ. ರಾಯರೆ, ಊರಲ್ಲಿ ಒಂದು ಮನೆ ಸಹ ಉಳಿವಂತೆ ಇಲ್ಲ!"

ಈ ಮಾತು ರಮೇಶನಿಗೆ ಅರ್ಥವಾಗಲಿಲ್ಲ. ಗೋಪಾಲನು ಅವ ರನ್ನು ಒಂದೆರಡು ಪ್ರಶ್ನೆಗಳಿಂದ ವಿಚಾರಿಸಿ, ವಿಷಯವನ್ನು ರಮೇಶನಿಗೆ ತಿಳಿಸಿ ಹೇಳಿದನು: "ಒಂದು ನೂರು ಎಕರೆ ಮಾತ್ರ ಭತ್ತದ ಗದ್ದೆಗಳು ಈ ಗ್ರಾಮಕ್ಕೆಲ್ಲಾ ಇರುವ ಒಂದೇ ಆಧಾರ. ಎಲ್ಲ ರೈತರೂ ಇದರಲ್ಲೇ ಒಂದೆರಡು ಗದ್ದೆಗಳನ್ನು ಇಟ್ಟುಕೊಂಡಿದ್ದಾರೆ. ಇದರ ಮೂಡಲಿಗೆ ಸರ ಕಾರದ ಭಾರಿ ಕಟ್ಟೆ, ಪಡುವಲು ಮತ್ತು ಬಡಗಿಗೆ ದಿಣ್ಣೆ ಮತ್ತು ಗ್ರಾಮದ ವಸತಿ, ತೆಂಕಲಿಗೆ ಮಾತ್ರ ಕಟ್ಟೆಯೊಂದು ಘೋಷಗೇರಿ ಮತ್ತು ಕಳ್ಳಂಜ ಯವರಿಗೆ ಸೇರಿದುದು. ಇತ್ತಲಿಂದ ನೀರನ್ನು ಬೇಗನೆ ಇಳಿ ಹೊಡೆಯ ಬಹುದು ಸರಿಯೆ, ಆದರೆ ಆ ಕಟ್ಟೆಯಲ್ಲಿ ಹುಟ್ಟು ಜಲವಿರುವಂತಿದೆ. ವರ್ಷವೊಂದಕ್ಕೆ ಅದರಲ್ಲಿ ಇನ್ನೂರು ರೂಪಾಯಿಗಳು ಮೀನು ಮಾರಾಟ ವಾಗುತ್ತದೆಂದು ಜಮೀನುದಾರ ವೇಣೀರಾಯರು ಕಾವಲಿಟ್ಟು ಒಂದು ಮಾಡಿದ್ದಾರೆ. ರೈತರು ಬೆಳಗಿನಿಂದ ಹಟಮಾಡಿ ಬಿದ್ದಿದ್ದು ಈಗ ತಾನೆ ಅಳುತ್ತಳುತ್ತ ಎದ್ದು ತಮ್ಮಲ್ಲಿಗೆ ಬಂದಿದ್ದಾರೆ." ರಮೇಶ ಇನ್ನು ಕೇಳ ಲಿಕ್ಕೆ ಕಾಯಲಿಲ್ಲ. ಬೇಗ ಬೇಗನೆ ಹೊರಟು ಹೋದನು. ಆ ಮನೆಗೆ ಬಂದು ಒಳಹೊಕ್ಕಾಗ ಹೊತ್ತು ಮುಳಿಗಿತ್ತು. ವೇಣಿ ದಿಂಬಿಗೆ ಒರಗಿ ನಶ್ಯವನ್ನು ಮಾಡುತ್ತಿದ್ದಾನೆ ಮತ್ತು ಹತ್ತಿರ ಹಲಧರರಾಯರು ಕೂತಿ ದ್ದಾರೆ; ಇದೆ ಮಾತು ನಡೆಯುತ್ತಿರಬಹುದು.

ರಮೇಶ ಕೊಂಚವೂ ಭೂಮಿಕೆಯನ್ನು ಹಾಕದೆ ಹೇಳಿದನು.

"ಜಲದ ಕಟ್ಟೆಯನ್ನು ಇನ್ನು ಒಂದು ಮಾಡಿದರೆ ಸಾಗದು, ಈಗಲೆ ಅದನ್ನು ಕಡಿದುಬಿಡಬೇಕು?"

ವೇಣಿ ಡಬ್ಬಿಯನ್ನು ಹಲಧರನ ಕೈಯಲ್ಲಿಟ್ಟು ತಲೆಯತ್ತಿ ಕೇಳಿದನು. "ಯಾವ ಕಟ್ಟೆ?"

ರಮೇಶ ಕುಪಿತನಾಗಿ ಬಂದಿದ್ದನು; ಸಿಟ್ಟು ಹತ್ತಿ ಕೇಳಿದನು. "ಜಲದ ಕಟ್ಟೆ ಇನ್ನೊಂದಿದೆಯೋ ದೊಡ್ಡಣ್ಣ? ಕಡಿಯದೆ ಬಿಟ್ಟರೆ ಹಳ್ಳಿಗರೆಲ್ಲರ ಭತ್ತ ಕೊಂಚವೂ ಉಳಿಯದಂತೆ ಕೊಳೆತು ಹೋಗುತ್ತೆ. ನೀರನ್ನು ಹೊರದೂಡಿ ಹಾಕಲಿಕ್ಕೆ ಅಪ್ಪಣೆ ಕೊಡಿ"

ವೇಣಿಯೆಂದನು. "ಅದರ ಜೊತೆಯಲ್ಲೆ ಇನ್ನೂರು ರೂಪಾಯಿಗಳ ಮೀನು ಹೊರಬಿದ್ದು ಹೋಗಿ ಬಿಡುತ್ತದಲ್ಲಾ, ಆ ವರ್ತಮಾನ ಇಟ್ಟಿದ್ದೀಯಾ? ಈ ದುಡ್ಡು ಕೊಡುವರಾರು? ರೈತರೊ ಅಥವಾ ನೀನೊ?"

ರಮೇಶ ಕೋಪವನ್ನು ತಡೆದು ಕೇಳಿಕೊಂಡನು. "ರೈತರು ಬಡವರು; ಅವರಿಂದ ಕೊಡುವುದಂತೂ ಆಗಲೆ ಆಗದು, ನಾನು ತಾನೆ ಏಕೆ ಕೊಡಬೇಕೊ ಅರಿಯೆ?"

ವೇಣಿಯುತ್ತರವಿತ್ತನು. "ಹಾಗಾದರೆ ನಾವೇಕೆ ಹಾನಿಗೀಡಾಗಬೇಕು. ಅದ ನಾನೂ ಅರಿಯೆ!" ಹಲಧರನ ಕಡೆ ತಿರುಗಿ, "ಚಿಕ್ಕಪ್ಪ' ಹೀಗೆ ಮಾಡಿ ನಮ್ಮ ತಮ್ಮ ಜಮೀನದಾರಿ ಉಳಿಸಿಕೊಳ್ಳುತ್ತಾನೆ." ಎಲೊ ರಮೇಶ ತಾಯಿಗಂಡರು ಬೆಳಗಿನಿಂದ ಇದುವರೆಗೂ ಇಲ್ಲೇ ಬಿದ್ದುಗೋಳಿಟ್ಟರು. ನಾನೆಲ್ಲಾ ಬಲ್ಲೆ. ನಿನ್ನ ಮನೆ ಬಾಗಿಲಲ್ಲಿ ಭಂಟನಿಲ್ಲವೊ? ಅವನ ಕಾಲಲ್ಲಿ ಎಕ್ಕಡವಿದೆಯೋ ಇಲ್ಲವೊ? ಹೋಗು, ಮನೆಗೆ ಹೋಗಿ ಅದೇ ವ್ಯವಸ್ಥೆ ಮಾಡುವಿಯಂತೆ; ನೀರು ತನ್ನಷ್ಟಕ್ಕೆ ಇಳಿದು ಹೋಗುತ್ತದೆ." ಎಂದು ವೇಣಿ ಹಲಧರರಿಬ್ಬರೂ ಒಟ್ಟಿಗೆ 'ಹಿ, ಹಿಃ,' ಎಂದು ತಮ್ಮ ರಸಿಕತಗೆ ತಾವೇ ನಗತೊಡಗಿದರು.

ರಮೇಶನಿಗೆ ಇನ್ನು ಸಹಿಸುವದು ಆಗದಾಯಿತು; ಆದರೂ ಜೀವ ಬಿಗಿಹಿಡಿದು ತನ್ನನ್ನು ತಾನೇ ತಡೆದುಕೊಂಡು ವಿನಯದಿಂದ ಹೇಳಿದನು.

"ನಮ್ಮ ಮೂರು ಮನೆಗಳಿಂದ ಇನ್ನೂರು ರೂಪಾಯಿ ಲುಕ್ಸಾನನ್ನು ಮುಚ್ಚಿಕೊಳ್ಳಲು ಹೋಗಿ ಬಡಬಗ್ಗರ ಪೂರ್ಣ ವರ್ಷದ ಕೂಳನು

ಕೊಳ್ಳೆಮಾಡಿದಂತೆಯಾಗುತ್ತದೆ. ಬಹು ಕಮ್ಮಿಯೆಂದರೂ ಐದಾರು ಸಾವಿರ ರೂಪಾಯಿ ಅವರದು ಹಾಳಾಗುತ್ತದೆ."

ವೇಣಿ ಕೈತಿರಿವಿ ಹಾಕಿ ಎಂದನು. "ಹಾಳಾದರೆ ಆಗಲಿ, ಅವರದು ಐದು ಸಾವಿರವಾದರೂ ಹೋಗಲಿ, ಐದರ ಮೇಲಿನ್ನೈದುಸಾವಿರವಾದರೂ ಹೋಗಲಿ; ನನ್ನ ಹೊಸ್ತಿಲನ್ನು ಪೂರ್ತಿಯಾಗಿ ಸವೆಸಿದರೂ ಎರಡು ಕಾಸು ಬೇರೆ ಹೊರಬೀಳದು. ತಮ್ಮ, ಈ ಸೂಳೆಮಕ್ಕಳಿಗಾಗಿ ಇನ್ನೂರು ರೂಪಾಯಿ ಹಾರಹೊಡಯಬೇಕೊ?"

ರಮೇಶ ಕೊನೆ ಸಲದ ಚೇಷ್ಟೆಯನ್ನು ಮಾಡಿ ಕೇಳಿದನು. "ಇವರು ವರ್ಷಂಪೂರ್ತಿ ಏನುಣಬೇಕು?"

ಬಹಳ ಪರಿಹಾಸದ ಮಾತಿನಂತೆ ವೇಣಿಯೊಂದು ಸಲ ಇತ್ತ, ಮತ್ತೊಂದು ಸಲ ಅತ್ತ, ಬಾಗಿಲುರುಳಿ ತಲೆ ದೂಗಿಸಿ ನಕ್ಕು ಧೂಧೂಗರೆದು ಕೊನೆಗೆ ನೆಟ್ಟಗೆ ನಿಗರಿ ಕೂತು ಹೇಳಿದನು. "ಏನುಣಬೇಕೆ? ನೋಡುವಿ, ಸೂಳೆಮಕ್ಕಳು ಜಮೀನಿರೋರು ಅಡವು ಕೊಟ್ಟು ನಮ್ಮಲ್ಲಿಗೆ ಸಾಲಕ್ಕೆ ಓಡಿಬರುತ್ತಾರೆ; ತಮ್ಮ, ತಲೆ ಕೊಂಚ ತಣ್ಣಗೆ ಮಾಡಿಕೊಂಡು ನಡೆ; ಹಿರಿಯರು ಹೀಗೆ ಮಾಡಿ ದೊಡ್ಡದಾಗಿ ಕೂಡಿ ಹಾಕಿ ಇಗೋ ನೋಡು, ಅವರು ತಿಂದ ಮೇಲೆ ಮಿಕ್ಕ ಒಂದೂ ಅರ್ಧ ಚೂರು ಉಳಿಸಿ ಹಾಕಿ ಬಿಟ್ಟು ಹೋಗಿದ್ದಾರೆ; ಇದನ್ನೇ ನಾವು ಹಾಗೂ ಹೀಗೂ ಹಿಗ್ಗಾಮುಗ್ಗಾ ತಿಕ್ಕಾಡಿ ಕೂಡಿಸಿಗೀಡಿಸಿ, ತಿಂದು ಉಂಡು, ತಿರಗೂ ಮಕ್ಕಳಿಗೆ ಬಿಟ್ಟುಹೋಗಬೇಕು. ಅವರೇನುಂಡಾರೆ? ಸಾಲಗೀಲ ಮಾಡಿ ಉಣ್ಣುತ್ತಾರೆ. ಇಲ್ಲದಿದ್ದರೆ ಜನರು ಬಡ್ಡಿಯಾಳುಗಳನ್ನ ಸಣ್ಣ ಜನವೆಂತನ್ನುವುದೇಕೆ?"

ಅಪಮಾನದ ರೋಷದಿಂದ, ಬೆಂದು ರಮೇಶನ ಮುಖವು ಬೇಗುದಿಯಾಯಿತು. ಆದರೂ ದನಿಯನ್ನು ಶಾಂತವಾಗಿಟ್ಟುಕೊಂಡು ಹೇಳಿದನು. "ತಾವೇನೂ ಮಾಡಬಾರದೆಂದು ನಿಶ್ಚಯ ಮಾಡಿಕೊಂಡಿರುವಾಗ ಇಲ್ಲಿ ನಿಂತು ವಾದಿಸುವುದರಿಂದ ಪ್ರಯೋಜನವಿರದು. ನಾನು ರಮೆಯಲ್ಲಿಗೆ ಹೊರಟೆ; ಅವಳೊಪ್ಪಿದರೆ ತಮ್ಮೊಬ್ಬರ ಒಪ್ಪಿಗೆಯಿಲ್ಲದ್ದರಿಂದೇನೂ ಆಗದು."

ವೇಣಿಯ ಮುಖವು ಗಂಭೀರವಾಯಿತು; "ಒಳ್ಳೇದು, ಹೋಗಿ ನೋಡಪ್ಪ, ಅವಳ ಮತ್ತು ನನ್ನ ಇಷ್ಟ ಬೇರೆ ಬೇರೆಯಲ್ಲ. ಅವಳು ಸಾಧಾರಣ ಹೆಣ್ಣಲ್ಲಣ್ಣ, ಅವಳನ್ನು ಮರೆಸುವುದು ಸುಲಭವಲ್ಲ. ನೀನಂತೂ ಹಸುಳೆ, ನಿಮ್ಮಪ್ಪನಿಗೆ ಸಹ ಅವಳು ಚಳ್ಳೆ ಹಣ್ಣು ತಿನ್ನಿಸಿ, ಕಣ್ಣೀರು ಮೂಗಸೀರ ಸುರಿಯಿಸಿದ ಮೇಲೆಯೆ ಬಿಟ್ಟವಳು! ಏನಯ್ಯಾ ಚಿಕ್ಕಪ್ಪ?" ಎಂದನು.

ಚಿಕ್ಕಪ್ಪನ ಮತಾಮತಕ್ಕೆ ರಮೇಶನಿಗೆ ಕುತೂಹಲವಿರಲಿಲ್ಲ; ವೇಣಿಯ ಈ ಅತ್ಯಂತ ಅಪಮಾನಕರವಾದ ಪ್ರಶ್ನೆಗೆ ಉತ್ತರವೀಯುವುದಕ್ಕೂ ಅವನಿಗೆ ಸರಿಬೀಳಲಿಲ್ಲ; ಅವನು ಬಾಯಿಮುಚ್ಚಿಕೊಂಡು ಹೊರಗೆ ಹೊರಟು ಹೋದನು.

ಅಂಗಳದಲ್ಲಿ ತುಳಸಿಕಟ್ಟೆಯಡಿಯಲ್ಲಿ ಸಂಜೆಯ ದೀಪವನ್ನಿಟ್ಟು ನಮಸ್ಕಾರಗಳನ್ನು ತೀರಿಸಿ ರಮೆ ತಲೆಯೆತ್ತುತಲೆ ಬೆರಗಾಗಿ ಬೆಪ್ಪಾದಳು; ಎದುರಿಗೇನೆ ರಮೇಶ ನಿಂತಿದ್ದಾನೆ. ಅವಳ ತಲೆಯ ಮೇಲಿನ ಸೆರಗು ಕೊರಳಿಗೆ ಬಿಗಿದಿದೆ; ನೇರವಾಗಿ ಅವಳು ಆಗ ತಾನೆ ರಮೇಶನಿಗೆ ನಮಸ್ಕಾರ ಮಾಡಿ ತಲೆಯೆತ್ತಿದವಳಂತೆಯಾಯಿತು. ರೋಷದ ಸಂತಾಪದಲ್ಲಿ ಆತುರದಲ್ಲಿ ಆ ಮೊದಲು ದಿನದ ನಿಷೇಧವಾಕ್ಯ ರಮೇಶನ ನೆನಪಿಗೇ ಬರಲಿಲ್ಲ; ಆದ್ದರಿಂದಲೆ ಅವನು ನೆಟ್ಟಗೆ ಒಳಕ್ಕೆ ಬಂದು ನಿಂತನು, ಮತ್ತು ರಮೆಯನ್ನು ಆ ಸ್ಥಿತಿಯಲ್ಲಿ ಕಂಡು ಸದ್ದು ಮಾಡದೆ ಕಾದಿದ್ದನು; ಇಬ್ಬರೂ ಒಂದು ತಿಂಗಳ ಮೇಲೆ ಇದೇ ಮೊದಲು ನೋಡಿದ್ದು.

"ನೀನು ನಿಜವಾಗಿ ಎಲ್ಲವನ್ನೂ ಕೇಳಿರಬೇಕು. ನೀರನ್ನು ಹೊರ ದೂಡಲು ನಿನ್ನ ಒಪ್ಪಿಗೆಯನ್ನು ತೆಗೆದುಕೊಳ್ಳಲು ಬಂದಿದ್ದೇನೆ" ಎಂದು ರಮೇಶನು ಉಪಚಾರವಿಲ್ಲದೆ ಕೇಳಿದನು.

ರಮೆಯ ವಿಸ್ಮಯದ ಭಾವವು ಕಡಿದು ಹೋಯಿತು; ಅವಳು ತಲೆಯ ಮೇಲೆ ಸೆರಗನ್ನು ಹೊದ್ದು ಎಂದಳು. "ಅದೆಂತಾದೀತು? ಅದಲ್ಲದೆ ದೊಡ್ಡಣ್ಣನವರ ಒಪ್ಪಿಗೆ ಇಲ್ಲ."

"ಇಲ್ಲ, ಬಲ್ಲೆ. ಅವನೊಬ್ಬನ ಒಪ್ಪಿಗೆ ಇಲ್ಲದ್ದರಿಂದೇನಾದೀತು?"

"ನೀರನ್ನು ಹೊರಬಿಡುವುದುಚಿತವೇ ಸರಿ, ಆದರೆ ಏನೀಸನ್ನು ಅಡ್ಡಗಿಸಲಿಕ್ಕೇನುಪಾಯ ಮಾಡೀರಿ?"

"ಅಷ್ಟೊಂದು ನೀರಿನಲ್ಲಿ ಯಾವ ಉಪಾಯವೂ ನಡೆಯದು. ಈ ವರುಷ ಆ ಹಣದ ಹಾನಿಯನ್ನು ನಾವು ವಹಿಸಿಕೊಳ್ಳಲೇ ಬೇಕು; ಇಲ್ಲದೆ ಹೋದರೆ ಹಳ್ಳಿಯೆ ಹಾಳಾಗುತ್ತದೆ."

ರಮೆ ಸುಮ್ಮನಿದ್ದಳು.

"ಹಾಗಾದರೆ ಒಪ್ಪಿಗೆಯುಂಟಷ್ಟೆ?" ಎಂದು ರಮೇಶನೇ ಮುಂದುವರಿಸಿದನು.

ರಮೆ ಮೆದುದನಿಯಲ್ಲಿ "ಇಲ್ಲ, ಅಷ್ಟೊಂದು ಹಣ ಕಳಕೊಳ್ಳುವುದಕ್ಕೆ ನನ್ನಿಂದ ಸಾಗದು" ಎಂದು ಉತ್ತರ ಕೊಟ್ಟಳು.

ರಮೇಶ ವಿಸ್ಮಯದಿಂದ ಮಂಕಾಗಿ ಹೋದನು. ಅವನಂತೂ ಇಂತಹ ಉತ್ತರವನ್ನು ಆಶಿಸಿರಲಿಲ್ಲ. ಅದಕ್ಕೆ ಬದಲು, ಅದು ಹೇಗೊ, ಖಂಡಿತ, ಧೃಡಮಾಡಿಕೊಂಡಿದ್ದನು, ಅವನು ಸ್ವಂತ ತಾನಾಗಿಯೇ ಬಂದು ಬೇಡಿದರೆ ಅವಳೆಂದಿಗೂ ನಿರಾಕರಿಸಳೆಂತ. ರಮೆ ಮೊಗವನ್ನು ಎತ್ತದೆಯೆ ರಮೇಶನ ಅವಸ್ಥೆಯನ್ನು ಅನುಭವಿಸಿರಬೇಕು. "ಅದಲ್ಲವೆ ಆಸ್ತಿ ನನ್ನ ತಮ್ಮನದು, ನಾನು ರಕ್ಷಕಳು ಮಾತ್ರ" ಎಂದಳು.

"ಅಲ್ಲ, ಅರ್ಧ ನಿನ್ನದೇನೆ."

"ಬರಿ ಹೆಸರಿಗೆ. ಅಪ್ಪನಿಗೆ ಚೆನ್ನಾಗಿಯೆ ತಿಳಿದಿತ್ತು, ಎಲ್ಲವೂ ಜಯನಿಗೆ ಬರುತ್ತದೆಯೆಂದು, ಅದಕ್ಕಾಗಿಯೆ ಅರ್ಧಮಟ್ಟಿಗೆ ನನ್ನ ಹೆಸರಿಗೆ ಬರೆದು ಹೋದ" ಎಂದು ರಮೆ ಉತ್ತರಕೊಟ್ಟಳು.

ಹಾಗಾದರೂ ರಮೇಶ ವಿನಯದ ದನಿಯಲ್ಲಿ ಕೇಳಿಕೊಂಡನು. "ರಮೆ, ಇದೆಷ್ಟು ಹಣ? ನಿಮ್ಮ ಸ್ಥಿತಿ ಇತ್ತ ಕಡೆಯ ಎಲ್ಲರಿಗಿಂತಲೂ ಉತ್ತಮ. ನಿನ್ನಲ್ಲಿ ಈ ನಷ್ಟ ಗಣನೆಗೆ ಬಾರದು, ನಾನು ಅಂಗಲಾಚಿ ಬೇಡುತ್ತಿದ್ದೇನೆ, ರಮೆ, ಇದಕ್ಕಾಗಿ ಇಷ್ಟೊಂದು ಜನಗಳ ಹೊಟ್ಟೆಯ ಮೇಲೆ ಬಡಿಯಬೇಡ. ಯಥಾರ್ಥ ಹೇಳುತ್ತೇನೆ, ನೀನು ಇಷ್ಟು ನಿಷ್ಠುರಳಾಗ ಬಲ್ಲೆಯೆಂದು ಕನಸಲ್ಲಿ ಸಹ ನಾನರಿತಿರಲಿಲ್ಲ."

ರಮೆ ಅದೇ ಮೆಲುದನಿಯಲ್ಲಿ ಉತ್ತರವಿತ್ತಳು. "ಸ್ವಂತ ನಷ್ಟಕ್ಕೆ

ಗಮನಕೊಡಲಾರೆನೆಂತ ನಿಷ್ಠುರಳೆನ್ನುವುದಾದರೆ, ನಾನು ಅದೆ ಸರಿ, ಅದೆ ಉತ್ತಮ, ತಮಗೆ ದಯೆ ಇಷ್ಟೊಂದುಂಟಷ್ಟೆ, ನೀವೆ ನಷ್ಟ ಕಟ್ಟಿಕೊಟ್ಟ ರಾಯಿತು."

ಅವಳ ಆ ದನಿಯಲ್ಲಿ ವಿದ್ರೋಹವನ್ನು ಕಲ್ಪಿಸಿಕೊಂಡು ರಮೇಶ ಕಿಡಿಕಿಡಿಯಾದನು; "ರಮೆ, ಮನುಷ್ಯ ಘಟ್ಟಿ ಪೌದೇ ಅಲ್ಲವೇ ಎಂಬುದು ತಿಳಿಯುವುದು ದುಡ್ಡಿನ ಸಂಪರ್ಕದಲ್ಲಿ. ಈ ಸ್ಥಳದಲ್ಲಿ ಠೊಳ್ಳಿಗೆ ಅವಕಾಶ ವಿಲ್ಲ, ಆದ್ದರಿಂದಲೆ, ಇಲ್ಲಿಯ ಮನುಷ್ಯನ ನಿಜ ರೂಪು ಹೊರಬೀಳುತ್ತದೆ ನಿನ್ನದೂನೂ ಗುರ್ತು ಇಂದು ಸಿಕ್ಕಿತು. ಆದರೆ ನಿನ್ನನ್ನು ನಾನೆಂದಿಗೂ ಹೀಗೆಂತ ತಿಳಿದಿರಲಿಲ್ಲ. ಇದಕ್ಕಿಂತ ಬಹು ಬಹು ಮೇಲಿನವಳೆಂದು ಸದಾ ಅಂದುಕೊಂಡಿದ್ದೆ. ಆದರೆ ನೀನು ಅದಲ್ಲ. ನಿನ್ನನ್ನು ಬರಿ ನಿಷ್ಠುರಳೆಂಬುದು ತಪ್ಪು; ನೀನು ಅತಿ ನೀಚಳು ಅತಿ ಕ್ಷುದ್ರ....." ಎಂದು ನಡಗುವ ದನಿಯಲ್ಲುಸುರಿದನು.

ಅಸಹ್ಯ ವಿಸ್ಮಯದಿಂದ ರಮೆ ಕಣ್ಣುಗಳೆರಡನ್ನೂ ಪಿಳುಕಿಸಿ "ಏನು ನಾನು ?" ಕೇಳಿದಳು.

"ನೀನು ಅತ್ಯಂತ ಕೀಳು, ಅತ್ಯಂತ ಹೀನೆ; ನಾನು ಬಹಳ ವ್ಯಾಕುಲ ನಾಗಿದ್ದೇನೆಂಬುದನ್ನು ಅರಿತು ನನ್ನಲ್ಲಿ ನಷ್ಟ ಕಟ್ಟಿಕೊಡುವ ಬಲವಂತ ವನ್ನು ಮಾಡುತ್ತೀಯಲ್ಲಾ ! ಆದರೆ ದೊಡ್ಡಣ್ಣ ಸಹ ಬಾಯಿಬಿಟ್ಟು ಈ ಮಾತನ್ನು ಅನ್ನಲಾರದೆ ಹೋದ, ಗಂಡಸಾಗಿ ಅವನ ಗಂಟಲಿಗೆ ತಡೆದ ಮಾತು ಹೆಂಗಸಾಗಿ ನಿನ್ನ ಬಾಯಿಗೆ ತೊಡಕಲಿಲ್ಲ ! ನಾನು ಇದಕ್ಕಿಂತಲೂ ಹೆಚ್ಚು ನಷ್ಟ ಕಟ್ಟಿಕೊಡಬಲ್ಲೆ; ಆದರೆ ಒಂದು ಮಾತನ್ನು ನಿನಗೆ ಇಂದು ತಿಳುಹಿಸಿ ಹೋಗುತ್ತೇನೆ, ರಮೆ, ಸಂಸಾರದೆಲ್ಲ ಪಾಪಗಳಿಗಿಂತ ಮನು ಷ್ಯನ ಕರುಣೆಯ ಮೇಲೆ ಬಲವಂತ ಮಾಡುವುದು ಮಹಾ ಪಾತಕ; ಈಗ ನೀನದನ್ನೆ ಮಾಡಿ ನನ್ನ ಹತ್ತಿರ ಹಣದ ಆದಾಯಕ್ಕೆ ಕೈಚಾಚಿದೆ" ರಮೇಶನೆಂದನು.

ರಮೆ ವಿಹ್ವಲಳಾಗಿ ಮಂಕು ಬಡಿದವಳಂತೆ ಬಿರುಗಣ್ಣುಬಿಟ್ಟು ನೋಡುತ್ತಿದ್ದಳು. ಒಂದು ಮಾತು ಸಹ ಅವಳ ಬಾಯಿಂದ ಹೊರಬೀಳ ಲಿಲ್ಲ. ರಮೇಶನು ಹಾಗೆಯೆ ಶಾಂತ ಧೃಢ ದನಿಯಲ್ಲಿ ಎಂದನು. "ನನ್ನ

ದುರ್ಬಲತೆ ಎಲ್ಲೆಂಬುದು ನಿನಗೆ ತಿಳಿಯದೆ ಇಲ್ಲ, ಆದರೆ ಅಲ್ಲಿನ್ನು ಹಿಂಡಿ ರಸದ ತೊಟ್ಟೊಂದನ್ನೂ ಪಡೆಯಲಾರಿರಿ. ಅದನ್ನು ಹೇಳಿ ಹೋಗುತ್ತೇನೆ. ಇದರ ಜೊತೆಯಲ್ಲಿಯೆ ನನ್ನ ವರ್ತನವನ್ನೂ ತಿಳಿಸಿಹೋಗುತ್ತೇನೆ; ಈಗಲೆ ಬಲವಂತದಿಂದ ಕಟ್ಟೆಯನ್ನು ಕಡಿದುಬಿಡುತ್ತೇನೆ. ನಿಮ್ಮಿಂದಾದರೆ ತಡೆಯಬಹುದು.

ರಮೇಶ ಹೊರಟು ಹೋಗುವುದನ್ನು ನೋಡಿ ರಮೆ ಹಿಂದಕ್ಕೆ ಕರೆದಳು. ಕೂಗನ್ನು ಕೇಳಿ ರಮೇಶ ಹಿದಿರುಗಿ ಬಂದು ಹತ್ತಿರ ನಿಂತೊಡನೆಯೆ ರಮೆಯೆಂದಳು. "ನನ್ನ ಮನೆಯಲ್ಲೆ ನಿಂತು ನನಗೇನೆ ಅಪಮಾನವೆಷ್ಟೋ ಮಾಡಿದರೂ ಅದೊಂದಕ್ಕೂ ಉತ್ತರವನ್ನು ಕೊಡಲೊಲ್ಲೆ; ಆದರೂ ಈ ಕೆಲಸವನ್ನು ತಾವು ಹೇಗೂ ಮಾಡಲಿಕ್ಕೆ ಯತ್ನ ಮಾಡಬೇಡಿ."

ರಮೇಶ ಕೇಳಿದನು. "ಏಕೆ?"

ರಮೆಯೆಂದಳು. "ಇಷ್ಟು ಅಪಮಾನವಾದ ಮೇಲೆಯೂ ನಿಮ್ಮೊಡನೆ ವಿವಾದಕ್ಕೆ ನಿಲ್ಲಲು ನನಗೆ ಬೇಕಿಲ್ಲ."

ಅವಳ ಮುಖ ಎಷ್ಟರಮಟ್ಟಿಗೆ ಅಸ್ವಾಭಾವಿಕ ಮತ್ತು ಎಷ್ಟರ ಮಟ್ಟಿಗೆ ಬಿಳಿತಿ ಹೋಗಿತ್ತು ಮತ್ತು ಅವಳ ತುಟಿಗಳು ಎಷ್ಟು ಅದುರುತ್ತಿದ್ದುವೆಂಬುದನ್ನು ಸಂಜೆಯ ಮಬ್ಬಿರದಲ್ಲಿಯೂ ರಮೇಶ ಅರಿತುಕೊಂಡನು. ಆದರೂ ಮನಸ್ತತ್ವವನ್ನು ಆಲೋಚಿಸಲು ಅವಕಾಶವಾಗಲಿ ಪ್ರವೃತ್ತಿಯಾಗಲಿ ಆಗ ಅವನಿಗೆ ಇರಲಿಲ್ಲ, ತಕ್ಷಣ ಉತ್ತರವಿತ್ತನು. "ಕಲಹದಲ್ಲಿ ಅಭಿರುಚಿ ನನಗೂ ಇಲ್ಲ, ಆದರೆ ನಿನ್ನ ಒಳ್ಳೆಯತನದ ಬೆಲೆ ನನ್ನಲ್ಲಿ ಇನ್ನು ಕೊಂಚವೂ ಇಲ್ಲ. ಅದುದಾಗಲಿ, ವಾಗ್ವಿತಂಡದ ಅವಶ್ಯಕತೆಯಿಲ್ಲ, ನಾನು ಹೊರಟೆ."

ಚಿಕ್ಕಮ್ಮ ದೇವರ ಮನೆ ಬಾಗಿಲು ಹಾಕಿಕೊಂಡಿದ್ದರಿಂದ ಇದಾವುದನ್ನೂ ಅರಿಯಳು. ಹೊರಗೆ ಬಂದು ನೋಡಿದಳು, ರಮೆ ದಾಸಿಯನ್ನು ಜೊತೆಗೆ ಕರೆದುಕೊಂಡು ಹೊರಗೆ ಹೊರಟಿದ್ದಾಳೆ. ಅಚ್ಚರಿಗೊಂಡು ವಿಚಾರಿಸಿದಳು. "ಈ ನೀರು ಕೆಸರಲ್ಲಿ ಸಂಜೆ ಬಿದ್ದ ಮೇಲೆ ಎಲ್ಲಿಗೆ ಹೊರಟೆಯೆ, ರಮೆ?"

“ ಒಂದಾವರ್ತಿ ದೊಡ್ಡಣ್ಣಾಸವರ ಬಳಿ ಹೋಗುತ್ತೇನೆ, ಚಿಕ್ಕಿ ! ”

“ ದಾರೀಲಿಷ್ಟು ಕೆಸರು ಕಾಣಕ್ಕಿಲ್ಲ ನಮ್ಮವ್ವಾ ! ಚೆನ್ನಾಗಿ ರಸ್ತೆ ಮಾಡಿಸವರೆ, ಚಿಕ್ಕರಾಯರು, ಕುಂಕವು ಚಲ್ಲಿದರೆ ಆರಿಸಿಕೊಬಹುದು. ದೇವರು ಅವರನ್ನ ಚೆನ್ನಾಗಿ ಕಾಪಾಡಬೇಕು, ಬಡವರ ಪರಾಣಾನ ಹಾವಿನ ಕಾಟದಿಂದ ಬಿಡಿಸವರೆ ಕಾಣವ್ವಾ, ಈಗ ಹಾಯಾಗೈತೆ ” ಎಂದು ದಾಸಿ ಉತ್ತರ ಕೊಟ್ಟಳು.

ಆಗ ರಾತ್ರಿ ಹನ್ನೊಂದುಗಂಟೆ ಇರಬಹುದು. ವೇಣಿಯ ಕೈಸಾಲೆ ಯಿಂದ ಬಹುಜನಗಳ ತಗ್ಗಿದ ದನಿಯಲ್ಲಿನ ಮಾತುಗಳ ಸದ್ದು ಕೇಳಿಬರು ತ್ತಿತ್ತು. ಮುಗಿಲಲ್ಲಿ ಮೋಡ ಅಷ್ಟಿಷ್ಟು ಹರಿದು ತ್ರಯೋದಶಿಯ ಮಂದ ಬೆಳದಿಂಗಳು ವರಾಂಡದ ಮೇಲೆ ಬಂದು ಬಿದ್ದಿದ್ದಿತು. ಅಲ್ಲಿಯೆ ಕಂಭಕ್ಕೆ ಒರಗಿ ಒಬ್ಬ ಭಯಂಕರಾಕಾರದ ಎಡತರದ ಮುಸಲಮಾನನು ಕಣ್ಮುಚ್ಚಿ ಕೂತಿದ್ದನು. ಅವನ ಮೊಗದ ಮೇಲೆಲ್ಲಾ ಹಸಿ ರಕ್ತ ಕಟ್ಟಿಕೊಂಡಿದೆ. ಹೊದ್ದ ವಸ್ತ್ರವೆಲ್ಲಾ ರಕ್ತದಿಂದ ಒಣ್ಣಾಗಟ್ಟಿದೆ; ಆದರೂ ಅವನು ಸುಮ್ಮ ನಿದ್ದಾನೆ. ವೇಣಿ ಕಡದ ದನಿಯಲ್ಲಿ ಅಸುಸಯುಮಾಡುತ್ತಿದ್ದಾನೆ. “ ಕೇಳು ಅಕಬರ, ಸ್ಟೇಷನ್‌ಗೆ ನಡೆ. ಏಳೊರುಷ ಅವಸಿಗೆ ಹಾಕಿಸದೆ ಹೋದರೆ ನಾಉ ಘೋಷಗೇರಿಯ್ಯ ವಂಶಕ್ಕೆ ಹುಟ್ಟಲಿಲ್ಲ. ” ಹಿಂದುರುಗಿ ನೋಡಿ ಎಂದನು. “ ರಮೆ ನೀನೊಂದು ಸಲ ಹೇಳಬಾರದೆ, ಸುಮ್ಮನೆ ಇದ್ದೀ ಯಲ್ಲಾ, ಇದೇಕೆ ? ”

ಆದರೆ ರಮೆ ಹಾಗೆಯೆ ಕಟ್ಟಿಗೆಯಂತೆ ಕೂತಿದ್ದಳು. ಅಕಬರಾಲಿ ಈ ಸಲ ಕಣ್ದೆರದು ನೆಟ್ಟಗೆ ಸರಿದು ಕೂತು ಎಂದನು. “ ಸಾಭಾಸ್ ! ಹಾ ಹಾ, ತಾಯಿಹಾಲ ಕುಡಿದವರೆ ಸರಿ ಚಿಕ್ಕರಾಯರು ! ಲಕ್ಷ್ಮಿ ಹಿಡ ದರು ಸರಿ ! ”

ವೇಣಿ ವ್ಯಸ್ತನಾಗಿ ರೇಗಿ ಎಂದನು. “ ಆ ಮಾತೆ ಹೇಳು ಅಂತ ನಾನು ಹೇಳೋದು, ಅಕಬರ ! ಯಾರ ದೊಣ್ಣೆಯಿಂದ ನಿನಗೆ ಗಾಯವಾ ಯಿತು ? ಆ ಪೋಟನದೊ, ಅಲ್ಲದೆ ಅವನ ಹಿಂದೂಸ್ಥಾನಿ ಭಂಟನದೊ ? ”

ಅಕಬರನ ಮೇಲ ತುಟಿಯ ಕೊನೆಯಲ್ಲಿ ತುಸು ನಗೆ ಮೂಡಿತು. “ ಆ ತೊಣ್ಯ ಹಿಂದೂಸ್ಥಾನೀದೆ ? ಆ ನನ್ನ ಮಗಾಗೆ ಲಾಠಿ ಬರತೈತೆ,

ದೊಡ್ಡರಾಯರೆ? ಎಲಪ್ಪಾ ಗಹತ್, ಏನಂತಿಯೊ, ನಿನ್ನ ಮೊದಲನೆ ಪೆಟ್ಟಿಗೇನೆ ಅವನು ಕುಂತು ಬಿಡಲಿಲ್ಲವಾ?'' ಎಂದನು.

ಅಕಬರನ ಇಬ್ಬರು ಮಕ್ಕಳೂ ಅಲ್ಲೆ ಹತ್ತಿರದಲ್ಲಿಯೆ ಮಂಕು ಹಿಡಿದವರಂತೆ ಕೂತಿದ್ದರು. ಅವರಿಗೂ ಪೆಟ್ಟಾಗದೆ ಇರಲಿಲ್ಲ. ಗಹರ ತಲೆ ಯಾಡಿಸಿ ದನಿಗೊಟ್ಟನು, ಮಾತಾಡಲಿಲ್ಲ. ಅಕಬರ ಹೇಳುತ್ತ ಹೋದನು. ''ನನ್ನ ಕೈಯಾಗಳ ಏಟು ಅವನಿಗೆ ಬಿದ್ದಿದ್ದರೆ ಅವನಿಗೆ ಇನ್ನ ಜಾನ್ ಇರತಾ ಇತ್ತೊ. ಗಹರನ ಲಾಠಿಯಿಂದಲೆ ''ಬಾಪ್'' ಎಂತ ಕುಂತು ಬಿದ್ದ, ದೊಡ್ಡರಾಯರೆ.''

ರಮೆ ಎದ್ದು ಬಂದು ಅನತಿ ದೂರದಲ್ಲಿ ನಿಂತಳು. ಅಕಬರ ಅವರ ಪೀರಪುರದ ಒಕ್ಕಲು. ಬಹಳ ಕಾಲದಿಂದ ತನ್ನ ದೊಣ್ಣೆಯ ಜೋರಿನಿಂದ ಹಲವು ಆಸ್ತಿಗಳನ್ನು ಕೈವಶ ಮಾಡಿಕೊಟ್ಟಿದ್ದಾನೆ. ಆದ್ದರಿಂದಲೆ ಇಂದು ಸಂಜೆಯ ಮೇಲೆ ರಮೆ ಕೋಪದಿಂದಲೂ ಅಭಿಮಾನದಿಂದಲೂ ಹುಚ್ಚಳಂತಾಗಿ ಅವನನ್ನು ಕರೆಯಿಸಿ ಕಟ್ಟೆಯ ಕಾವಲಿಗೆ ಕಳುಹಿದ್ದಳು, ಮತ್ತು ಒಂದು ಸಲ ಚೆನ್ನಾಗಿ ನೋಡಬೇಕೆಂತಲೂ ಇದ್ದಳು. ರಮೇಶ ಆ ಹಿಂದೂಸ್ಥಾನಿಯ ಮೈ ಜೋರಿನ ಮೇಲೆ ಹೇಗೆ ಏನು ಮಾಡಬಲ್ಲನೆಂಬುದನ್ನು! ಅವನು ತಾನೆ ಬಲು ಗಟ್ಟಿಗನಾದ ದೊಣ್ಣೆವಸ್ತಾದಿಯೆಂಬುದನ್ನು ರಮೆ ಕನಸ್ಸಿನಲ್ಲಿ ಸಹ ಕಲ್ಪಿಸಿಕೊಂಡಿರಲಿಲ್ಲ.

ಅಕಬರ ರಮೆಯ ಮುಖದ ಕಡೆ ನೋಡಿ ಹೇಳಿದನು. ''ಆಗ ಚಿಕ್ಕರಾಯರು ಆ ನನ್ನ ಮಗನ ದೊಣ್ಣೆ ಎತ್ತಿಕೊಂಡು ಕಟ್ಟೆಗೆ ಅಡ್ಡ ಮಾಡಿ ನಿಂತರು, ಅಮ್ಮಾವರೆ, ಮೂರು ಮಂದಿ ತಂದೆ ಮಕ್ಕಳು ನಾವು ಆಳ್ಯಾಡ್ಸಾಕೆ ಹರಿದೆ ಹೋಯ್ತು! ಕತ್ತಲಲ್ಲಿ ಹುಲಿ ಹಾಂಗೆ ಅವರ ಕಣ್ಣು ಉರಿತಾ ಇದ್ದುದು ಅಂದರು. 'ಅಕಬರ, ನೀನು ಮುದುಕಾ ಇದ್ದಿ, ಸರ್ದು ಹೋಗು ಕಟ್ಟೆ ಕಡೀದಾ ಹೋದರೆ ಹಳ್ಳಿ ಜನಾವೆಲ್ಲಾ ಸತ್ತು ಹೋಗತಾರೆ ಅದಕ್ಕೇನೆ ಕಡೀಲೆಬೇಕು; ನಿಂಗೂ ನಿನ್ನ ಗರಾಮಾ ದಲ್ಲಿ ಜಮೀನ್‌ಗಿಮೀನ್ ಐತೆ, ಸಮಾಜದಲ್ಲಿ ತಕ್ಕೊಂಡು ನೋಡು, ಎಲ್ಲಾ ಬರಬಾದು ಆಗ್ಹೋದರೆ ನಿನಗ್ಹೆಂಗಿರತೈತೆ?'' ನಾನು ಸಲಾಮು ಹೊಡದು ಅಂದೆ, 'ಅಲ್ಲಾ ಮಾಡಿದ್ದಾಗತೈತೆ, ಚಿಕ್ಕರಾಯರೆ, ನೀನೊಂದು ತಡವೆ

ದಾರಿಬಿಟ್ಟು ನಿಂತುಕೊ, ನಿನ್ನ ಮರೇಲಿ ನಿಂತು ಇಗೊ ಕೆಲಬರು ನನಗೆ ಬಟ್ಟೆ ಅಡ್ಡ ಮಾಡಿ ಝುಪ್ ಝುಪ್‌ನೆ ಗುದ್ದಲಿ ಹೊಡಿತಾವರೆ, ಅವರ ಬುರುಡೆ ಬಡಿದಿಟ್ಟಾಡಿ ಬಿಡತಿ ಮಾಡತೇನೆ!"

ವೇಣಿ ಕೋಪವನ್ನು ತಡೆಯಲಾರದೆ ಮಾತಿನ ನಡುವಿನಲ್ಲೆ ಅರಿಚಿದನು. "ಬೇಮಾನ್ಸುಂಡೇದೆ– ಅವನಿಗೆ ಸಲಾಂ ಹೊಡೆದು ಬಂದು ಇಲ್ಲಿ ಚಾಲಾಕು ಹೊಡೀತೀಯೊ?"

ಅವರು ತಂದೆಮಕ್ಕಳು ನೂರವರೂ ಒಂದೆ ಸರ್ತಿಗೆ ಒಟ್ಟಿಗೆ ಕೈಗಳನ್ನೆತ್ತಿದರು! ಅಕಬರನು ಕರ್ಕಶ ದನಿಯಲ್ಲಿ ಎಂದನು. "ಖಬರದಾರ ದೊಡ್ಡ ರಾಯರೆ, ಬೇಮಾನನ್ನಬೇಡ; ನಾವು ಮುಸಲಮಾನ್ಮಕ್ಕಳು, ಎಲ್ಲಾ ಸಹಿಸುತ್ತೇವೆ, ಅದಾಗಾಕ್ಕಿಲ್ಲ." ಹಣೆಗೆ ಕೈಹಾಕಿ ಕೊಂಚ ರಕ್ತವನ್ನು ಒರೆಸೆಸೆದು ರಮೆಯನ್ನು ಕುರಿತು ಎಂದನು. "ಅರ ಬೇಮಾನ ಅಂತಿಯಾ ಅಕ್ಕಾ? ಮನೇಲಿ ಕುಂತುಕೊಂಡು ಮಾಸ ಇಲ್ಲ ಅಂತಿ, ದೊಡ್ಡರಾಯರೆ, ಕಣ್ಣಿಂದ ನೋಡಬೇಕು, ತಿಳೀಬೇಕು, ಚಿಕ್ಕ ರಾಯರು ಯಾರು ಎಂತ!"

ವೇಣಿ ಮೊಗ ಸೊಟ್ಟಗೆ ಮಾಡಿ ಎಂದನು. "ಚಿಕ್ಕರಾಯರು ಏನು! ಅದೆ ರಾಣೇಳಿ ಹೋಗಿ ಹೇಳಿ ಬಾ! ಹೇಳು, ನೀನು ಕಟ್ಟೆಕಾಯ್ತಾ ಇದ್ದೆ, ಚಿಕ್ಕರಾಯರು ಮೇಲೆ ಬಿದ್ದು ನಿನಗೆ ಹೊಡದಿದ್ದಾರೆ."

ಅಕಬರ ನಾಲಿಗೆ ಕಡಿದು ಹೇಳಿದನು. "ತೋಬಾ, ತೋಬಾ, ಹಗಲನ್ನ ಕತ್ತಲು ಮಾಡು ಅಂತ ಹೇಳ್ತೀಯಾ, ದೊಡ್ಡರಾಯರೆ?"

ವೇಣಿಯೆಂದನು, "ಅಲ್ಲದೆ ಹೋದರೆ ಇನ್ನೇನಾದರೂ ಹೇಳು. ಇವತ್ತು ಹೋಗಿ ಗಾಯ ತೋರಿಸಿ ಬಾ, ನಾಳೆ ವಾರಂಟು ಹೊರಡಿಸಿ ಬಂದೆಪಟ್ಟಿಗೆ ಹಾಜತ್ತಿನಲ್ಲಿ ಕೂಡಿಸಿ ಬಿಡುತ್ತೇನೆ! ರಮೆ, ನೀನು ಚೆನ್ನಾಗಿ ಇನ್ನೊಂದು ಸಲ ತಿಳಿ ಹೇಳಬಾರದೆ! ಇಷ್ಟನುಕೂಲ ತಿರುಗಿ ಇನ್ನೆಂದಿಗೂ ಸಿಗುವುದಿಲ್ಲ."

ರಮೆ ಮಾತನಾಡಲಿಲ್ಲ. ಒರಿ ಅಕಬರನ ಕಡೆಯೊಂದುಸಲ ನೋಡಿದಳು. ಅಕಬರ ಕೊರಳ ಕುಲಿಕಿ ಎಂದನು. "ಇಲ್ಲ ದೊಡ್ಡಕ್ಕಾವರೆ, ಅದು ಕೈಲಿ ಆಗೋಕಿಲ್ಲ."

ವೇಣಿ ಬೆದರಿಸಿ ಕೇಳಿದನು. "ಏಕೊ ಕೈಲಾಗದು?"

ಈ ಸಲ ಅಕಬರ ಕಿರಿಚೆಂದನು. "ಏನ ಹೇಳ್ತಿ ದೊಡ್ಡರಾಯರೆ, ನಾಚಿಗೆ ಇಲ್ಲ ನನಗೆ? ನಾಲ್ಕು ಹಳ್ಳಿ ಜನ ನನಗೆ ಸರದಾರ ಅನ್ನೊಲ್ಲವಾ? ಅಕ್ಕಮ್ಮನವರೆ, ನೀನು ಹುಕ್ಕುಂ ಮಾಡು, ಆಸಾಮಿಯಾಗಿ ಜೈಲ್ಗೆ ಹೋಗ್ತೀನಿ; ಫಿರ್ಯಾದಿಯಾಗೋದು ಯಾವ ಮೊಗದಿಂದಾವ್ವಾ?"

ರಮೆ ಮೃದು ದನಿಯಲ್ಲಿ ಒಂದೇ ಸಲವೆಂದಳು, "ಆಗಲಾರೆಯಾ ಅಕಬರ್?"

ಅಕಬರ ವೇಗವಾಗಿ ತಲೆಯಲ್ಲಾಡಿಸಿ ಎಂದನು. "ಇಲ್ಲಾ ಅಮ್ಮಾವರೆ, ಇನ್ನೆಲ್ಲಾ ಮಾಡೇನು, ಸದರಿಗೆ ಹೋಗಿ ಮೈಯಾಗಿನ ಪೆಟ್ಟು ತೋರೋಕೆ ನನ್ನಿಂದ ಆಗೋಕಿಲ್ಲ. ಏಳೊ, ಎಲೊ ಗಫರ್, ಈ ಸರ್ತಿ ಮುಕಾ■ನಿಗೆ ಹೋಗೋಣ. ನಾವು ಫಿರ್ಯಾದು ಮಾಡೋಕೆ ಆಗೋಕಿಲ್ಲ." ಎಂದು ಅವರು ಏಳಲಿಕ್ಕೆ ಉಜ್ಜುಗಿಸಿದರು.

ವೇಣಿ ಕ್ರೋಧ ನಿರಾಶೆಗಳಿಂದ ಅವರಕಡೆ ನಿಟ್ಟಿಸಿ ಕಂಗಳೆರಡರಲ್ಲೂ ಕೆಂಡಗರೆಯುತ್ತಾ ಬಾಯಲ್ಲಿ ಕರಗದ ಬೈಗಳನ್ನು ಮನಸ್ಸಿನಲ್ಲಿಯೆ ಬೈಯುತ್ತಾ, ಮತ್ತು ರಮೆ ತಾನೆ ತಾನಾಗಿ ಯಾವ ಪ್ರಯತ್ನವನ್ನೂ ಮಾಡದೆ ತಟಸ್ಥಳಾಗಿದ್ದುದರ ಅರ್ಥ ತಿಳಿಯದೆ ಅರಳೆಯಲ್ಲಿಯ ಅಗ್ನಿಯಂತೆ ಒಳಗೆ ಬೇಯುತ್ತಲಿದ್ದನು. ಎಲ್ಲಬಗೆಯ ಅನುನಯ ವಿನಯ ಬೆದರಿಕೆ ರೇಗಾಟಗಳನ್ನು ಲಕ್ಷಿಸದೆ ಅಕಬರ ತನ್ನ ಮಕ್ಕಳೊಂದಿಗೆ ಹೊರಟು ಹೋದಾಗ ರಮೆಯ ಎದೆ ಬಿಚ್ಚಿ ದೀರ್ಘವಾದ ನಿಟ್ಟುಸಿರೊಂದು ಹೊರಬಿದ್ದು ಅವಳೆರಡು ಕಂಗಳಲ್ಲೂ ಕಂಬನಿಯುಕ್ಕಿ ಬಂತು; ಇಂದಿನ ಇಷ್ಟು ದೊಡ್ಡಪಮಾನ ಸಹಿತ ಅವಳನ್ನು ಸಂಪೂರ್ಣವಾಗಿ ಸೋಲಿಸಿ ವ್ಯರ್ಥವಾಗಿ ಹೋದರೂ ಅವಳ ಮನಸ್ಸಿನಲ್ಲಿ ಎದೆಯ ಮೇಲಾತುಕೊಂಡಿದ್ದ ಬಂಡೆಯೊಂದು ಇಳಿದು ಹೋದಂತೆ ಕೇವಲ ಆದದ್ದು ಅದೇಕೊ, ಕಾರಣವನ್ನು ಹುಡುಕಿದರೂ ಅವಳಿಗೆ ತಿಳಿಯದೆ ಹೋಯಿತು. ಇರುಳೆಲ್ಲಾ ಅವಳಿಗೆ ನಿದ್ರೆ ಹತ್ತಲಿಲ್ಲ. ಅವಳೆ ನಂಜನಗೂಡಿನಲ್ಲಿ ಎದುರಿಗೆ ಕೂತು ಊಟಕ್ಕಿಟ್ಟಿದ್ದಳು, ತೆರವುಗೊಡದೆ ಅದೆ ಕಣ್ಮುಂದೆ ಭಾಸವಾಗಿ ಅಲೆಯಹತ್ತಿತು, ಮತ್ತು ಆ ಸುಂದರ ಸುಕುಮಾರ ದೇಹದಲ್ಲಿ

ಇಷ್ಟೊಂದು ಮೋಹ, ಇಷ್ಟು ತೇಜಸ್ಸು ಎಂತು ಹೀಗೆ ಸ್ವಚ್ಛಂದವಾಗಿ ಶಾಂತವಾಗಿ ಅಡಗಿತ್ತು ಎಂಬುದು ಮನಸಸ್ಸಿಗೆ ಹತ್ತಿದಷ್ಟೂ ಅವಳ ಕಂಬನಿಯಲ್ಲಿ ಆ ಮುಖ ತೇಲುತ್ತಿತ್ತು.

೧೨

ಚಿಕ್ಕಂದಿನಲ್ಲಿ ಒಂದುದಿನ ರಮೇಶ ರಮೆಯನ್ನು ಪ್ರೀತಿಸಿದ್ದನು. ಅತ್ಯಂತ ಎಳೆಮಕ್ಕಳ ಪ್ರಣಯ; ಅದರಲ್ಲಿ ಸಂದೇಹವಿಲ್ಲ; ಆದರೂ ಅದೆಷ್ಟು ಆಳ, ಅದನ್ನು ಸಂಜನಗೂಡಲ್ಲಿ ಅವನು ಮೊಟ್ಟಮೊದಲು ಅನು ಭವಿಸಿದ್ದನು;ಮತ್ತು ಇನ್ನೂ ಎಷ್ಟು ಆಳವೆಂಬುದನ್ನು ಸಮಸ್ತ ಸಂಬಂಧ ವನ್ನು ಒಂದೆ ಪೆಟ್ಟಿಗೆ ನೆಲಕ್ಕೆಸೆದುಬಿಟ್ಟು ಹೊರಟು ಹೋದಂದು ಗುರ್ತಿಸಿದನು. ಆಮೇಲೆ ಆ ಭಯಂಕರ ರಾತ್ರಿಯ ಘಟನೆಯಾದನಂತರ ರಮೆಯ ದಿಕ್ಕು ಒಂದೇ ಏಟಿಗೆ ರಮೇಶನ ಹತ್ತಿರ ಮಹಾ ಮರು ಭೂಮಿಯಂತೆ ಶೂನ್ಯವಾಗಿರಬೇಕೊ ಎನ್ನುತ್ತಿತ್ತು. ಇದರಿಂದ ತನ್ನ ಕೆಲಸದಲ್ಲಿ ನಿದ್ರೆಯಲ್ಲಿ ಎಚ್ಚರದಲ್ಲಿ ಅಷ್ಟೇಯೇನು, ಎಲ್ಲದರಲ್ಲಿಯೂ ಹೀಗೆ ಅರುಚಿಯುಂಟಾಗುವುದೆಂದು ರಮೇಶನ ಕಲ್ಪನೆ ಸಹ ಮಾಡಿರ ಲಿಲ್ಲ. ಆದುದರಿಂದ ಮನೆಯೊಡೆದು ಮತ್ತು ಎಲ್ಲ ಕಡೆಯಲ್ಲೂ ನಮ್ಮ ತಮ್ಮವರೆಂಬರಿಲ್ಲದೆಯಾಗಿ ಅವನ ಜೀವ ಇನ್ನೊಂದು ಗಳಿಗೆ ಸಹ ಆ ಗ್ರಾಮದಲ್ಲಿ ಇರಲು ಬೇಡದೆ ಹೋಗಿರುವಾಗ ಈ ಕೆಳಗಿನ ಘಟನೆಯಿಂದ ಇನ್ನೊಂದುಸಲ ಅವನು ತಲೆ ಕೊಡವಿ ಕೂತನು.

ಕೆರೆಯ ಅತ್ತಕಡೆ ಪೀರಪುರ ಗ್ರಾಮವೆ ಅವರ ಜಹಗೀರು. ಇಲ್ಲಿ ಮುಸಲಮಾನರೆ ಹೆಚ್ಚು. ಅವರೊಂದು ದಿನ ದಳಗಟ್ಟಿಕೊಂಡು ರಮೇಶ ನಲ್ಲಿಗೆ ಬಂದರು; "ನಾವೆಲ್ಲರೂ ರಾಯರ ರೈತರೆಯಾದರೂ ನಮ್ಮ ಮಕ್ಕಳು ಮರಿಗಳನ್ನು ಮುಸಲಮಾನರೆಂದು ಇಸ್ಕೂಲಿಗೆ ಸೇರಿಸರು. ಹಲವು ಸಲ ನಾವು ಪ್ರಯತ್ನಪಟ್ಟು ಫಲವಿಲ್ಲದೆ ಹೋಯಿತು. ಮೇಷ್ಟರು ಗಳು ನಮ್ಮ ಮಕ್ಕಳನ್ನು ಏನುಮಾಡಿದರೂ ತೆಗೆದುಕೊಳ್ಳರು" ಹೀಗೆಂದು ಗೋಳಿಟ್ಟರು. ರಮೇಶ ವಿಸ್ಮಿತನಾಗಿ ಕೋಪಗೊಂಡು ಹೇಳಿ ದನು· "ಇಂಥಹ ಅನ್ಯಾಯ ಅತ್ಯಾಚಾರಗಳನ್ನು ಎಂದೂ ಕೇಳರಿಯೆ! ನಿಮ್ಮ ಮಕ್ಕಳನ್ನು ಇಂದೆ ಕರತನ್ನಿರಿ; ನಾನೆಯೆ ನಿಂತು ಸೇರಿಸುತ್ತೇನೆ."

ಅವರೆಂದರು. “ ನಾವು ರೈತರಾದರೂ ಕಂದಾಯ ಸಲ್ಲಿಸಿ ಜಮೀನುಗಳನ್ನು ಅನುಭವಿಸುತ್ತಿದ್ದೇವೆ. ಇದರಿಂದ ಹಿಂದೂಗಳಂತೆ ಜಹಗೀರುದಾರರಿಗೆ ಹೆದರುವವರಲ್ಲ; ಆದರೆ ಇಂಥಹ ಕಡೆ ಕಾದಾಡುವುದು ಲಾಭಕಾರಿಯಲ್ಲ; ಕಾರಣ ಒರಿ ಜಗಳಹತ್ತಿ ಬಿಡುತ್ತದೆಯೇ ಹೊರತು ನಿಜವಾದ ಉಪಕಾರವೇನೂ ಆಗದು. ಇದಕ್ಕೆ ಬದಲು ತಮ್ಮೊಳಗೇನೇ ನಾವೆಲ್ಲರೂ ಸೇರಿ ಚಿಕ್ಕದೊಂದು ಸ್ಕೂಲನ್ನು ಮಾಡಿಕೊಳ್ಳಲಪೇಕ್ಷಿಸುತ್ತೇವೆ, ಚಿಕ್ಕರಾಯರು ಕೊಂಚ ಸಹಾಯ ಮಾಡಿದರೇ ಸಾಕು.” ಕದನವ್ಯಾಜ್ಯಗಳೆಂದರೆ ರಮೇಶನಿಗೂ ಬೇಸರವಾಗಿದ್ದಿತು. ಇದನ್ನು ಇನ್ನೂ ಹೆಚ್ಚಿಸಗೊಡದೆ ಸುತರಾಂ ಇವರ ಪರಾಮರ್ಶವೆಯುಕ್ತವೆಂದು ವಿವೇಚಿಸಿ ಅನುಮೋದಿಸಿ ಅಂದಿಸಿಂದ ಈ ಹೊಸ ವಿದ್ಯಾಲಯವನ್ನು ಹೂಡುವ ಕೆಲಸದಲ್ಲಿ ಮುಳಿಗಿದನು. ಇವರಲ್ಲಿ ಬೆರೆತು ರಮೇಶ ಸ್ವಸ್ಥತೆಯನ್ನು ಪಡೆದುದು ಮಾತ್ರವೆ ಅಲ್ಲ, ಈ ಒಂದು ವರುಷದಿಂದ ಅವನ ಕುಗ್ಗಿದ್ದ ಬಲ ಸಹಿತ ಮೆಲ್ಲ ಮೆಲ್ಲನೆ ಮೈಯಿಕ್ಕುತ್ತ ಬಂತು. ‘ ಕುಂಟೆ ಭಾವಿಯಲ್ಲಿನ ಹಿಂದೂ ನೆರೆಹೊರೆಯರಂತೆ ಇವರು ಮಾತೆತ್ತಿದರೆ ಕಲಹಕ್ಕೆ ಕಾಲು ಕೆರದುಕೊಂಡಿರರು; ಕಲಹವಾಡಿದರೂ ಇವರು ಪ್ರತಿ ಕೈಯಿಂದಲೂ ಒಂದು ಸಂಬರಿಗೆ ರುಜುಹಾಕಿ ಬರಲು ಜಿಲ್ಲೆಗೆ ಓಡರು. ಅದಕ್ಕೆ ಬದಲು ತಮ್ಮ ತಮ್ಮ ಯಜಮಾನರು ಪೋಷಕರು ಇವರ ವಿಚಾರಣೆಯನ್ನೆ ತಪ್ಪೊ ಒಪ್ಪೊ ಏನಾದರೂ ಆಗಲಿ, ಮನ್ನಿಸಿ ನಡೆಯಲು ಯತ್ನಮಾಡುತ್ತಾರೆ. ವಿಶೇಷವಾಗಿ ವಿಪತ್ತೇನಾದರೂ ಒದಗಿದರೆ ಒಬ್ಬರ ಬೆಂಬಲಕ್ಕೊಬ್ಬರು ನಿಂತು ಸರ್ವಾಂತಃಕರಣದಿಂದಲೂ ಮುಂದೆ ಹಾಯ್ದು ಬರುತ್ತಾರೆ. ’ ಎಂದು ರಮೇಶನಿಗೆ ಅನಿಸಿತು. ಅವನಿಗೆ ಹಿಂದೂ ಗ್ರಾಮವಾಸಿಗಳಲ್ಲಿ ಹೀಗೆ, ಉತ್ತಮರಾಗಲಿ ಹೀನರಾಗಲಿ ಬೆರೆಯುವುದನ್ನು ಕಂಡರಿಯನು.

ಮೊದಲಿಗೇ ಜಾತಿಭೇದದಲ್ಲಿ ರಮೇಶನಿಗೆ ಎಂದೂ ಶ್ರದ್ಧೆ ಇರಲಿಲ್ಲ. ಅದರಿಂದ ಈ ಎರಡು ಗ್ರಾಮಗಳ ಅವಸ್ಥೆಯನ್ನು ಜೋಡಿಸಿ ಹಿಡಿದು ಹೋಲಿಸಿ ಅವನ ಅಶ್ರದ್ಧೆ ನೂರ್ಮಡಿ ಹೆಚ್ಚಿಹೋಗಿತ್ತು. ಹಿಂದೂಗಳಲ್ಲಿ ಧರ್ಮ ಮತ್ತು ಸಾಮಾಜದಲ್ಲಿಯ ಅಸಮತೆಯೆ ಈ ಹಿಂಸೆ ಹಗೆತನಗಳಿಗೆ

ಕಾರಣವೆಂದು ಅವನು ಸ್ಥಿರಮಾಡಿದನು. ಮುಸಲಮಾನರಲ್ಲಿ ಧರ್ಮದ ವಿಷಯದಲ್ಲಿ ಎಲ್ಲರೂ ಸಮಾನರು. ಅಂಥಹ ಐಕ್ಯದ ಕಟ್ಟು ಇವರಲ್ಲಿರುವಂತೆ, ಹಿಂದೂಗಳಲ್ಲಿಲ್ಲ, ಆಗುವುದೂ ಇಲ್ಲ. ಜಾತಿಭೇದವನ್ನು ಅಡಗಿಸಲು ಉಪಾಯವಿಲ್ಲದಿರಲು, ಅಷ್ಟೇ ಏಕೆ, ಇದರ ಪ್ರಸಂಗವನ್ನು ಎತ್ತುವುದೆ ಹಳ್ಳಿಗಾಡಿನಲ್ಲಿ ಒಂದು ಬಗೆಯಾದ ಅಸಂಭವ; ಹೀಗಿರಲು ಕಲಹ ವಿವಾದಗಳನ್ನು ಹಗುರು ಮಾಡಿ ಸ್ನೇಹಪ್ರೀತಿಗಳನ್ನು ನೆಡುವುದಕ್ಕೆ ಪ್ರಯಾಸಪಡುವುದು ಗಾಳಿ ಗುದ್ದಿ ಮೈ ನೋಯಿಸಿಕೊಂಡಂತೆ. ಈ ಕೆಲವರುಷಗಳಿಂದ ತಾನು ಸ್ವಂತವಾಗಿ ಗ್ರಾಮಕ್ಕಾಗಿ ವ್ಯರ್ಥ ಪ್ರಯತ್ನಗಳನ್ನು ಮಾಡಿ ಮೈ ಮುರಿದುಕೊಂಡುದು ಅವನಿಗೆ ಅತ್ಯಂತ ಅನುತಾಪದ ವಿಷಯದಂತೆ ಹೊಳೆಯಿತು. ಇವರು ಹೀಗೆಯೇ ಅಲ್ಲಿ ಉಂಡ, ಇಲ್ಲಿ ಉಂಡ, ಎಂತಲೆ ಬಹುದಿನಗಳಿಂದಲೂ ಹೋರಾಡುತ್ತಾ ಬಂದಿದ್ದಾರೆ, ಮತ್ತು ಇದೇ ಬಗೆಯಾಗಿಯೆ ಇನ್ನೂ ಬಹುದಿನ ಕಳೆಯಲೂ ಬಹುದು. ಇವರ ಒಳಿತು ಎಂದಿಗೂ ಏತರಿಂದಲೂ ಆಗಲಾರದು ! ಆದರೆ ಮಾತು ಪಕ್ಕಾಮಾಡಿಕೊಳ್ಳಬೇಕು. ಹಲವು ಕಾರಣಗಳಿಂದ ಬಲುದಿನವಾಯಿತು, ಅವನು ದೊಡ್ಡಮ್ಮನನ್ನು ಭೆಟ್ಟಿಯಾಗಿರಲಿಲ್ಲ. ಆ ಮಾರಾಮಾರಿಯಾದ ಮೇಲೆ ಬಹುಮಟ್ಟಿಗೆ ಬೇಕೆಂತಲೇ ಅವನು ನೋಡಲು ಹೋಗಿರಲಿಲ್ಲ. ಇಂದು ಮುಂಜಾನೆಯಲ್ಲಿ ಎದ್ದು ಅವನು ನೇರವಾಗಿ ಅವಳ ಕೋಣೆಯ ಬಾಗಿಲಲ್ಲಿ ಬಂದು ನಿಂತನು. ದೊಡ್ಡಮ್ಮನ ಬುದ್ಧಿ ಮತ್ತು ಅಭಿಜ್ಞತೆಯ ವಿಷಯದಲ್ಲಿ ಅವನಿಗೆ ಇಷ್ಟೊಂದು ನಂಬುಗೆ ಇತ್ತೆಂಬುದನ್ನು ಅವನೇ ಅರಿಯ. ರಮೇಶ ಕೊಂಚ ಅಚ್ಚರಗೊಂಡೇ ನೋಡಿದನು; ದೊಡ್ಡಮ್ಮ ಇಷ್ಟು ಹೊತ್ತಿಗೇನೆ ಮಿಂದು ಮಡಿಯುಟ್ಟು ಮಣೆಯ ಮೇಲೆ ಕೂತು ಕನ್ನಡಕವನ್ನು ಹಾಕಿಕೊಂಡು ಈ ಮೊಬ್ಬರದಲ್ಲಿಯೆ ಪುಸ್ತಕವೊಂದನ್ನು ಓದುತ್ತಿದ್ದಾಳೆ. ಅವಳಿಗೂ ಏನೂ ಆಶ್ಚರ್ಯವಾಗಲಿಲ್ಲ. ಪುಸ್ತಕವನ್ನು ಮುಚ್ಚಿಟ್ಟು ಆದರಿಸಿ ಅವನನ್ನು ಒಳಕ್ಕೆ ಕರೆದು ಕೂಡಿಸಿ, ಕೊಂಡಳು ಮತ್ತು ಮುಖವನ್ನು ನಿಟ್ಟಿಸಿ ನೋಡಿ ಕೇಳಿದಳು. " ಇಷ್ಟು ಹೊತ್ತಿಗೇನೇ ?"

ರಮೇಶನೆಂದನು. ಬಲುದಿನಗಳಾದವು, ನಿನ್ನನ್ನು ನೋಡಲಿಲ್ಲ ದೊಡ್ಡಮ್ಮ. ನಾನು ಪೀರಪುರದಲ್ಲೊಂದು ಸ್ಕೂಲು ಮಾಡುತ್ತಿದ್ದೇನೆ."

ವಿಶ್ವೇಶ್ವರಿಯೆಂದಳು. "ಕೇಳಿದ್ದೇನೆ, ಆದರೆ ನಮ್ಮ ಸ್ಕೂಲಲ್ಲಿ ಪಾಠ ಹೇಳುವುದಕ್ಕೆ ಹೋಗುವದಿಲ್ಲವೇಕೆ, ಹೇಳು ನೋಡೋಣ ?"

ಆ ಮಾತು ಹೇಳಲಿಕ್ಕೆ ಬಂದೆ ದೊಡ್ಡಮ್ಮಾ! ಇವರ "ಕಲ್ಯಾಣಕ್ಕಾಗಿ ಯತ್ನಿಸುವುದು ವ್ಯರ್ಥ ಶ್ರಮ. ಯಾರ ಒಳಿತನ್ನು ಇವರು ಸಹಿಸರು; ಅಭಿಮಾನ ಅಹಂಕಾರಗಳು ಇವರಲ್ಲಿ ತುಂಬಿ ತುಳುಕುತ್ತಲಿವೆ. ಇಂಥವರ ನಡುವೆ ತೇಕಿ ತೇಕಿ ಸಾಯುವದರಲ್ಲಿ ಲಾಭವಿಲ್ಲ; ಬರಿ ಒಳಗೊಳಗೆ ಹಗೆಗಳು ಹೆಚ್ಚಿಕೊಳ್ಳುತ್ತಾರೆ. ಇದಕ್ಕೆ ಬದಲು ಪ್ರಯತ್ನ ಮಾಡಿದರೆ ಫಲ ದೊರೆಯಬಹುದಾದ ಕಡೆ ನಾನು ದುಡಿಯುತ್ತಿದ್ದೇನೆ."

ದೊಡ್ಡಮ್ಮನೆಂದಳು. "ಈ ಮಾತು ಹೊಸದಲ್ಲ, ರಮೇಶ! ಭೂಮಿಯ ಮೇಲೆ ಒಳ್ಳೇದನ್ನು ಮಾಡುವ ಭಾರವನ್ನು ಹೊತ್ತವರಿಗೆ ಹಗೆಗಳು ಹೆಚ್ಚುತ್ತಲೆ ಇರುವರು. ಅದಕ್ಕೆ ಬೆದರಿ ಹಿಂಜರಿಯುವದಕ್ಕೆ ನೀನು ಬೆರೆಯಬಹುದೆ, ಮಗು! ಬಲು ಭಾರವನ್ನು ಹೊರಲು ದೇವರು ನಿನಗೆ ಹೆಗಲಿತ್ತಿರುವಾಗ ನೀನದನ್ನು ವಹಿಸಲೇ ಬೇಕು. ಆದರೆ, ಹೌದು, ರಮೇಶ, ನೀನೇನಾದರೂ ಅವರ ಕೈಲಿ ನೀರು ಕುಡಿಯುತ್ತಿಯಾ?"

ರಮೇಶ ನಕ್ಕು ಹೇಳಿದನು. "ಇಲ್ಲಿ ನೋಡು ದೊಡ್ಡಮ್ಮ ಇಷ್ಟರಲ್ಲೇ ನಿನ್ನ ಕಿವಿಯತನಕ ಮುಟ್ಟಿದೆ; ಇನ್ನೂ ಕುಡಿದಿಲ್ಲ, ಕುಡಿದರೂ ನನಗೆ ದೋಷವೆನಿಸುವದಿಲ್ಲ. ನಾನು ನಿಮ್ಮಗಳ ಜಾತಿ ಭೇದವನ್ನು ಒಪ್ಪೆನು."

ದೊಡ್ಡಮ್ಮನು ಆಶ್ಚರ್ಯಗೊಂಡು ಕೇಳಿದಳು. "ಒಪ್ಪೊಲ್ಲವೇನೊ? ಇದೇನು ಸುಳ್ಳುಮಾತಲ್ಲವೊ, ಜಾತಿಭೇದವಿಲ್ಲವೆ, ನೀನು ಒಪ್ಪುವದಿಲ್ಲವೆ?"

ರಮೇಶನೆಂದನು. "ಆ ಮಾತನ್ನು ವಿಚಾರಿಸಲಿಕ್ಕೆಂತಲೆ ಇಂದು ನಿನ್ನ ಹತ್ತರ ಬಂದಿದ್ದೇನೆ, ದೊಡ್ಡಮ್ಮ! ಜಾತಿಭೇದವಿದೆ, ಅದನ್ನು ಒಪ್ಪುತ್ತೇನೆ, ಆದರೆ ಒಳ್ಳೆಯದೆಂತ ಒಪ್ಪೆನು."

"ಏಕೆ?"

ರಮೇಶ ಥಟ್ಟನೆ ಸೆಣಕಿನಿಂದ ಹೇಳಿದನು. "ಏಕೆ, ಅದನ್ನು ನಿನಗೆ ಹೇಳಬೇಕೆ? ಇದರಿಂದ ತಾನೆ ಎಷ್ಟೊ ಮನೋಮಾಲಿನ್ಯಗಳು, ಎಷ್ಟೊ

ವಾದವಿವಾದಗಳು; ಇದೇನು ನೀನರಿಯಾ? ಸಮಾಜದಲ್ಲಿ ಕೀಳು ಜಾತಿಗಳೆಂದು ಗೊತ್ತಾದವರು ಉತ್ತಮರನ್ನು ಹಿಂಸೆ ಮಾಡುವುದು, ಕೀಳಾಗಿರುವುದರ ವಿರೋಧವಾಗಿ ವಿದ್ರೋಹಮಾಡಿ ಇದರಿಂದ ಬಿಡುಗಡೆ ಪಡೆಯಬೇಕೆನ್ನುವುದು, ಇದೆಲ್ಲಾ ಬಹಳ ಸ್ವಾಭಾವಿಕ. ತನ್ನನ್ನೂ ತನ್ನ ಜಾತಿಯನ್ನೂ ಕಾಪಾಡಲಿಕ್ಕೆ ಹೆಚ್ಚಿಸಲಿಕ್ಕೆ ನೈಸರ್ಗಿಕ ನಿಯಮವೊಂದುಂಟು. ನಾವು ಅದನ್ನು ಸ್ವೀಕರಿಸದೆ ಪ್ರತಿದಿನವೂ ಸಂಖ್ಯೆಯಲ್ಲಿ ಕಡಮೆಯಾಗುತ್ತೇವೆ. ಇಗೊ ಮನುಷ್ಯರನ್ನು ಎಣಿಕೆ ಹಾಕುವ ಸಂಪ್ರದಾಯವೊಂದಿದೆ, ಅದರ ಫಲಿತವನ್ನು ಓದಿದ್ದರೆ, ದೊಡ್ಡಮ್ಮ ನಿನಗೆ ಭಯವಾಗುತ್ತಿತ್ತು. ಮನುಷ್ಯನನ್ನು ಹೀನಗಳೆದು ಅಪಮಾನ ಮಾಡುವುದರ ಫಲ ಕರತಲಾಮಲಕವಾಗಿದೆ; ಹಿಂದುಗಳು ಬರುತ್ತ ಬರುತ್ತ ಹೇಗೆ ದಿನವಹಿ ಕಡಮೆ ಬೀಳುತ್ತಿದ್ದಾರೆ ಮತ್ತು ಮುಸಲ್ಮಾನರು ಲೆಕ್ಕದಲ್ಲಿ ಹೆಚ್ಚುತ್ತ ಹೋಗುತ್ತಿದ್ದಾರೆ. ಆದರೂ ಹಿಂದುಗಳಿಗೆ ಎಚ್ಚರವೇ ಇಲ್ಲ. '

ವಿಶ್ವೇಶ್ವರಿ ನಕ್ಕು ಎಂದಳು. ನಿನ್ನ ಇಷ್ಟು ಮಾತನ್ನ ಕೇಳಿ ನನಗನ್ನೂ ಎಚ್ಚರವುಂಟಾಗಿಲ್ಲ, ರಮೇಶ; ಮನುಷ್ಯರನ್ನು ಎಣಿಕೆ ಹಾಕಿ ತಿರುಗುವುದು ಇಷ್ಟುಜನ ಕೀಳರಾಗಿರಬೇಕೆಂಬ ಭಯದಿಂದ ತಮ್ಮ ಜಾತಿಯನ್ನು ಬರೆಯಿಸದೆ ಇದ್ದಾರೆಂದು ಗಣನೆಮಾಡಿ ಗೊತ್ತುಮಾಡಿ ಕೊಟ್ಟರೆ ಆವಾಗ ನನಗೂ ಎಚ್ಚರ ಬರಬಹುದು. ಹಿಂದೂಗಳು ಕಡಿಮೆ ಬೀಳುತ್ತಿದ್ದಾರೆಂಬುದನ್ನು ಒಪ್ಪುತ್ತೇನೆ. ಆದರೆ ಅದಕ್ಕೆ ಕಾರಣಗಳು ಬೇರೆ ಇವೆ, ಅದೂ ಸಹ ಸಮಾಜದ ದೋಷವೆ ಹೌದು, ನಿಜ; ಆದರೆ ಕೀಳು ಜಾತಿಯವರು ತಮ್ಮ ಜಾತಿಯನ್ನು ಕೀಳಿಸಿರುವುದೆ ಅದರ ಕಾರಣವಲ್ಲ. ಸುಮ್ಮನೆ ಕಿರಿ ಅಥವಾ ಕೀಳರೆಂತ ಯಾವ ಹಿಂದೂವೂ ಎಂದಿಗೂ ಜಾತಿಯನ್ನು ಜೋಡಿಸಲಿಲ್ಲ."

ರಮೇಶ ಸಂದಿಗ್ಧ ದನಿಯಲ್ಲಿ ಎಂದನು. "ಆದರೆ ಪಂಡಿತರು ಅದನ್ನೆ ಅನುಮಾನ ಮಾಡುತ್ತಾರೆ ದೊಡ್ಡಮ್ಮಾ!"

ದೊಡ್ಡಮ್ಮನೆಂದಳು. ಅನುಮಾನದ ವಿರುದ್ಧವಾಗಿ ತರ್ಕ ನಡೆಯದು, ಮಗು! ಯಾರಾದರೂ ಹೀಗೆ ವರ್ತಮಾನ ಕೂಡಿಸಿ ತರುವುದಾದರೆ

ಇಂತಹ ಗ್ರಾಮದಲ್ಲಿ ಇಷ್ಟು ಜನ ಕೀಳರು ಇದಕ್ಕಾಗಿಯೆ ತಮ್ಮ ಜಾತಿಯನ್ನು ಈ ವರುಷ ಹೇಳದೆ ಇದ್ದಾರೆ, ಪಂಡಿತರ ಮಾತನ್ನು ಕಿವಿಗೆ ಹಾಕಿಕೊಳ್ಳಬಹುದು. ಆದರೆ ಈ ವರ್ತಮಾನವನ್ನು ಯಾರೂ ತರಲಾರರೆಂಬುದನ್ನು ನಾನು ಖಂಡಿತವಾಗಿ ಬಲ್ಲೆ."

ರಮೇಶ ಆದರೂ ಚರ್ಚೆಯನ್ನು ಮುಂದರಿಸಿದನು. "ಆದರೆ ಕೀಳು ಜಾತೀಯರು ಉತ್ತಮರಿಗೆ ಅನ್ಯಾಯವಾಗಿ ಹಿಂಸಿಸಿ ನಡೆಯುವರು, ಇದು ನನಗೆ ಸರಿಯಾದ ಮಾತೆಂತ ತೋರುತ್ತೆ ದೊಡ್ಡಮ್ಮ!"

ರಮೇಶನ ತೀವ್ರ ಉತ್ತೇಜನದ ಮಾತಿನಿಂದ ವಿಶ್ವೇಶ್ವರಿ ತಿರಗೂ ನಕ್ಕು; ಹೇಳಿದಳು. "ಸರಿಯಪ್ಪಾ. ಮಗು, ಅದಲ್ಲ. ಒಂದೂ ಸರಿಯಾದುದಲ್ಲ. ಇದು ನಮ್ಮದು ನಗರವಲ್ಲ. ಹಳ್ಳಿಗಾಡಿನಲ್ಲಿ ಜಾತಿ ದೊಡ್ಡದೆ ಚಿಕ್ಕದೆ ಎಂಬುದರ ವಿಷಯವಾಗಿ ರಾಗಿಯಷ್ಟೂ ತಲೆನೋವಿಲ್ಲ. ಕಿರಿಯ ಚಿಕ್ಕವನೆಂದು ಹಿರಿಯ ತನ್ನ ತಮ್ಮನನ್ನು ನೋಯಿಸನು, ಒಂದೆರಡು ವರುಷಗಳಾದ ಮೇಲೆ ಅವನ ಮನಸ್ಸಿನಲ್ಲಿ ಹುಟ್ಟಿದ್ದರ ದುಃಖ ಕೊಂಚವೂ ಇರದು, ಹಳ್ಳಿಗಾಡಿನ ರೀತಿ ಇದೆಯೆ. ಇಲ್ಲಿ ಕೋಮಟಿ ಬ್ರಾಹ್ಮಣನಾಗಲಿಲ್ಲವೆಂತ ಕೊಂಚವೂ ದುಃಖಪಡನು. ಕೈವರ್ತ ಕೋಮಟಿಗೆ ಸಮಾನನಾಗಲು ಯತ್ನ ಮಾಡನು. ದೊಡ್ಡಣ್ಣನಿಗೆ ತಮ್ಮ ತಲೆಬಾಗುವುದರಿಂದ ತಮ್ಮನ ತಲೆ ನಾಚಿಕೆಯಿಂದ ಹೀನವಾಗದುದು ಹೇಗೋ ಹಾಗೆಯೇ ಶೂದ್ರ ಬ್ರಾಹ್ಮಣನಿಗೆ ಅಡ್ಡ ಬೀಳುವುದರಲ್ಲಿ ಸಂಕೋಚವೇನೂ ಇಲ್ಲ. ಅದಲ್ಲ, ಮಗು, ಜಾತಿಭೇದ ಹಿಂಸೆ ದ್ವೇಷಗಳಿಂದ ಹುಟ್ಟಲಿಲ್ಲ. ಅಸಲಲ್ಲಿ ಹಿಂದೂಗಳ ಮೇರುದಂಡ (ಬೆನ್ನೆಲಬು) ಹಳ್ಳಿಗ್ರಾಮಗಳಲ್ಲಿ ಇಲ್ಲ.'

ರಮೇಶ ಮನದಲ್ಲಿಯೆ ಆಚ್ಚರಿಗೊಂಡು ಎಂದನು. "ಹಾಗಾದರೆ ಹೀಗೇಕೆ ಆಗುತ್ತದೆ ದೊಡ್ಡಮ್ಮ? ಆ ಊರಲ್ಲಿ ಎಷ್ಟೋ ಮುಸಲ್ಮಾನರ ಮನೆಗಳಿವೆ, ಅವರಲ್ಲಿ ಬೇರೆ ಈ ಬಗೆಯ ವಿವಾದಗಳಿಲ್ಲ. ಒಬ್ಬ ಇನ್ನೊಬ್ಬನ ಕಷ್ಟದ ವೇಳೆಯಲ್ಲಿ ಹೀಗೆ ಕತ್ತುಹಿಸುಕುವುದಿಲ್ಲ. ಅಂದು ದುಡ್ಡಿಲ್ಲದ ದ್ವಾರಕಾಚಾರ್ಯರ ಹೆಣವನ್ನು ಪ್ರಾಯಶ್ಚಿತ್ತವಾಗಿಲ್ಲವೆಂತ ಮುಟ್ಟುವುದಕ್ಕೆ ಸಹ ಒಲ್ಲೆಂದು ಹೋದರು, ಅದು ನೀನೆ ಕಂಡೆಯಲ್ಲ."

ವಿಶ್ವೇಶ್ವರಿಯೆಂದಳು. "ಎಲ್ಲವನ್ನೂ ಬಲ್ಲೆ. ಆದರೆ ಜಾತಿಭೇದ

ಅದಕ್ಕೆ ಕಾರಣವಲ್ಲ. ಕಾರಣ ಇದೊ, ಈ ಮುಸಲ್ಮಾನರಲ್ಲಿ ಸತ್ಯವಾದ ಧರ್ಮವೊಂದಿದೆ, ಆದರೆ ನಮ್ಮಲ್ಲಿ ಅದಿಲ್ಲ. ಯಥಾರ್ಥ ಧರ್ಮವೆಂಬುದು ಒಂದೇ ಪೆಟ್ಟಿಗೆ ನಮ್ಮ ಹಳ್ಳಿಗಾಡಿನಲ್ಲಿ ಲೋಪವಾಗಿ ಹೋಗಿದೆ, ಇವೆ ಬರಿ ಕೆಲ ಆಚಾರವಿಚಾರವೆಂಬ ಕುಸಂಸ್ಕಾರಗಳು ಮತ್ತು ಅವುಗಳ ತಳಹದಿಯ ಮೇಲೆ ನಿಂತಿರುವ ಅರ್ಥವಿಲ್ಲದ ಪಂಗಡ ವಿಭಾಗಗಳು."

ರಮೇಶ ಮನಸ್ಸು ಮುರಿದವನಾಗಿ ನಿಟ್ಟುಸಿರೊಂದನ್ನು ಬಿಟ್ಟು ಎಂದನು. "ಇದಕ್ಕೆ ಪ್ರತಿಯಾಗಿ ಮಾಡಲು ಯಾವ ಉಪಾಯವೂ ಇಲ್ಲವೆ, ದೊಡ್ಡಮ್ಮ?"

ವಿಶ್ವೇಶ್ವರಿಯೆಂದಳು. "ಇದ್ದೇ ಇದೆ, ಮಗು; ಇದಕ್ಕೆ ಪ್ರತಿ ಯಾದುಪಾಯ ಜ್ಞಾನದಿಂದ ಮಾತ್ರವಿದೆ. ನೀನು ಹೆಜ್ಜೆ ಇಟ್ಟಿದ್ದೀ ಯಲ್ಲಾ ಅದೇ ಹಾದಿಯಲ್ಲಿ ಮಾತ್ರವಿದೆ. ಆದುದುರಿಂದಲೇ ನಿನಗೆ ಹೇಳು ತ್ತಿದ್ದೇನೆ, ನೀನು ನಿನ್ನ ಈ ಜನ್ಮಭೂಮಿಯನ್ನು ಬಿಟ್ಟು ಹೋಗಬೇಡ."

ಪ್ರತ್ಯುತ್ತರವಾಗಿ ರಮೇಶ ಏನನ್ನೊ ಹೇಳಬೇಕೆಂದಿದ್ದನು, ವಿಶ್ವೇ ಶ್ವರಿ ಅಡ್ಡಿಮಾಡಿ ಹೇಳಿದಳು. "ನೀನೆನ್ನುವುದು ಮುಸಲ್ಮಾನರಲ್ಲಿಯೂ ಅಜ್ಞಾನ ಅತ್ಯಂತ ಹೆಚ್ಚು. ಆದರೆ ಅವರ ಸಜೀವಧರ್ಮ ಅವರೆಲ್ಲ ದಿಕ್ಕು ಗಳನ್ನೂ ಚೊಕ್ಕಮಾಡಿ ಇಟ್ಟಿರುತ್ತದೆ. ಒಂದು ಮಾತು ಹೇಳುವೆ, ರಮೇಶು, ಪೀರಗ್ರಾಮದಲ್ಲಿ ವರ್ತಮಾನವನ್ನು ವಿಚಾರಿಸಿದರೆ ಕೇಳುವಿ, ಜಾಫರನೆಂಬ ದೊಡ್ಡ ಮನುಷ್ಯನನ್ನು ಅವರೆಲ್ಲರೂ ಬಹಿಷ್ಕಾರ ಹಾಕಿಟ್ಟಿ ದ್ದಾರೆ; ಏಕೆಂದರೆ, ಅವನು ತನ್ನ ವಿಧವೆ ಬಲತಾಯಿಗೆ ಉಣ್ಣಲಿಕ್ಕೆ ಹಾಕ ನಂತೆ. ನಮ್ಮಲ್ಲಿಯಾದರೆ ಗೋವಿಂದ ಗಂಗಾಳಿ ಅಂದು ತನ್ನ ವಿಧವೆ ನಾದಿನಿಯನ್ನು ತನ್ನ ಕೈಯಿಂದಲೆ ಹೊಡೆದು ಅರೆಸಾವಿಗೆ ತಂದನು, ಆದರೂ ಸಮಾಜದಿಂದ ಅವನಿಗೆ ಶಿಕ್ಷೆಯಂತಿರಲಿ, ಅವನೆಯೇ ಒಬ್ಬ ಸಮಾಜದ ಮುಖಂಡನಾಗಿ ಕೂತಿದ್ದಾನೆ. ಈ ಅಪರಾಧಗಳೆಲ್ಲಾ ನಮ್ಮಲ್ಲಿ ಬರಿ ವ್ಯಕ್ತಿಗತ ಪಾಪ ಪುಣ್ಯಗಳು; ಇದಕ್ಕೆ ಶಿಕ್ಷೆ ಬೇಕಾದರೆ ದೇವರು ಕೊಡುವನು ಇಲ್ಲವಾದರೆ ಕೊಡನು, ಆದರೆ ಹಳ್ಳಿಯ ಸಮಾಜ ಈ ವಿಷಯದಲ್ಲಿ ಹುಬ್ಬುಕೂಡ ಗಂಟಿಕ್ಕದು."

ಈ ಹೊಸ ಕಥೆಯನ್ನು ಕೇಳಿ ರಮೇಶನೊಂದು ಕಡೆ ಸೊಲ್ಲಡಗಿ ಹೋದನು, ಇನ್ನೊಂದು ಕಡೆ ಇದನ್ನೆ ಸ್ಥಿರಸತ್ಯವೆಂದು ಗ್ರಹಿಸಲು ಮನಸ್ಸು ಇಬ್ಬಗೆಯಾಯಿತು. ವಿಶ್ವೇಶ್ವರಿ ಅದನ್ನು ಅರಿತವಳಂತೆ ಎಂದಳು. “ ಫಲವನ್ನು ಉಪಾಯವೆಂದು ಭ್ರಮೆಗೊಂಡು ತಪ್ಪು ಮಾಡಬೇಡ, ಮಗು ! ನಿನ್ನ ಮನಸ್ಸಿನಿಂದ ಸಂಶಯ ಹೋಗದೆ ಇರುವುದು ಜಾತಿಗಳ ಸಣ್ಣ ದೊಡ್ಡ ಕಲಹ ಕಾದಾಟಗಳನ್ನು ನೋಡಿಲ್ಲವೆ ? ಆದರೆ ಇದು ಉನ್ನತಿಯ ಲಕ್ಷಣವೊಂದು, ಕಾರಣವಲ್ಲ ! ಎಲ್ಲಕ್ಕೆ ಮುಂಚೆ ಅದಾಗದೆ ಇರಲಾಗುವುದೆ ಇಲ್ಲ. ಮನಸ್ಸಿನಲ್ಲಿ ಅದನ್ನೆ ಹತ್ತಿಸಿಕೊಂಡು, ಅದನ್ನೆ ಆಲೋಚಿಸುತ್ತಾ ಹೋದರೆ ಅತ್ತ ಇತ್ತ ಎರಡು ದಿಕ್ಕುಗಳೂ ನಷ್ಟ ಹೊಂದುವುವು. ಈ ಮಾತು ಸತ್ಯವೊ ಅಲ್ಲವೊ ಎಂಬುದನ್ನು ನೋಡಬೇಕಾದರೆ, ರಮೇಶು, ಪಟ್ಟಣದ ಹತ್ತಿರದೆರಡು ಮೂರು ಗ್ರಾಮಗಳನ್ನು ಸುತ್ತಿ ಬಾ; ಅವುಗಳೊಡನೆ ಈ ನಿನ್ನ ಭಾಪೀಕುಂಟಿಯನ್ನು ಹೋಲಿಸಿ ನೋಡು; ತಾನೆ ತಿಳಿಯುವುದು. ಬೊಂಬಾಯಿಯ ಹತ್ತಿರದೊಂದು ಗ್ರಾಮದೊಡನೆ ಅವನಿಗೆ ಹತ್ತಿರದ ಸಂಬಂಧವಿದ್ದಿತು. ತಾರತಮ್ಯ ಭಾವದಿಂದ ಮನಸ್ಸಿನಲ್ಲಿಯೆ ನೋಡಿಕೊಳ್ಳಲು, ಧಟಕ್ಕನೆ ಅವನ ಕಣ್ಣುಗಳ ಮೇಲಿನ ಕಪ್ಪುಪರದೆಯೊಂದು ಸರಿದು, ಸಂಭ್ರಮದಿಂದಲೂ ವಿಸ್ಮಯದಿಂದಲೂ ಗಂಟಲು ಕಟ್ಟಿಬಂದು ವಿಶ್ವೇಶ್ವರಿಯ ಮುಖವನ್ನು ನಿಟ್ಟಿಸಿ ನೋಡುತ್ತಿದ್ದನು. ಆದರೆ ಅವಳು ಅತ್ತಕಡೆ ಕೊಂಚವೂ ಲಕ್ಷ್ಯವಿಡದೆ ತನ್ನ ಮೊದಲಿನ ಮಾತನ್ನು ಪಠಿಸುವವಳಂತೆ ಮೆಲ್ಲನೆ ಹೇಳುತ್ತಾ ಹೋದಳು. “ ಅದೆನ್ನೇ ತಾನೆ ನಿನಗೆ ಬಾರಿ ಬಾರಿಗೂ ಹೇಳುತ್ತಲಿದ್ದೇನೆ, ಮಗು, ನಿನ್ನ ಜನ್ಮಭೂಮಿಯನ್ನು ನೀನೇನೂ ಬಿಟ್ಟು ಹೋಗಬೇಡ. ನಿನ್ನಂತೆಯೆ ಹೊರಗಡೆಯಿಂದ ದೊಡ್ಡವರಾಗಲು ಸಮರ್ಥರು ಹಳ್ಳಿಗೆ ಹಿಂದಿರುಗುತ್ತಿದ್ದರೆ ಸಂಬಂಧವೆಲ್ಲಾ ಕಡಿದು ಹೋಗುತ್ತಲಿರಲಿಲ್ಲ, ಹಳ್ಳಿಗಾಡಿಗೆ ಈ ಬಗೆಯ ದುರವಸ್ಥೆಯುಂಟಾಗುತ್ತಿರಲಿಲ್ಲ. ಗೋವಿಂದ ಗಂಗಾಳಿಯಂಥವರನ್ನವರು ಎಂದಿಗೂ ತಲೆಯ ಮೇಲೆ ಹೊತ್ತು ನಿನ್ನನ್ನು ದೂರ ಸರಿಸಿಬಿಡುತ್ತಿರಲಿಲ್ಲ. ”

ರಮೇಶನಿಗೆ ರಮೆಯ ಮಾತು ಮನಸ್ಸಿಗೆ ಬಂತು. ಆದುದರಿಂದ

ನಿಟ್ಟಿನ ದನಿಯಲ್ಲಿ ಎಂದನು. " ದೂರ ಸರಿದು ಹೋಗಲು ಇನ್ನು ನನಗೂ ದುಃಖವಿಲ್ಲ, ದೊಡ್ಡಮ್ಮ. "

ವಿಶ್ವೇಶ್ವರಿ ಈ ದನಿಯನ್ನು ಲಕ್ಷಿಸಿದಳು, ಆದರೆ ಕಾರಣವನ್ನರಿಯದೆ ಎಂದಳು. " ಇಲ್ಲ, ರಮೇಶು, ಏತರಿಂದಲೂ ಆಗದು. ಬಂದದ್ದೇನೊ ಆಯಿತು, ಕೆಲಸವನ್ನು ಮೊದಲು ಮಾಡಿದ್ದೀಯೆ, ನಟ್ಟನಡುವೆ ಬಿಟ್ಟು ಹೋದರೆ ನಿನ್ನ ಜನ್ಮಭೂಮಿ ನಿನ್ನನ್ನು ಕ್ಷಮಿಸದು. "

" ಏಕೆ, ದೊಡ್ಡಮ್ಮ, ಜನ್ಮಭೂಮಿ ನನ್ನದೊಬ್ಬನದೇ ಅಲ್ಲ ? "

ದೊಡ್ಡಮ್ಮ ಮಿಂಚಿನ ಮಾತಿನಲ್ಲಿ ಹೇಳಿದಳು. ಇಲ್ಲಿ ಇಷ್ಟು ಜನರಿದ್ದಾರೆ. ಜನ್ಮಭೂಮಿಯ ಕೂಗು ಅವರಿಗಾರಿಗೂ ಕೇಳಿಸಲಿಲ್ಲ. ನೀನು ಬಂದೊಡನೆಯೆ ಕಿವಿಗೊಡಲಿಲ್ಲವೋ.

ರಮೇಶ ಇನ್ನು ವಾದಿಸಲಿಲ್ಲ. ಕೊಂಚ ಹೊತ್ತು ಬಿಗಿದು ಕೂತಿದ್ದು ಸದ್ದು ಮಾಡದೆ ಪ್ರಗಾಢ ಶ್ರದ್ಧೆಯ ಭರದಿಂದ ವಿಶ್ವೇಶ್ವರಿಯ ಪಾದಧೂಳಿಯನ್ನು ಮುಡಿದು ಮೆಲ್ಲನೆ ಹೊರಗಾದನು.

ಭಕ್ತಿ ಕರುಣೆ ಮತ್ತು ಕರ್ತವ್ಯದ ಏಕಾಂತನಿಷ್ಠೆ ಇವುಗಳನ್ನು ಎದೆಯತುಂಬಾ ತುಂಬಿಕೊಂಡು ರಮೇಶ ಮನೆಗೆ ಹಿಂದಿರುಗಿದನು. ಆಗ ಸೂರ್ಯನು ಮೂಡಿದ್ದನು. ಅವನು ಕೋಣೆಯ ಮೂಡಲಿನ ತೆರದ ಕಿಟಕಿಯ ಮುಂದೆ ಚೊಕ್ಕವಾದ ಮುಗಿಲ ಕಡೆ ನಿಟ್ಟಿಸಿ ನಿಂತಿದ್ದನು; ಥಟ್ಟನೆ ಹಸುಳೆಯ ಗಂಟಲದನಿಯ ಕೂಗನ್ನು ಕೇಳಿ ಚಮಕಿ ಮುಖವನ್ನು ತಿರುವುತ್ತಲೆ ರಮೆಯ ಚಿಕ್ಕ ತಮ್ಮ ಜಯ ಬಾಗಿಲ ಹೊರಗೆ ನಿಂತು ನಾಚಿಕೆಯಿಂದ ಮೊಗ ಕೆಂಪೇರಿ " ಚಿಕ್ಕಣ್ಣಾ ! " ಎಂದು ಕರೆಯುತ್ತಿದ್ದುದನ್ನು ಕಂಡನು.

ರಮೇಶ ಹತ್ತಿರಕ್ಕೆ ಹೋಗಿ ಕೈಹಿಡಿದು ಅವನನ್ನು ಒಳಗೆ ಕರೆತಂದು ಕೇಳಿದನು. " ಯಾರನ್ನು ಕರೆಯುತ್ತೀ, ಜಯಾ ! "

" ತಮ್ಮನ್ನು. "

" ನನ್ನನ್ನೆ ? ಚಿಕ್ಕಣ್ಣನೆಂತ ಕರೆಯುವಂತೆ ನಿನಗೆ ಯಾರು ಕಲಿಸಿದರು ? "

" ಅಕ್ಕ ! "

"ಅಕ್ಕ? ಏನಾದರೂ ಹೇಳಿ ಬರಲು ನಿನ್ನನ್ನು ಕಳುಹಿಸಿದಳೆ?"

"ಏನೂ ಇಲ್ಲ. ಅಕ್ಕ ಅಂದಳು, ನನ್ನನ್ನು ನಿನ್ನ ಜೊತೇಲಿ ಕರೆದು ಕೊಂಡು ಚಿಕ್ಕಣ್ಣನ ಮನೆಗೆ ನಡೆಯಂತ, ಅಗೋ ಅಲ್ಲೆ ನಿಂತಿದ್ದಾಳೆ" ಎಂದು ಅವನು ಬಾಗಿಲ ಕಡೆಗೆ ತಿರುಗಿದನು. ರಮೇಶ ವಿಸ್ಮಿತನಾಗಿ ದಡಬಡನೆ ಬಂದು ನೋಡಿದನು; ರಮ ಕಂಬವೊಂದರ ಮರೆಯಲ್ಲಿ ನಿಂತಿದ್ದಾಳೆ; ಸರಿದು ಬಂದು ಸವಿದನಿಯಲ್ಲೆಂದನು. "ಇಂದು ನನ್ನದೆಂಥಹ ಸೌಭಾಗ್ಯ! ಆದರೆ ಹೇಳಿ ಕಳುಹಿಸದೆ, ನೀನೆ ಕಷ್ಟಬಟ್ಟು ಬರಬೇಕಾಗಿತ್ತೆ? ಬಾ, ಒಳಗೆ ಬಾ."

ರಮೆಯೊಂದು ಸಲ ಹಿಂದು ಮುಂದು ತಡವರಿಸಿ, ಆ ಮೇಲೆ ಜಯನ ಕೈಹಿಡಿದು ರಮೇಶನನ್ನು ಅನುಸರಿಸಿ ಕೋಣೆಯ ಹೊಸ್ತಿಲ ವರೆಗೂ ಬಂದು ಅಲ್ಲಿಯೆ ಕುಳಿತಳು. "ಈ ದಿನ ಒಂದು ವಸ್ತುವನ್ನು ತಿರುಪೆ ಬೇಡಲು ತಮ್ಮ ಮನೆಗೆ ಬಂದಿದ್ದೇನೆ, ಕೊಡುವಿರಾ?" ಎಂದು ರಮೇಶನ ಮೊಗವನ್ನು ದಿಟ್ಟಿಸಿ ನೋಡುತ್ತಿದ್ದಳು. ಆ ನೋಟದಿಂದ ರಮೇಶನ ಸಂಪೂರ್ಣ ಹೃದಯದೇಳು ತಂತಿಗಳೂ ಅಕಸ್ಮಾತ್ ಹುಚ್ಚಾಪಟ್ಟೆ ದನಿಯಿಂದ ಮೇಲಕ್ಕೇರಿ ನುಡಿದು ಒಂದೆ ಪೆಟ್ಟಿಗೆ ಕಿತ್ತು ಮುರಟಿ ಬಿದ್ದವು. ಕೆಲ ಗಳಿಗೆಗಳ ಮುಂಚೆ ಅವನ ಮನಸ್ಸಿನಲ್ಲಿ ಯಾವ ಸಂಕಲ್ಪ, ಆಶೆ ಮತ್ತು ಆಕಾಂಕ್ಷೆಗಳು ಅಪರೂಪ ದೀಪ್ತಿಯಿಂದ ಕುಣಿ ಕುಣಿದು ಮೆರೆದಾಡುತ್ತಿದ್ದವೊ ಅವೆಲ್ಲಾ ಒಮ್ಮೆಲೆ ಒಡೆದು ಚೂರು ಚೂರಾಗಿ ಹೋಗಿ ಕಗ್ಗತ್ತಲಿಟ್ಟಿತು. ಆದರೂ ಕೇಳಿದನು. "ಏನು ಬೇಕು ಹೇಳು?"

ಅವನ ಅಸ್ವಭಾವದ ಶುಷ್ಕತೆ ರಮೆಯ ನೋಟಕ್ಕೆ ಮರೆಯಾಗಲಿಲ್ಲ. ಅವಳು ಹಾಗೆಯೆ ಮೊಗದ ಕಡೆ ಕಣ್ಣು ಮಾಡಿಕೊಂಡು ಕೇಳಿದಳು. "ಮೊದಲು ಮಾತು ಕೊಡಿ."

ರಮೇಶ ಕ್ಷಣಕಾಲ ಸುಮ್ಮನಿದ್ದು ತಲೆಯನ್ನಲ್ಲಾಡಿಸಿ ಎಂದನು. "ಅದು, ಆಗದು. ಕೊಂಚವೂ ವಿಚಾರಿಸದೇಯೆ ನಿನಗೆ ಮಾತು ಕೊಡುವ ನನ್ನ ಶಕ್ತಿಯನ್ನು ನೀನು ನಿನ್ನ ಸ್ವಂತ ಕೈಯಿಂದಲೆ ಮುರಿದು ಬಿಟ್ಟೆ, ರಮೆ!"

ರಮೆ ಅಚ್ಚರಿಗೊಂಡೆಂದಳು. "ನಾನೊ?"

ರಮೇಶನೆಂದನು. "ನಿನ್ನ ವಿನಃ ಈ ಶಕ್ತಿಯಿನ್ನಾರಿಗೂ ಇರಲಿಲ್ಲ! ರಮೆ, ಇವತ್ತು ನಿನಗೊಂದು ನಿಜವಾದ ಮಾತನ್ನು ತಿಳಿಸುತ್ತೇನೆ. ಬೇಕಾದರೆ ನಂಬು, ಇಲ್ಲವೆ ಬಿಡು. ಈ ವಿಷಯ ಪೂರ್ತಿಯಾಗಿ ಮುಗಿಯದೆ ಹೋಗಿದ್ದರೆ, ಈ ಮಾತನ್ನು ಸೀನಗೆ ಕೇಳಗೊಡುತ್ತಿರಲಿಲ್ಲ." ಎಂದು ಕೊಂಚ ಸುಮ್ಮನಿದ್ದನು, ತಿರಗೂ ಹೇಳಿದನು. "ಇಂದೂ ಯಾವ ವಿಧದಿಂದಲೂ ರಾಗಿಯಷ್ಟೂ ಹೆಚ್ಚು ಕಡಮೆಯಾಗುವ ಸಂಭವವಿಲ್ಲ, ಆದ್ದರಿಂದಲೆ ತಿಳಿಸುತ್ತೇನೆ; ನಿನಗೆ ಕೊಡಲಾರದುದು ನನ್ನಲ್ಲಿ ಆ ದಿನದ ವರೆಗೂ ಏನೂ ಇರಲಿಲ್ಲ. ಅದೇಕೆ ಬಲ್ಲೆಯಾ?"

ರಮೆ ತಲೆಯನ್ನಲ್ಲಾಡಿಸಿ ತಿಳುಹಿದಳು. "ಇಲ್ಲ," ಆದರೂ ಸಮಸ್ತ ಅಂತಃಕರಣಗಳು ಅವಳದು ಏನೋ ಬಗೆಯಾಗಿ ನಾಚಿಕೆಯಾಗುವ ಆಶಂಕೆಯಿಂದ ಮುಳ್ಳುಗರೆದವು.

ರಮೇಶನಂದನು, "ಆದರೆ ಕೇಳಿ ಕೋಪಿಸಿಕೊಳ್ಳಬೇಡ, ನಾಚಬೇಕಾದುದು ಇಲ್ಲ. ಇದಾವುದೊ ಪೂರ್ವಕಾಲದ ಕತೆಯೊಂದನ್ನು ಕೇಳುವಂತೆ ಮನಸಿನಲ್ಲಿ ತಿಳಿ, ಅಷ್ಟೆ."

ರಮೆ ಮನದಲ್ಲಿಯೆ ಪ್ರಾಣದ ಹೊಣೆಮಾಡಿ ತಡೆಯಲು ಯತ್ನಮಾಡಿದಳು; ಆದರೂ ತಲೆಯವಳದು ನಿಲ್ಲದೆ ಕುಸಿದು ಬಗ್ಗಿ ಹೋಯಿತು, ಎತ್ತಲಾಗಲಿಲ್ಲ.

ರಮೇಶ ಶಾಂತ, ಮೃದು, ನಿರ್ಲಿಪ್ತವಾದ ದನಿಯಲ್ಲಿ ಹೇಳಹತ್ತಿದನು. "ನಿನ್ನನ್ನು ಪ್ರೀತಿಸುತ್ತಿದ್ದೆ, ರಮೆ! ಈಗ ನನ್ನ ಮನಸ್ಸಿಗೆ ಹೊಳೆಯುತ್ತದೆ, ಹಾಗೆ ಪ್ರೀತಿಸುವುದು, ಯಾರೂ ಎಂದಿಗೂ ಮಾಡಿರಲಾರರು. ಚಿಕ್ಕತನದಲ್ಲಿ ಅಮ್ಮನ ಬಾಯಿಯಲ್ಲಿ ಕೇಳುತ್ತಿದ್ದೆ, ನಮಗೆ ಮದುವೆಯಾಗುತ್ತೆಂತ. ಆಮೇಲೆ, ಆಶೆಯೆಲ್ಲಾ ಒಡೆದು ಹೋದಂದು ನಾನು ಅತ್ತುಬಿಟ್ಟಿದ್ದೆ; ಇವತ್ತು ಸಹ ಅದು ನನ್ನ ಮನಸ್ಸಿಗೆ ಬರುತ್ತದೆ."

ಮಾತುಗಳು ಕುದಿಯುವ ಸೀಸದಂತೆ ರಮೆಯ ಎರಡೂ ಕಿವಿಗಳೊಳ ಹೊಕ್ಕು ಸುಡುತ್ತಿದ್ದವು; ಹಾಗೆಯೆ ತನ್ನ ಏಕಾಂತದಲ್ಲಿನ ಪರಿಚಯಕ್ಕೆ ಹೊರಚ್ಚಾದ ಅನುಭವದ ಸಹಿಸಲಾಗದ ಬಹು ತೀವ್ರವಾದ

ವೇದನೆಯಿಂದ ಅವಳೆದೆ ಒಂದು ಕೊನೆಯಿಂದ ಮತ್ತೊಂದು ಕೊನೆಯ ವರೆಗೂ ಕತ್ತರಿಸಿ ಹಾಕುತ್ತಲಿದ್ದಿತು; ಆದರೆ ತಡೆಹಾಕಲು ಹುಡಿಕಿ ಉಪಾಯ ಯಾವದನ್ನೂ ಕಾಣದೆ ಸುತರಾಂ ಏನೂ ಮಾಡಲಾರದ ಕಲ್ಲುಗೊಂಬೆಯಂತೆ ಸ್ತಬ್ಧಳಾಗಿ ಕೂತು ರಮೆ ರಮೇಶನ ವಿಷ ಬಳಿದ ಸಿಹಿ ಮಾತುಗಳನ್ನು ಒಂದಾದ ಮೇಲೊಂದನ್ನು ಕ್ರಮಯಾನ್ವಯವಾಗಿ ಕೇಳುತ್ತ ಹೋದಳು. "ನೀನಂದುಕೊಂಡಿರಬಹುದು, ನಿನಗೆ ಈ ಮಾತನ್ನು ಕೇಳುವುದು ನ್ಯಾಯವಲ್ಲವೆಂತ! ನನ್ನ ಮನಸ್ಸಿನಲ್ಲಿಯೂ ಅದೇ ಸಂದೇಹವಿತ್ತೆಂತಲೆ ಆದಿನ ನಂಜಿನಗೂಡಲ್ಲಿ ಒಂದೇ ದಿನದ ಉಪ ಚಾರದಲ್ಲಿ ನನ್ನೆಲ್ಲಾ ಜೀವನದ ಧಾರೆಯನ್ನೆ ಬದಲು ಮಾಡಿ ಹೋದೆಯೊ ಆಗಸಹಿತ ಸುಮ್ಮನೆ ಇದ್ದೆ. ಆದರೆ ಹಾಗೆ ಸುಮ್ಮನಿರುವದು ನನ್ನ ಪಕ್ಷಕ್ಕೆ ಸಹಜವಲ್ಲದ್ದು."

ರಮೆ ಸಹಿಸಲಾರದ ದನಿಯಲ್ಲಿ "ಹಾಗಿದ್ದರೆ– ಈವೊತ್ತು ತಾನೆ ಮನೆಯಲ್ಲಿ ನನ್ನನ್ನು ಪಡೆದು ನನಗೆ ಅಪಮಾನ ಮಾಡುವುದೇಕೆ?" ಎಂದು ಕೇಳಿದಳು.

ರಮೇಶನೆಂದನು. ಅಪಮಾನ! ಇದರಲ್ಲಿ ಮಾನಾಪಮಾನದ ಮಾತೆ ಇಲ್ಲ. ಹಿಂದಿನ ಆ ರಮೆ ನೀನಲ್ಲ ಆ ರಮೇಶ ನಾನಲ್ಲ ಈಗ. ಆದು ದಾಗಲಿ ಕೇಳು! ಆದಿನ ನನಗೆ, ಅದೇಕೊ ಅರಿಯೆ ಸಂಶಯವೇನೂ ಇಲ್ಲದೆ ನಂಬುಗೆ ಹುಟ್ಟಿತ್ತು. ನಿನಗೆ ನಾನು ಬೇಕಾದುದನ್ನಲಿ ಬೇಕಾ ದುದು ಮಾಡಲಿ, ನನ್ನ ಕೇಡು ನೀನು ಆವ ಅವಸ್ಥೆಯಲ್ಲೂ ಸಹಿಸತಕ್ಕವ ಳಲ್ಲವೆಂತ. ಆ ಹುಡುಗತನದಲ್ಲಿ ನನ್ನನ್ನೊಂದು ದಿನ ಪ್ರೀತಿಸಿದ್ದೆ, ಈಗಲೂ ಅದನ್ನು ಸುತರಾಂ ಮರೆಯಲಿಲ್ಲ. ಹಾಗೆ ತಿಳಿದೆ ನಿನಗಾವ ಮಾತನ್ನೂ ತಿಳುಹಿಸದೆ ನಿನ್ನ ನೆಳಲಲ್ಲಿ ಕೂತು ನನ್ನ ಸಮುಸ್ತ ಜೀವನದ ಕೆಲಸ ಗಳನ್ನು ಮೆಲ್ಲಮೆಲ್ಲನೆ ಮಾಡಿಕೊಳ್ಳುವೆನೆಂತಿದ್ದೆ. ಆಮೇಲೆ ಆ ರಾತ್ರಿ ಅಕಬರನ ಸ್ವಂತ ಬಾಯಲ್ಲಿ ಕೇಳಿದಾಗ ನೀನೇಯೆ– ಆದೇನು? ಹೊರಗಡೆ ಇಷ್ಟೊಂದು ಗುಲ್ಲೇಕೆ?"

"ರಾಯರೆ," ಗೋಪಾಲ ಗುಮಾಸ್ತೆಯ ಗಾಬರಿಬಿದ್ದ ಕಳವಳದ ದನಿ ಕೇಳಬಂತು. ರಮೇಶ ಕೋಣೆಯ ಹೊರಗೆ ಬರುತ್ತಲೆ ಅವನೆಂದನು.

"ರಾಯರೆ, ಪೋಲೀಸಿನವರು ಭಜುಯನನ್ನು ಹಿಡಿದು ಹಾಕಿದ್ದಾರೆ."

"ಏಕೆ?"

ಗೋಪಾಲನ ತುಟಿಗಳು ದಿಗಿಲಿನಿಂದ ಅದುರುತ್ತಿದ್ದವು; ಅವ ನೆಂತೊ ಅಂದನು. "ಮೊನ್ನೆ ರಾತ್ರಿ ರಾಧಾನಗರದ ದರೋಡೆಯಲ್ಲಿ ಅವಸಿದ್ದನಂತೆ."

ರಮೇಶ ಮನೆಯ ಕಡೆ ನೋಡಿ ಎಂದನು. "ಇನ್ನೊಂದು ನಿಮಿಷ ಸಹ ಇರಬೇಡ ರಮೆ, ಕಿಡಿಕಿಯಿಂದಾಚೆಗೆ ಹೋಗಿಬಿಡು. ಪೋಲೀಸಿ ನವರು ಬಿಡರು."

ರಮೆ ಕಪ್ಪಿಟ್ಟ ಮುಖದಿಂದ ಎದ್ದು ನಿಂತೆಂದಳು. "ನಿಮಗೇನೂ ಭಯವಿಲ್ಲವಷ್ಟೆ?"

ರಮೇಶನೆಂದನು. "ಹೇಳಲಾಗದು. ಎಷ್ಟು ದೂರದವರೆಗೆ ಹಬ್ಬಿ ದೆಯೊ, ಏನಾಗಿದೆಯೊ ಅದಾವುದೂ ಇನ್ನೂ ತಿಳಿದಿಲ್ಲ."

ಒಂದು ಸಲ ರಮೆಯ ತುಟಿಗಳದುರಿದವು. ಒಂದು ಸಲ ಅವಳ ಮನಸ್ಸಿಗೆ ಬಂತು, ಪೋಲೀಸಿಗೆ ಆ ದಿನ ಅವಳು ತಾನಾಗಿಯೆ ರಿಪೋರ್ಟು ಕಳುಹಿಸಿದ್ದು. ಆ ಮೇಲೆ ಅವಳು ಧಟ್ಟನೆ ಅಳುತ್ತಳುತ್ತ ಎಂದಳು. "ನಾನು ಹೋಗಲು ಒಲ್ಲೆ."

ರಮೇಶ ವಿಸ್ಮಯದಿಂದ ಗಳಿಗೆ ಸುಮ್ಮನಿದ್ದು, "ಛಿ, ಇಲ್ಲಿ ಇರಲೆ ಕೂಡದು ರಮೆ, ಬೇಗನೆ ಹೊರಟು ಹೋಗು," ಎಂದು ಇನ್ನೇನು ಮಾತನ್ನೂ ಕೇಳದೆ, ಜಯುನ ಕೈಹಿಡಿದು, ಜೋರಿನಿಂದೆಳೆದು, ಈ ಅಕ್ಕ ತಮ್ಮಂದಿರಿಬ್ಬರನ್ನು ಕಿಟಿಕಿಯಿಂದ ಹೊರಚ್ಚು ಮಾಡಿ ಬಾಗಿಲನ್ನು ಜಡಿದು ಬಿಟ್ಟನು.

## ೧೩

ಇವತ್ತಿಗೆರಡು ತಿಂಗಳಾಯಿತು, ಕೆಲ ಜನ ದರೋಡೆಖೋರರ ಜೊತೆಯಲ್ಲಿ ಭಜುಯ ಹಾಜತ್ತಿನಲ್ಲಿ. ಆ ದಿನದ ಮನೆಯ ಝಡತಿಯಲ್ಲಿ

ಸಂಶಯಕರವಾದುದೇನೂ ದೊರಕಲಿಲ್ಲ ಮತ್ತು ಭುಜಂಗಾಚಾರ್ಯರು ಆ ರಾತ್ರಿ ಭಜುಯ ಅವರ ಜತೆಯಲ್ಲಿ ಅವರು ತಮ್ಮ ಮಗಳಿಗೆ ವರನನ್ನು ನೋಡುವುದಕ್ಕೆ ಹೋಗಿದ್ದಾಗ ಬಂದಿದ್ದನೆಂದು ಸಾಕ್ಷಿ ಕೊಟ್ಟಿದ್ದರು. ಆದರೂ ಅವನನ್ನು ಜಾಮೀನಿನ ಮೇಲೆ ಬಿಡಲಾಗಲಿಲ್ಲ. ವೇಣಿ ಬಂದೆಂದನು. "ರಮೆ, ಹಲವು ಬಗೆ ಚಾಲುಚಲನ್ನುಗಳನ್ನು ಪರಿಕಿಸಿ ಆ ಮೇಲೆ ಕೆಲಸ ನಡೆಯಿಸಬೇಕಕ್ಕಾ, ಇಲ್ಲದೆ ಹೋದರೆ ಹಗೆಯನ್ನು ಸುಮ್ಮನೆ ಅಣಕಿಸಿದಂತಾದೀತು ! ಆ ದಿನ ಯಜಮಾನನ ಹುಕ್ಕುಮಿನ ಮೇಲೆ ಭಜುಯ ದೊಣ್ಣೆಯನ್ನು ಹಿಡಿದು, ಮನೆಗೆ ಲಗ್ಗೆ ಹತ್ತಿ ಸೀಗೆ ಕಾಯಿ ಕಸುಕೊಳ್ಳಲಿಕ್ಕೆ ಬಂದಿದ್ದ; ಆ ಮಾತನ್ನು ನೀನು ರಾಣೆಯಲ್ಲಿ ಬರೆಯಿಸಿಡದೆ ಇದ್ದಿದ್ದರೆ, ಇವತ್ತೇ ಹೈಕಳನ್ನು ಇಂಥಹ ಕಾಯಿದೆಗೆ ಸಿಗಿಸಲಾಗುತ್ತಿತ್ತು ! ಹಾಗೆಯೆ ಅದರ ಜೊತೆಯಲ್ಲೆ ರಮೇಶನ ಹೆಸರಲ್ಲೂ ಇನ್ನೊಂದೆರಡ ಮಾತುಗಳನ್ನು ಬಡಾಯಿಸಿ ಬರೆಸಿದ್ದರೆ, ತಂಗಿ, ನನ್ನ ಮಾತನ್ನ ಆಗ ನೀವಾರೂ ಕಿವಿಗೆ ಹಾಕಿಕೊಳ್ಳಲಿಲ್ಲ !"

ರಮೆಯ ಮೊಗ ಅತಿ ಸಪ್ಪೆಯಾದುದ್ದನ್ನು ಕಂಡು ವೇಣಿಯೆಂದನು. "ಇಲ್ಲ, ಇಲ್ಲ, ನೀನು ಸಾಕ್ಷಿಗೊಡಲು ಹೋಗಬೇಕಾಗದು. ಹಾಗೊಂದು ವೇಳೆಯಾದರೆ ತಾನೆ ಏನು! ಜಮೀನ್‌ದಾರಿ ಮಾಡುವವರು ಯಾವದಕ್ಕೂ ಹಿಂದೆಗೆಯಲಾಗದು."

ರಮೆ ಯಾವ ಮಾತನ್ನೂ ಆಡಲಿಲ್ಲ. ವೇಣಿ ಹೇಳುತ್ತ ಹೋದನು. "ಆದರೆ ಅಷ್ಟು ಸುಲಭವಾಗಿ ಅವನನ್ನು ಹಿಡಿಯಲಾಗುವುದಿಲ್ಲ ! ಅವನು ತಾನೆ ಈ ಸಲ ಕಡಮೆಯೇನೂ ಚಾಲಾಕು ಚಲಾಯಿಸಲಿಲ್ಲ, ತಂಗಿ ! ಇಗೊ ನೋಡು ಹೊಸದೊಂದು ಸ್ಕೂಲನ್ನು ಹೂಡಿದ; ಇದರಿಂದ ನಮ್ಮಗಳಿಗೆ ಬಹಳ ಕಷ್ಟಕ್ಕೆ ಇಟ್ಟುಕೊಳ್ಳುತ್ತದೆ. ಹೀಗಿರುವಾಗಲೆ ಮುಸಲಮಾನ ರೈತರು ಜಮೀನುದಾರರನ್ನು ಲಕ್ಷ್ಯಕ್ಕೆ ಇಟ್ಟಿಲ್ಲ, ಅದರ ಮೇಲೆ ಓದುಬರಹ ಕಲಿತರೆಂದರೆ ಜಮೀನುದಾರಿ ಇರುವುದೂ ಇಲ್ಲದ್ದೂ ಒಂದೆ ಪರಿಯಾಗುತ್ತದೆ, ಅದನ್ನ ಈಗಲೆ ಹೇಳಿರುತ್ತೇನೆ."

ಜಮೀನುದಾರಿಯ ಒಳ್ಳೆಯದು ಕೆಡಕು ಎಲ್ಲ ವಿಷಯಗಳಲ್ಲಿ

ವೇಣಿಯ ಪರಾಮರ್ಶದಿಂದಲೆ ರಮೆ ನಡೆದುಕೊಳ್ಳುತ್ತಾಳೆ; ಇದರಲ್ಲಿ ಇಬ್ಬರಿಗೂ ಮತಭೇದ ಎಂದೂ ಆಗಿರಲಿಕ್ಕಿಲ್ಲ. ಇವತ್ತು ಮೊಟ್ಟ ಮೊದಲು ವಿಚಾರಿಸಿದಳು; "ರಮೇಶಣ್ಣನಿಗೆ ಇದರಿಂದ ಹಾನಿ ಇಲ್ಲ-ವಷ್ಟೆ?"

ಈ ವಿಷಯದಲ್ಲಿ ವೇಣಿಗೂ ಸಂಶಯ ಕಮ್ಮಿಯೇನೂ ಇರಲಿಲ್ಲ; ಯೋಚಿಸಿ ಮೊದಲೆ ಗೊತ್ತು ಮಾಡಿಕೊಂಡಿದ್ದಂತೆ ಹೇಳಿದನು. "ಏನು ಬಲ್ಲೆಯಾ, ರಮೆ, ಇದರಲ್ಲಿ ತನ್ನ ಸ್ವಂತ ಹಾನಿಯ ಯೋಚನೆ ಮಾಡಲೆ ಕೂಡದು. ನಮ್ಮಿಬ್ಬರನ್ನೂ ಅಣಗಿಸಿದರೇನೆ ಅವನಿಗೆ ಆನಂದ. ಕಾಣುತ್ತಿಲ್ಲವೆ; ಬಂದಾಗಿನಿಂದ ಹೇಗೆ ಹಣ ಚಲ್ಲುತ್ತಾ ಇದ್ದಾನೆ? ನಾಲ್ಕೂ ಮೂಲೆಗಳಲ್ಲೂ 'ಚಿಕ್ಕರಾಯರು ಚಿಕ್ಕರಾಯರು' ಎಂತ ಜನರವ ಕೀಳು ಜನಗಳಲ್ಲಿ ಎದ್ದುಕೊಂಡಿದೆ, ನಾವೆರಡು ಮನೆಯವರೇತಕ್ಕೂ ಬಾರೆವು, ಮನುಷ್ಯನಿರುವನು ಅವನೊಬ್ಬನೆ ಎಂಬಂತೆ. ಆದರೇನು ಹಲವು ದಿನಗಳು ನಡೆಯವು. ಇಗೋ ಪೋಲಿಸರ ಕಣ್ಮುಂದೆ ಅವನನ್ನು ನಿಲ್ಲಿಸಿದ್ದಿಯಲ್ಲಾ ತಂಗಿ, ಇದೇ ಸಾಕು ಕೊನೆಗೆ, ಇದರಿಂದಲೆ ಅವನಿಗೆ ಕೊನೆಗಾಲವಾಗುತ್ತದೆ. ಆದನ್ನೂ ಹೇಳಿಟ್ಟಿರುತ್ತೇನೆ," ಎಂದು ವೇಣಿ ಮನಸ್ಸಿನಲ್ಲಿ ಬೆರಗಾಗಿ ನೋಡುತ್ತಲಿದ್ದನು; ಅವಳಿಂದ ಬೆನ್ನು ತಟ್ಟುವ ಮಾತಾಗಲಿ ಹುರಿದುಂಬುವ ವಚನವಾಗಲಿ ಒಂದೂ ಹೊರಬೀಳಲಿಲ್ಲ. ಅದಕ್ಕೆ ಬದಲು ಅವಳು ಥಟ್ಟನೆ ಒಂದೆ ಪೆಟ್ಟಿಗೆ ಒಣ್ಣಗೆಟ್ಟಂತೆ ಅವನ ಮನಸ್ಸಿಗೆ ಹೊಳೆಯಿತು, ಅವಳು ಕೇಳಿದಳು. "ನಾನು ಬರಿಸಿದ್ದೆನೆಂದು ರಮೇಶಣ್ಣನಿಗೆ ತಿಳಿದಿದೆಯೆ?"

ವೇಣಿಯೆಂದನು. "ಸರಿಯಾಗಿ ತಿಳಿಯದು; ಆದರೆ ತಿಳಿದೇ ತಿಳಿಯುವುದು, ಭಜುಯನ ಮೊಕದ್ದಮೆಯಲ್ಲಿ ಮಾತೆಲ್ಲಾ ಹೊರಬೀಳಲೆ ಬೇಕು."

ರಮೆ ಮತ್ತಾವ ಮಾತನ್ನೂ ಆಡಲಿಲ್ಲ. ಸುಮ್ಮನೆ ಇದ್ದು ಒಳಗೊಳಗೆ ದೊಡ್ಡದೊಂದೇಟನ್ನು ತಡೆದುಕೊಳ್ಳುವಳಂತೆ ಅವಳು ಕಂಡಳು. ರಮೇಶನನ್ನು ವಿಪತ್ತಿಗೆ ಗುರಿಮಾಡುವುವರಲ್ಲಿ ತಾನೇ ಮುಂದು ಎಂದು ಅವಳ ಮನಸ್ಸಿನಲ್ಲಿ ಹೊಡೆಯುತ್ತಿತ್ತು. ಈ ವರ್ತಮಾನ ಇನ್ನು ರಮೇಶ

ನಿಗೆ ತಿಳಿಯದೆ ಇರದು; ಕೊಂಚ ಹೊತ್ತಿನಮೇಲೆ ತಲೆಯೆತ್ತಿ ವಿಚಾರಿಸಿದಳು, "ಈಚೆಗೆ ಅವನ ಹೆಸರೇನೆ ಎಲ್ಲರ ಬಾಯಿಯಲ್ಲೂ, ದೊಡ್ಡಣ್ಣ ?"

ವೇಣಿಯೆಂದನು, "ಬರಿ ನಮ್ಮ ಹಳ್ಳಿಯಲ್ಲಿ ಮಾತ್ರವೆಯಲ್ಲ, ಅವನನ್ನು ಕಂಡು ವಿಚಾರಿಸಿ ಇನ್ನೂ ಐದಾರು ಗ್ರಾಮಗಳಲ್ಲಿ ಸ್ಕೂಲು ಮಾಡುವುದಕ್ಕೆ ದಾರಿ ಹುಡುಕುವ ಪ್ರಯತ್ನ ನಡೆಯುತ್ತಿದೆಯೆಂದು ಕಿವಿಗೆ ಬಿತ್ತು. ಈಗ ಸಣ್ಣ ಜನಗಳೆಲ್ಲೆಲ್ಲಾ ಬಲವಂತರಾರು ಬಲಹೀನರಾರು ಎಂತ ಗಣನೆಗಳು ನಡೆಯುತ್ತಿವೆ; ಪರಂಗಿ ದೇಶದಲ್ಲಿ ಹಳ್ಳಿಹಳ್ಳಿಗಳಲ್ಲಿಯೂ ಒಂದೊಂದು ಸ್ಕೂಲಿದೆಯಂತಲೆ ಅವರದು ಇಷ್ಟೆಲ್ಲಾ ಏಳಿಗೆಯಂತೆ. ಎಲ್ಲಿ ಹೊಸ ಸ್ಕೂಲನ್ನು ಹೊರಡಿಸಿದರೂ ಅದಕ್ಕವನು ಇನ್ನೂರು ರೂಪಾಯಿಗಳನ್ನು ಕೊಡುತ್ತಾನೆಂದು ರಮೇಶನೆ ಪ್ರಚಾರ ಮಾಡಿಸಿದ್ದಾನೆ. ಅವನ ಅಣ್ಣನಿಂದ ಅವನಿಗೆ ದೊರೆತ ಹಣವನ್ನೆಲ್ಲಾ ಇದಕ್ಕೇ ವೆಚ್ಚಮಾಡುತ್ತಾನೆಯಂತೆ. ಮುಸಲಮಾನರು ಅವನೊಬ್ಬ ಪೀರ ಪೈಗಂಬರನೆಂದು ಗೊತ್ತುಮಾಡಿಕೊಂಡಿದ್ದಾರೆ."

ರಮೆಯ ಹೃದಯದೊಳಗೆ ಈಮಾತು ಒಂದಾವರ್ತಿ ಬೆಳಕುಮಾಡಿ ಮಿಂಚಿನಂತೆ ಮೂಡಿ ಹೋಯಿತು; ತನ್ನ ಹೆಸರೂ ಸಹ ಇದರ ಜೊತೆಯಲ್ಲಿ ಬೆರೆತಿರಬಹುದಾಗಿದ್ದರೆ! ಬರಿ ಕ್ಷಣಕಾಲದ ಮಟ್ಟಿಗೇನೆ. ಮರುಗಳಿಗೆಯೆ ಇಮ್ಮಡಿ ಕಗ್ಗತ್ತಲಿಂದ ಅವಳಂಗವೆಲ್ಲಾ ಕವಿದುಕೊಂಡಿತು. ವೇಣಿ ಹೇಳಿದನು. "ನಾನಂತೂ ಸ್ವಲ್ಪಕ್ಕೆ ಬಿಡೆ. ಅವನು ನಮ್ಮ ರೈತರನ್ನೆಲ್ಲಾ ಹೀಗೆ ಬಿಗಡಾಯಿಸಿ ಬಿಡುತ್ತಿರಲಿ, ಜಮೀನುದಾರರಾಗಿ ನಾವು ಕಣ್ಣುಬಾಯಿ ಮುಚ್ಚಿಕೊಂಡು ಇರುವುದೆ; ಹಾಗೆಂದಾರೂ ಕನಸಿನಲ್ಲಿ ಸಹ ತಿಳಿಯದಿರಲಿ. ಈ ರಂಡೇದು, ಭುಜಂಗಾಚಾರಿ ಭಜುಯನ ಪರವಾಗಿ ಸಾಕ್ಷಿಯನ್ನೊಂದು ಸಲ ಕೊಟ್ಟು ತನ್ನ ಮಗಳ ಮದುವೆಯನ್ನೆಂತು ಮಾಡುವುನೊ ನೋಡುತ್ತೇನೆ. ಇನ್ನೂ ಒಂದು ಸಿಕ್ಕು ಇದೆ–ನೋಡೋಣ ಗೋವಿಂದ ಚಿಗಪ್ಪನೇನು ಹೇಳುತ್ತಾನೆಯೊ! ಅದರ ಮೇಲೆ ದೇಶದಲ್ಲಿ ದರೋಡೆಗಾರರು ಬಿದ್ದೆ ಇದ್ದಾರೆ. ಈಸಲ ಆಳನ್ನು ಜೈಲಿಗೆ ಇಡಿಸಿದ್ದಾಯಿತು, ಇನ್ನು ಯಜಮಾನನ್ನು ಅಲ್ಲಿಗೆ ಕಳುಹಲು ಹೆಚ್ಚಿನ ಪ್ರಯಾಸ ಬೇಕಾಗದು. ಅಗೋ ನೋಡು, ನೀನು ಮೊದಲನೆ ದಿನವೆ ಹೇಳಿದ್ದೆಯಲ್ಲಾ, ರಮೆ, ಹಗೆಮಾಡುವುದರಲ್ಲಿ ಅವನು ತಾನೆ

ಕಡಮೆ ಮಾಪ್ಯಾನೆ ಎಂತ, ಅದು ಹೀಗೆ ನಿಜವಾಗಿ ಬಿಡುವುದೆಂದು ನಾನು ಸಹ ಮನಸ್ಸಿನಲ್ಲಿ ಅರಿಯಲಿಲ್ಲ."

ರಮೆ ಯಾವದೊಂದು ಮಾತನ್ನೂ ಆಡಲಿಲ್ಲ. ತನ್ನ ಪ್ರತಿಜ್ಞೆ ಮತ್ತು ಭವಿಷ್ಯದ್ವಾಣಿಯೂ ಹೀಗೆ ಅಕ್ಷರಕ್ಷರಕ್ಕೂ ಸತ್ಯವಾಗುವ್ರ ದೆಂಬ ವಾರ್ತೆ ಪಡೆದೂ ಅವಳ ಮುಖವು ಅಹಂಕಾರದಿಂದ ಬೆಳಗದೆ ಅದಕ್ಕೆ ಬದಲು ಕಪ್ಪಿಟ್ಟು ಹೋಗಿರುವುದನ್ನು ನೋಡಿ ಅವಳ ಅವಸ್ಥೆ ಯನ್ನು ತಿಳಿಯುವ ಸಾಮರ್ಥ್ಯ ವೇಣಿಗೆ ಇರಲಿಲ್ಲ. ಅದಿಲ್ಲದೆ ಹೋಗಲಿ ವಿಷಯವಾದರೆ ಅತಿ ಸ್ಪಷ್ಟ, ಯಾರ ಕಣ್ಣಿಗೂ ಮರೆಯಾಗುವಂತಿಲ್ಲ- ಅವನಿಗೂ ಆಗಲಿಲ್ಲ.ಮನಸ್ಸಿನಲ್ಲಿ ಕೊಂಚ ಬೆರಗಾಗಿಯೆ ವೇಣಿ ಅಡಿಗೆಯ ಮನೆಯನ್ನು ಹೊಕ್ಕು ಚಿಕ್ಕಿಯ ಜೊತೆಗೆ ಒಂದೆರಡು ಮಾತುಗಳಾಡಿ ಮನೆಗೆ ಹೋಗುತ್ತಿದ್ದನು; ರಮೆ ಅವನಿಗೆ ಕೈಸನ್ನೆ ಮಾಡಿ ಹತ್ತಿರಕ್ಕೆ ಕರೆದು ಮೃದುದನಿಯಲ್ಲಿ ಎಂದಳು. "ಒಳ್ಳೇದು ದೊಡ್ಡಣ್ಣಾ, ರಮೇಶಣ್ಣ ಜೈಲಿಗೆ ಹೋದರೆ ನಮ್ಮೆಲ್ಲರಿಗೂ ದೊಡ್ಡ ಕಳಂಕವಲ್ಲವೆ?"

"ಏಕೆ?" ಎಂದು, ವೇಣಿ ಅಧಿಕತರ ಆಶ್ಚರ್ಯಗೊಂಡು ವಿಚಾರಿಸಿ ದನು.

ರಮೆ ಕೇಳಿದಳು. "ನಮ್ಮ ಸ್ವಂತ ಜನವನ್ನ ನಾವು ರಕ್ಷಿಸದೆ ಹೋದರೆ ಜನವೆಲ್ಲಾ ನಮ್ಮನ್ನು ಛಿ, ಛಿ ಎನ್ನುವದಿಲ್ಲವೆ!"

ವೇಣಿ ಉತ್ತರವಿತ್ತನು. "ಅವರವರ ಕೆಲಸಗಳಿಗೆ ತಕ್ಕ ಫಲ ವನ್ನು ಅವರವರುಣ್ಣುವರು, ಅದರಿಂದ ನಮಗೇನು?"

ರಮೆ ಅದೇ ಮೃದುದನಿಯಲ್ಲಿ ಕೇಳಿದಳು. "ಆದರೆ ರಮೇಶಣ್ಣ ನಿಜವಾಗಿ ಕಳ್ಳತನ ದರೋಡೆ ಮಾಡಿ ತಿರುಗುತ್ತಿಲ್ಲ, ಅದಕ್ಕೆ ಬದಲು ಪರರಿಗೆ ಒಳ್ಳೆಯದನ್ನೆ ಮಾಡಲಿಕ್ಕೆ ತನ್ನ ಸರ್ವಸ್ವವನ್ನು ಕೊಡುತ್ತಿ- ದ್ದಾನೆ, ಆ ಮಾತು ಯಾರಲ್ಲಿಯೂ ಮುಚ್ಚಿರಲಿಕ್ಕಿಲ್ಲ. ಆಮೇಲೆ ನಮ್ಮ ಮೊಗವನ್ನು ನಮ್ಮ ಸ್ವಂತ ಹಳ್ಳಿಯಲ್ಲೆ ಹೊರಗಿಡಲಾಗದೆ ಹೋಗು ವದು"

ವೇಣಿ ಹಿ, ಹಿ, ಎಂದು ಚೆನ್ನಾಗಿ ನಕ್ಕು ಹೇಳಿದನು. "ನಿನಗೆ ಏನಾಗಿ ಹೋಯಿತೆ ಹೇಳು ತಂಗಿ?"

ರಮೆ ಈ ಮನುಷ್ಯನ ಮೊಗದೊಡನೆ ರಮೇಶನ ಮೊಗವನ್ನು ಮನಸ್ಸಿನಲ್ಲೊಂದು ಸಲ ತಾಳೆ ಹಾಕಿಕೊಂಡು ಇನ್ನು ತಲೆಯನ್ನು ಸೆಟ್ಟಗೆ ಎತ್ತಲಾರದವಳಾದಳು. "ಊರಿನವರು ಭಯದಿಂದ ಮುಖದೆದುರಲ್ಲಿ ಆಡದೆ ಹೋದರೂ ಮರೆಯಲ್ಲಿ ಎಂದೆ ತೀರುವರು, ನೀನನ್ನುವಿ, ಮರೆಯಲ್ಲಿ ರಾಜರ ತಾಯಿಯನ್ನು ಸಹ ಭೂತವೆನ್ನುವರಂತ; ಆದರೆ ದೇವರು ಇದ್ದಾನಸ್ಟೆ; ನಿರಪರಾಧಿಗೆ ಸುಳ್ಳುಹೇಳಿ ಶಿಕ್ಷೆಯನ್ನು ಕೊಡಿಸಿದರೆ ಅವನು ಬಿಟ್ಟಾನೆ!" ಎಂದು ಹೇಳಿದಳು.

ವೇಣಿ ಸಂಕಟವನ್ನು ನಟಿಸಿ ಎಂದನು. "ಅಯ್ಯೋ ನಮ್ಮಪ್ಪ, ನನ್ನ ಹಣೆಯಬರೆಹ! ಆ ಪೋಕರಿ ದೇವರುದಿಂಡರೆಂತ ಒಪ್ಪುತ್ತಾನೆಯೆ! ಕಾಳಮ್ಮನ ಗುಡಿ ಬಿದ್ದುಹೋಗುತ್ತಿದೆ, ಮರಾಮತ್ತಿಗೆ ಅವನ ಹತ್ತಿರ ಜನ ಕಳುಹಿಸಿದರೆ ಅವರನ್ನು ಅಟ್ಟಿ ಹೇಳಿದ, 'ನಿಮ್ಮನ್ನ ಕಳುಹಿದೋರಿಗೆ ಹೇಳು ಹೋಗಿ, ವ್ಯರ್ಥ ವ್ಯಯಕ್ಕೆ ನನ್ನಲ್ಲಿ ಹಣ ದೊರಕದೆಂತ. ಕೇಳಿದೆಯೊ ಮಾತು! ಇದು ಅವನ ಹತ್ತಿರ ವ್ಯರ್ಥ ವ್ಯಯ? ಸಾರ್ಥಕವಾದ ವ್ಯಯ ಮುಸಲಮಾನರಿಗೆ ಸ್ಕೂಲ ಮಾಡಿಕೊಡುವುದು! ಇದರಮೇಲೆ ಬ್ರಾಹ್ಮಣರಲ್ಲಿ ಹುಟ್ಟಿದ್ದಾನೆ. ಸಂಜೆ ಸಂಧ್ಯಾವಂದನೆ ಸಹ ಮಾಡುವು ದಿಲ್ಲ. ಮುಸಲಮಾನರ ಕೈನ ನೀರು ಸಹ ಕುಡಿತಾನೆಂದು ಕೇಳಿದೆ. ಎರಡು ಹಾಳೆ ಇಂಗಲೀಷು ಓದಿದಮೇಲೆ ಇನ್ನು ಅವನಿಗೆ ಜಾತಿ ಕುಲ ಅಂತ ಉಂಟೆ, ಅಕ್ಕ ಎಲ್ಲಾ ಹೋಯ್ತು ಏನೂ ಬಾಕಿ ಇಲ್ಲ, ಎಲ್ಲಾ ಅಳತೆ ಹಾಕಿ ನೋಡಿಬಿಟ್ಟಿದ್ದೇವೆ, ನೀನೂನು ಒಂದು ದಿನ ನೋಡುತ್ತೀಯೆ."

ರಮೆ ಇನ್ನು ವಾದಿಸದೆ ಸುಮ್ಮನಾದಳಾದರೂ ರಮೇಶನ ಅನಾಚಾರ ಮತ್ತು ದೇವರ ಮೇಲಿನ ಅಶ್ರದ್ಧೆಯ ಮಾತನ್ನು ನೆನೆದು ಅವಳ ಮನಸ್ಸು ತಿರಗೂ ಅವನಕಡೆ ವಿಮುಖವಾಯಿತು. ವೇಣಿ ತನ್ನ ಮನ ಬಂದಂತೆ ಮಾತುಗಳನ್ನು ಆಡಿಕೊಳ್ಳುತ್ತಾ ಹೊರಟು ಹೋದನು. ರಮೆ ಬಹಳ ಹೊತ್ತು ಒಂದೇ ಭಾವದಿಂದ ನಿಂತಿದ್ದು ತನ್ನ ಕೋಣೆಗೆ ಹೋಗಿ ಮಣೆಯಮೇಲೆ ದಪ್ಪೆಂದು ಕುಕ್ಕರಿಸಿದಳು. ಅಂದು ಏಕಾದಸಿ ಊಟದ ಹಗರಣವಿಲ್ಲೆಂತ ಮನಸದಲ್ಲಿ ಮಾಡಿಕೊಂಡು ಅನತ್ತಿನ ಮಟ್ಟಿಗೆ ಅವಳು ತೃಪ್ತಳಂತೆಯೇ ತಿಳಿದಳು.

## ೧೪

ಮಳೆಗಾಲ ಮುಗಿದು ಮುಂದೆ ಬರುವ ನವರಾತ್ರಿಯ ಆನಂದ ಮತ್ತು ಮಲೇರಿಯದ ಭೀತಿ ಮಲೆನಾಡು ಹಳ್ಳಿಗಳ ಮುಗಿಲು ಗಾಳಿ ಬೆಳಕುಗಳಲ್ಲಿ ಇಣಿಕಿಣಿಕಿ ನೋಡುತಲಿವೆ. ರಮೇಶ ಜ್ವರದಲ್ಲಿ ಬಿದ್ದಿದ್ದನು. ಹೋದ ವರುಷ ಈ ರಾಕ್ಷಸಿಯ ಮುತ್ತಿಗೆಯನ್ನು ಉಪೇಕ್ಷೆ ಮಾಡಿ ಈ ವರುಷ ಸಿಕ್ಕು ಬಿಟ್ಟನು. ಮೂರು ದಿನಗಳ ತನಕ ಜ್ವರವನ್ನನುಭವಿಸಿದ್ದನು; ಇವತ್ತು ಬೆಳಗೆದ್ದು ಕೊಯಿನಪಂದಷ್ಟನ್ನು ನುಂಗಿ ಕಿಟಕಿಯ ಹೊರಗಡೆ ಆರಿಸಿನ ಬಣ್ಣದ ಬಿಸಲನ್ನು ನೋಡಿ ಯೋಚಿಸಿದನು: ಕೆಲಸಕ್ಕೆ ಬಾರದ ಕಟ್ಟೆ ಕಾನೆಗಳೆಲ್ಲದರ ವಿರೋಧವಾಗಿ ಹಳ್ಳಿಗರನ್ನು ಎಚ್ಚರಿಸಲಾಗದೆ ? ಮೂರು ದಿನಗಳ ಮಾತ್ರ ಜ್ವರವನ್ನುಂಡದ್ದರಿಂದಲೆ, ಏನಾದರೂ ಮಾಡಿಯೆ ತೀರಬೇಕೆಂತ ಅವನು ಸ್ಪಷ್ಟವಾಗಿ ತಿಳಿದನು. ಮನುಷ್ಯನಾಗಿ ನಿಶ್ಚೇಷ್ಟೆಯಿಂದೀ ರೋಗವನ್ನನುಭವಿಸುತ್ತಿದ್ದರ ದೇವರು ಅವನನ್ನು ಕ್ಷಮಿಸನು; ಕೆಲ ದಿನಗಳ ಮುಂಚೆ ಈ ಪ್ರಸಂಗವನ್ನೆ ಆಲೋಚಿಸಿ ಅವ ನಿಷ್ಟುರಮಟ್ಟಿಗೆ ಅರಿತುಕೊಂಡಿದ್ದನು: ಇದರ ಭೀಷಣಾಪಕಾರದ ವಿಷಯದಲ್ಲಿ ಹಳ್ಳಿಗರು ಸುತರಾಂ ತಿಳಿಯದವರೇನೂ ಅಲ್ಲ; ಆದರೆ ಹೆರರ ಕಟ್ಟೆಗಳನ್ನು ಕಡಿದು ಕಾನುಗಳನ್ನು ಸವರಿ ಮನೆಯನ್ನವನ್ನುಂಡು ಕಾಡೆಮ್ಮೆಗಳನೋಡಿಸಿ ಅಲೆದಾಡಲು ಯಾರಿಗೂ ಬೇಕಿಲ್ಲ. ಸ್ವಂತ ಕಾನುಕಟ್ಟೆಗಳನ್ನುಳ್ಳವರಂತೂ ಇದಕ್ಕಾಗಿ ಹಣಕಾಸು ಉದ್ಯಮಗಳನ್ನು ವ್ಯಯ ಮಾಡವಲ್ಲರು. ರಮೇಶನೆ ವಿಚಾರಿಸಿ ಇದನ್ನು ತಿಳಿದಿದ್ದನು. ಒಂದೊಂದು ಹಳ್ಳಿ ಮಲೇರಿಯಾದಿಂದ ಹಾಳಾದರೂ ಪಕ್ಕದ ಹಳ್ಳಿಯಲ್ಲಿ ಇದರ ಹಾವಳಿ ಇಲ್ಲವೆಂತಲೆ ಹೇಳಬಹುದು. ಯೋಚನೆ ಮಾಡುತ್ತಿದ್ದನು, ಕೊಂಚ ಹುಷಾರಾಗುತ್ತಲೆ ಈ ಬಗೆಯ ಒಂದು ಹಳ್ಳಿಗೆ ಹೋಗಿ ತಾನೆ ಕಣ್ಣಾರ ಕಂಡು ಬಂದು ಆ ಮೇಲೆ ತಾನು ಮಾಡಬೇಕಾದುದನ್ನು ಗೊತ್ತುಮಾಡುವುದು. ಕಾರಣ ಅವನಿಗೆ ಖಂಡಿತವಾಗಿ ಮನದಟ್ಟಾಗಿತ್ತು, ಈ ಮಲೇರಿಯಾ ಇಲ್ಲದ ಗ್ರಾಮಗಳಲ್ಲಿ ನೀರು ಚೆನ್ನಾಗಿ ಹರಿದು ಹೋಗಲು ಅನುಕೂಲವಿರಲೇ ಬೇಕು. ಇದು ಹೀಗೆಂತ ಯಾರ ಕಣ್ಣಿಗೂ

ಬೀಳದೆ ಹೋದರೂ, ಯತ್ನಮಾಡಿ ಕಣ್ಣುಗಳಲ್ಲಿ ಬೆರಳಿಟ್ಟು ತೋರಿಸಿ ಕೊಟ್ಟರೆ ಜನಗಳು ಕಣ್ಣು ತೆರದಾರು. ನಿಶ್ಚಯವಾಗಿ ಅವನಲ್ಲಿ ವಿಶೇಷ ಅನುರಾಗಿಗಳಾದ ಪೀರಗ್ರಾಮದ ಮುಸಲಮಾನರು ಕಣ್ಣು ತೆರದೇ ತೆರೆಯುವರು. ಅವನ ಇಂಜನಿಯರಿಂಗ್ ಶಿಕ್ಷಣ ಇಷ್ಟುದಿನಗಳ ಮೇಲೆ ಈ ಬಗೆಯೊಂದು ದೊಡ್ಡ ಕೆಲಸಕ್ಕೆ ಉಪಯೋಗಿಸುವ ಸುಯೋಗ ಉಂಟಾಯಿತೆಂದು ಅವನು ಮನಸ್ಸಿನಲ್ಲಿ ಹಿಗ್ಗುತ್ತಿದ್ದನು.

"ಚಿಕ್ಕರಾಯರೆ?" ಅಕಸ್ಮಾತ್ ಅಳುವಿನ ದನಿಯಲ್ಲಿ ಕರೆದುದನ್ನು ಕೇಳಿ ರಮೇಶ ಅತಿ ವಿಸ್ಮಯದಿಂದ ಮೊಗವನ್ನು ತಿರುಗಿಸಿ ನೋಡಿದನು; ಭುಜಂಗಾಚಾರ್ಯ ನೆಲದ ಮೇಲೆ ಬೋರಲುಬಿದ್ದು ಹೆಂಗಸರ ಹಾಗೆ ಬಡಬಡಕೊಂಡು ಅಳುತ್ತಿದ್ದಾನೆ. ಅವನ ೭-೮ ವರುಷದ ಮಗಳೋರ್ವಳು ಜೊತೆಯಲ್ಲಿ ಬಂದಿದ್ದಾಳೆ; ಅಪ್ಪನ ಜೊತೆಗೆ ಬೆರದ ಅವಳ ಕೀರಲು ಕಿರಚು ಮನೆಯನ್ನೆಲ್ಲಾ ತುಂಬಿತು. ನೋಡುತ್ತ ನೋಡುತ್ತಲೆ ಮನೆಯ ಮಂದಿ ಎಲ್ಲೆಲ್ಲಿದ್ದವರೆಲ್ಲರೂ ಬಾಗಿಲಿಗೆ ಬಂದು ಗುಂಪುಗಟ್ಟಿ ನಿಂತರು. ರಮೇಶ ಇದೇನೊ ಎಂದು ಮಂಕುಹಿಡಿದವನಂತೆಯಾದನು. ಯಾರಾದರೂ ಸತ್ತಿರಬಹುದೇ, ಏನೆಲ್ಲಾ ಹಾಳಾಯಿತೊ, ಯಾರನ್ನು ಕೇಳಬೇಕೊ, ಹೇಗೆ ಅಳುವನ್ನು ನಿಲ್ಲಿಸುವುದೊ, ಏನೂ ತೋಚದೆ ಹೋಯಿತು. ಗೋಪಾಲ ಗುಮಾಸ್ತೆ ಕೆಲಸವನ್ನು ಬಿಸುಟು ಓಡಿಬಂದಿದ್ದನು. ಅವನು ಹತ್ತಿರ ಬಂದು ಭುಜಂಗನ ಕೈಯನ್ನು ಹಿಡಿದೆಳೆಯುತ್ತಲೆ ಭುಜಂಗನೆದ್ದು ಕುಳಿತು ಗೋಪಾಲನ ಕೊರಳನ್ನು ಬಿಗಿದಪ್ಪಿ ಭಯಂಕರವಾಗಿ ಗೋಳಿಟ್ಟನು. ಇವನು ತುಸ ಕೊಂಚಕ್ಕೆ ಹೆಂಗಸರ ಹಾಗೆ ಅತ್ತುಬಿಡುವುನೆಂಬುದನ್ನು ನೆನೆದು ರಮೇಶ ಬರುತ್ತ ಬರುತ್ತ ಬೇಸರಗೊಳ್ಳುತ್ತಿರುವಾಗ ಗೋಪಾಲನ ಬಹುಬಗೆಯ ಸಾಂತ್ವನದಿಂದ ಭುಜಂಗ ಕೊನೆಗೆ ಕಣ್ಣೊರಸಿಕೊಂಡು, ಅಷ್ಟಿಷ್ಟು ಪ್ರಕೃತಸ್ಥನಾಗಿ ಕುಳಿತನು ಮತ್ತು ಈ ಮಹಾಶೋಕದ ಕಾರಣವನ್ನು ವಿವರಿಸಲುತಯಾರಾದನು. ವಿವರಣೆಯನ್ನು ಕೇಳಿ ರಮೇಶ ಬೆಬ್ಬರಗೊಂಡು ಕುಕ್ಕರಿಸಿ ಬಿದ್ದನು. ಇಷ್ಟು ದೊಡ್ಡ ಅತ್ಯಾಚಾರ ಎಂದಾದರೂ ಎಲ್ಲಾದರೂ ಸಂಭವಿಸಬಹುದೆಂದು ಕಲ್ಪಿಸಿಕೊಳ್ಳಲು ಸಹ ಅವನಿಂದ ಆಗದೆ ಹೋಯಿತು.

ವಿಷಯವೇನೆಂದರೆ; ಭುಜಂಗನ ಸಾಕ್ಷಿಯಿಂದ ಭಜುಯ ಬಿಡುಗಡೆಯನ್ನು ಪಡೆದನು, ಅವನನ್ನು ಪೋಲೀಸರ ಸ್ನೇಹದೃಷ್ಟಿಯಿಂದಾಚೆಗಿಡಲು ರಮೇಶ ಅವನ ದೇಶಕ್ಕೆ ಕಳುಹಿಸಿಕೊಟ್ಟಿದ್ದನು. ಆಸಾಮಿ ಬದುಕಿದ ಸರಿಯೆ, ಆದರೆ ಸಾಕ್ಷಿಗಾರನು ಬಲೆಯಲ್ಲಿ ಸಿಕ್ಕಿಕೊಂಡನು. ಹೇಗೋ ಗಾಳಿಯ ಮೂಲಕ ತನ್ನ ಸ್ವಂತ ವಿಪತ್ತಿನ ವಾರ್ತೆಯನ್ನು ಪಡೆದು ಸದರಿಗೆ ಹೋಗಿ ಸಂಧಾನಮಾಡಿ ತಿಳಿದುಕೊಂಡನು. ಏನಂದರೆ, ನಾಲ ಕೈದು ದಿನಗಳ ಮುಂದೆಯೆ ವೇಣಿಯ ಚಿಕ್ಕ ಮಾವ ರಾಧಾನಗರದ ಸನಾತನ ಕಳ್ಳಂಬಿ ಭುಜಂಗನ ಹೆಸರಿನಲ್ಲಿ ಬಡ್ಡಿಯುಸಲು ಸೇರಿಸಿ ಸಾವಿರ ದಿನ್ನೂರಿಪ್ಪತ್ತೈದು ರೂಪಾಯಿಗಳು ಏಳು ಆಣೆಗಳಿಗೆ ಡಿಕ್ರಿ ಮಾಡಿಸಿದ್ದಾನೆ, ಒಂದೆರಡು ದಿನಗಳಲ್ಲಿಯೆ ಅವನ ಪೂರ್ವಾರ್ಜಿತ ಮನೆ ಮಠ ಜಪ್ತಿಮಾಡಿ ಹರಾಜು ಕೂಗಿಸಿ ತೆಗೆದುಕೊಳ್ಳುವನು, ಇದು ಒಂದೆ ಪಕ್ಷದ ಡಿಕ್ರಿಯಲ್ಲ. ಯಥಾರೀತಿಯಾಗಿ ಸಮನ್ ಹೊರಟಿದೆ, ಯಾರೊ ಭುಜಂಗನ ಹೆಸರಲ್ಲಿ ದಸಖತ್ತು ಮಾಡಿ ತೆಗೆದುಕೊಂಡಿದ್ದಾರೆ, ಮತ್ತು ಹೀಯರಿಂಗಿನ ದಿನ ಅದಾಲತ್ತಿನಲ್ಲಿ ಹಾಜರಾಗಿ ತಾನೆ ಭುಜಂಗನೆಂದು ಸ್ವೀಕಾರ ಮಾಡಿ, ಕಬೂಲು ಜವಾಬುಕೊಟ್ಟು ಬಂದಿದ್ದಾನೆ. ಇವನ ಸಾಲ ಸುಳ್ಳು, ಫಿರ್ಯಾದಿ ಸುಳ್ಳು. ಈ ಸರ್ವವ್ಯಾಪಿ ಸುಳ್ಳಿನ ಮರೆಯಲ್ಲಿ ಬಲ್ಲಿದನು ಬಡವನ ಆಸ್ತಿಯನ್ನೆಲ್ಲಾ ಕಸಿದುಕೊಂಡು ಅವನನ್ನು ದಾರಿಯ ಭಿಕಾರಿ ಮಾಡಿ ಹೊರದೂಡಲು ಉದ್ಯೋಗಿಸಿದ್ದಾನೆಯಾದರೂ ಸರಕಾರದ ಅದಾಲತ್ತಿನಲ್ಲಿ ಇದನ್ನು ತಡೆ ಹಾಕುವ ಉಪಾಯ ಸಹಜವಲ್ಲ. ಏನಿನಂತೆ ಸುಳ್ಳು ಸಾಲವನ್ನೆಲ್ಲಾ ವಿಚಾರಾಲಯದಲ್ಲ ಒಟ್ಟಿಗೆ ಕೂಡಿಸಿಟ್ಟು ಹೊರ್ತು ಮಾತಾಡಲು ದಾರಿಯಿಲ್ಲ. ತಲೆಯನ್ನು ಕುಟ್ಟಿಕೊಂಡು ಸತ್ತರೂ ಯಾರೂ ಅವನ ಮಾತಿಗೆ ಕಿವಿಗೊಡರು. ಆದರೆ ಇಷ್ಟೊಂದು ಹಣ ದರಿದ್ರ ಭುಜಂಗನಿಗೆ ಸಿಗುವುದೆಲ್ಲಿ, ಅದನ್ನು ಜಮಾಕಟ್ಟಿ, ಈ ಮಹಾ ಅನ್ಯಾಯದ ವಿರುದ್ಧವಾಗಿ ನ್ಯಾಯವಿಚಾರವನ್ನು ಪ್ರಾರ್ಥಿಸಿ ತನ್ನನ್ನು ಕಾಪಾಡಿಕೊಂಡಾನು ? ಸುತರಾಂ ರಾಜರ ಏನು,ಅದಾಲತ್ತು, ಜಡ್ಜು, ಮ್ಯಾಜಿಸ್ಟ್ರೇಟ್ ಎಲ್ಲಾ ತಲೆಯ ಮೇಲೆ ಇದ್ದರೂ ದರಿದ್ರನಾದ ಪ್ರತಿದ್ವಂದ್ವಿಯು ಬಾಯಿಮುಚ್ಚಿಕೊಂಡು ಸಾಯಬೇಕು. ಇದಷ್ಟು

ವೇಣಿ ಗೋವಿಂದ ಗಂಗಾಳಿಯರ ಕೆಲಸ, ಇದರಲ್ಲಿ ಸಂದೇಹವಾರಿಗೂ ಇಲ್ಲ. ಈ ಅತ್ಯಾಚಾರದಿಂದ ಎಂತಹ ದುರ್ಗತಿಯು ಭುಜಂಗನ ಅದೃಷ್ಟದಲ್ಲಿ ಬರದಿರಲಿ ಗ್ರಾಮದವರೆಲ್ಲಾ ಪಿಸಪಿಸ ಹರಟೆ ಹರಟಿಕೊಂಡು ಅಲೆದಾರೆಯೆ ಹೊರತು ಒಬ್ಬನಾದರೂ ತಲೆ ಮೇಲಕೆತ್ತಿ ಎಲ್ಲರೆದುರಲ್ಲಿ ಮುಂದೆ ಬಂದು ಎದುರಾಡನು. ಕಾರಣ ಅವರಾರೂ ಆರಕ್ಕೆ ಬಾರರು ಮೂರಕ್ಕೆ ಮುಟ್ಟರು. ಹೆರರ ವಿಷಯದ ಮಾತುಗಳು ಅವರಿಗೆ ಬೇಕಿಲ್ಲ. ಅದೆಂತಾದರೂ ಇರಲಿ ರಮೇಶನಂತೂ ಇವತ್ತು ನಿಃಸಂದೇಹವಾಗಿ ತಿಳಿದನು. ಹಳ್ಳಿಗಾಡಿನ ಬಡಜನರ ಮೇಲೆ ಅಸಂಕೋಚವಾಗಿ ಅತ್ಯಾಚಾರ ಮಾಡಲು ಸಾಹಸ ಇವರಿಗೆ ಸಿಗುವುದೆಲ್ಲಿ; ಮತ್ತು ಹೇಗೆ ದೇಶದ ಐನುಗಳನ್ನೆ ಇವರು ಕಸಾಯಿಗಳ (ಕಟುಕರ) ಚೂರಿಗಳಂತೆ ವ್ಯವಹರಿಸಬಲ್ಲರು. ಧನಬಲ ಮತ್ತು ಕುಟಿಲಬುದ್ಧಿ ಒಂದು ಕಡೆ ರಾಜಶಾಸನದ ಏಟಿನಿಂದ ಇವರನ್ನು ತಪ್ಪಿಸುತ್ತವೆ ಮತ್ತೊಂದು ಕಡೆ ಜೀವವಿಲ್ಲದ ಸಮಾಜ ಅವರ ದುಷ್ಕೃತ್ಯಗಳಿಗೆ ದಂಡನೆಯಾವುದನ್ನೂ ವಿಧಿಸಲಾರದು; ಆದುದರಿಂದಲೆ ಇವರು ಸಾವಿರಾರು ಅನ್ಯಾಯಗಳನ್ನು ಮಾಡಿಯೂ, ಸತ್ಯಧರ್ಮವಿಹೀನ ಸತ್ತ ಹಳ್ಳಿಯ ಸಮಾಜದ ತಲೆಯ ಮೇಲೆ ಕಾಲಿಟ್ಟು ಹೀಗೆ ನಿರುಪಾಧಿಕವಾಗಿ ಸ್ವೇಚ್ಛಾಚಾರಿಗಳಾಗಿ ವಾಸಮಾಡುತ್ತಾರೆ. ಇಂದು ತನ್ನ ದೊಡ್ಡಮ್ಮನ ಮಾತುಗಳು ಬಾರಿ ಬಾರಿಗೂ ಮನಸ್ಸಿಗೆ ಬರಹತ್ತಿದವು. ಅಂದವಳು ಮರ್ಮಾಂತಿಕ ನಗೆಯನ್ನು ನಕ್ಕು ಹೇಳಿದ್ದಳು. "ರಮೇಶು, ನಿಮ್ಮ ಜಾತಿಕುಲ ವಿಚಾರವಾಗಿ ಒಳ್ಳೆಯದು ಕೆಟ್ಟದ್ದು ಇವುಗಳನ್ನು ಕಟ್ಟಿಕೊಂಡು ಹೋರುವ ಕದನ-ಕಾಳಗ ಹಾಳಾಗಲಿ, ಬರಿ ಬೆಳಕು ಬೆಳಗಿಬಿಡಪ್ಪ, ಬೆಳಕು ಬೆಳಗು. ಹಳ್ಳಿಗಳಲ್ಲಿ ಜನರು ಕತ್ತಲಲ್ಲಿ ಕುರುಡಾದರು. ಒಂದು ಸಲ ಅವರ ಕಣ್ಣುಗಳನ್ನು ಬಿಡಿಸಿ ನೋಡುವ ಉಪಾಯವನ್ನು ಮಾಡಿಕೊಡು, ಮಗು! ಆಗ ತಾವಾಗಿಯೆ ತಿಳಿದುಕೊಳ್ಳುವರು, ಯಾವುದು ತಪ್ಪು ಯಾವುದು ಬಿಳಪು ಎನ್ನುವುದನ್ನು." ಅವಳು ಇನ್ನೂ ಹೇಳಿದ್ದಳು. "ಹಿಂದಿರುಗೇನೊ ಬಂದಿದ್ದೀಯೆ ಮಗು, ಹಾಗಿರುವಾಗ ನೀನು ಇನ್ನು ಹೋಗಬೇಡ! ನೀವು ಮೊಗದಿರುಗಿಸಿದ್ದೀರೆಂತಲೆ ನಿಮ್ಮ ಹಳ್ಳಿ–ತಾಯಿಗೆ ಈ ದುರವಸ್ಥೆ!"

ನಿಜ ತಾನೆ! ಅವನು ಹೊರಟು ಹೋಗಿದ್ದರೆ ಇದರ ಪ್ರತೀಕಾರಕ್ಕೆ ಕೊಂಚವೂ ಉಪಾಯವಿರುತ್ತಿರಲಿಲ್ಲ.

ರಮೇಶ. ನಿಟ್ಟುಸಿರುಬಿಟ್ಟು ಮನಸ್ಸಲ್ಲೆ ಎಂದುಕೊಂಡನು. "ಆಹಾ! ಇದೆ ನಮ್ಮ ಗರ್ವದ ಧನ– ದೇಶದ ಶುದ್ಧಶಾಂತಿ ನ್ಯಾಯ ನಿಷ್ಟ ಹಳ್ಳಿಯ ಸಮಾಜ!" ಒಂದು ಕಾಲದಲ್ಲಿ ಇದು ಜೀವಂತವಿದ್ದಾಗ ದುಷ್ಟರನ್ನು ದಂಡಿಸಿ ಮರೆಗೆಬಿದ್ದ ಗಂಡುಹೆಂಗಳನ್ನು ಸಂಸಾರಯಾತ್ರೆಯ ಹಾದಿಯಲ್ಲಿ ತೊಂದರೆಗಳಿಲ್ಲವಂತು ನಡೆಯಿಸಿಕೊಂಡು ಹೋಗುವ ಶಕ್ತಿ ಇದ್ದಿದ್ದರೂ ಇರಬಹುದು. ಆದರೆ ಈಗ ಅದು ಸತ್ತುಹೋಗಿದೆ; ಆದರೂ ಕಣ್ಣುಕಾಣದ ಹಳ್ಳಿಗರು ಈ ಬಲು ಭಾರವಾದ ವಿಕಾರವಾದ ಹೆಣವನ್ನು ಬಿಡದೆ ಕೊಳ್ಳುವಮಮತೆಯಿಂದ ಹಗಲಿರಳು ದಿನದ ಮೇಲೆ ದಿನಗಳು ತಲೆಯ ಮೇಲೆ ಹೊತ್ತುಕೊಂಡು ಹೀಗೆಯೆ ಕಂಗೆಟ್ಟು ಸತ್ತು ಸುಣ್ಣವಾಗಿ ಏನ ಮಾಡಿದರೂ ಕಣ್ಣು ತೆರೆದು ನೋಡುತ್ತಿಲ್ಲವಲ್ಲ. ಆರ್ತರನ್ನು ರಕ್ಷಿಸದೆ ಸುಮ್ಮನೆ ಸಾಯುಗೊಳ್ಳುತ್ತಿರುವುದನ್ನೆ ಸಮಾಜವೆಂದು ಕಲ್ಪಿಸಿ ಕೊಳ್ಳುವ ಮಹಾಪಾಪ ಅವರನ್ನು ಸಿಕ್ಷೆಯವಾಗಿ ರಸಾತಲದ ಕಡೆಗೇನೆ ಎಳೆದೊಯ್ಯುತ್ತಿದೆ. ರಮೇಶ ಇನ್ನೂ ಕೊಂಚ ಹೊತ್ತು ಬಿಗುವಿನಲ್ಲಿ ಕೂತಿದ್ದು ಥಟ್ಟನೆ ತೊಂದರೆಯುನ್ನುಂಡವನಂತೆ ಎದ್ದು ನಿಂತನು ಮತ್ತು ತಕ್ಷಣ ಹಣಕ್ಕೆಲ್ಲಾ ಒಂದೇ ಚೆಕ್ಕನ್ನು ಬರೆದು ಗೋಪಾಲ ಗುಮಾಸ್ತೆಯ ಕೈಗೆ ಕೊಟ್ಟು ಹೇಳಿದನು. "ನೀವು ಸಂಗತಿಯನ್ನೆಲ್ಲಾ ಸ್ವಂತವಾಗಿ ವಿಚಾರಿಸಿ ಎಲ್ಲ ಭದ್ರತೆಯನ್ನು ಮಾಡಿ ಬನ್ನಿರಿ. ಇಂಥಹ ಭಯಂಕರವಾದ ಅತ್ಯಾಚಾರ ಮಾಡುವ ಸಾಹಸ ಅವರಿಗೆ ತಿರಗೂ ಎಂದಿಗೂ ಉಂಟಾಗ ಬಾರದು."

ಚೆಕ್ಕನ್ನು ಕೈಗೆ ತೆಗದುಕೊಂಡು ಗೋಪಾಲ ಗುಮಾಸ್ತೆ ಮತ್ತು ಭುಜಂಗರಿಬ್ಬರೂ ದೆವ್ವಬಡಿದವರಂತೆ ಕೊಂಚ ಹೊತ್ತು ನೋಡುತಲಿದ್ದರು. ರಮೇಶ ತಿರಗೂ ತನ್ನ ಹೇಳಿಕೆಯನ್ನು ಚೆನ್ನಾಗಿ ತಿಳಿಯ ಹೇಳಿದನು ಮತ್ತು ಅವನು ನಗೆಯಾಡುತ್ತಿಲ್ಲವೆಂಬುದು ನಿಃಸಂದೇಹವಾಗಿ ತಿಳಿದಾಗ ಥಟ್ಟನೆ ಭುಜಂಗ ಓಡಿಬಂದು ಹುಚ್ಚನಂತೆ ರಮೇಶನ ಎರಡು ಕಾಲುಗಳನ್ನೂ ಬಿಗಿದಪ್ಪಿ, ಅತ್ತು ಕಿರಿಚಿ, ಹರಿಸಿ ಹೂಡಿದ ಕಾಂಡದಿಂದ

ರಮೇಶನಿಗಿಂತ ಕಡಮೆ ಬಲಶಾಲಿಯಾಗಿದ್ದವರಿದ್ದಂತೆ ಅವತ್ತು ಅವನಿಂದ ಬಿಡುಗಡೆ ಪಡೆಯುವುದು ಬಲು ಕಠಿಣವಾಗುತಿತ್ತು.

ಈ ಮಾತು ಊರಂತೂರೆಲ್ಲಲ್ಲ ಹಬ್ಬಲು ತಡವಾಗಲಿಲ್ಲ; ಎಲ್ಲರಿಗೂ ತಿಳಿಯಿತು. ವೇಣಿ ಮತ್ತು ಗೋವಿಂದರಿಗೆ ಈ ಸಲ ಸಹಜವಾಗಿ ಬಿಡುಗಡೆಯಾಗದು. ಚಿಕ್ಕರಾಯರು ಅವರ ಚಿರಶತ್ರುವನ್ನು ಕೈಕೆಳಗೆ ತಂದುಕೊಳ್ಳಲು ಇಷ್ಟೊಂದು ಹಣ ಕೈಬಿಟ್ಟಿದ್ದಾರೆ, ಇದನ್ನು ಎಲ್ಲರೂ ಹೇಳುತ್ತಲಿದ್ದರು. ಆದರೆ ಈ ಮಾತು ಅಲ್ಲಿನವರಾರ ಕಲ್ಪನೆಗೆ ಸಹ ಬರುವ ಸಂಭವವಿರಲಿಲ್ಲ. ದುರ್ಬಲ ಭುಜಂಗನ ಬದಲು ದೇವರು ಸ್ವಚ್ಛಂದವಾಗಿ ವಹಿಸಬಲ್ಲವನ ತಲೆಯ ಮೇಲೆಯೆ ಈ ಗಭೀರ ದುಷ್ಕೃತ್ಯದ ಗುರುಭಾರವನ್ನೆತ್ತಿಟ್ಟಿದ್ದಾನೆಯಷ್ಟೆ!

ಆ ಮೇಲೆ ತಿಂಗಳೊಂದು ಕಳೆದಿದೆ. ಮಲೇರಿಯವನ್ನು ಪ್ರತಿಭಟಿಸಿ ಕಾಳಗದ ಕಹಳೆಯನ್ನು ಬಡಿದು ರಮೇಶ ಈ ಒಂದು ತಿಂಗಳೂ ತನ್ನ ಯಂತ್ರತಂತ್ರಗಳನ್ನು ಹಿಡಿದು ಉತ್ಸಾಹದಿಂದ ನಾನಾ ಸ್ಥಾನಗಳಲ್ಲಿ ಅಳತೆಗಳತೆ ಮಾಡಿ ಅಲೆಯುತ್ತಿದ್ದಾನೆ. ಇದರ ಹುಯಿಲಲ್ಲಿ ನಾಳೆಯೆ ಭುಜಂಗನ ಮೊಕದ್ದಮೆ ಎನ್ನುವದನ್ನು ಮರೆತುಬಿಟ್ಟಿದ್ದನು. ಅಂದು ಸಂಜೆಯ ಮುಂದೆ ಥಟ್ಟನೆ ಈ ಮಾತು ನೆನಪಾಯಿತು, ಓಲಗದ ದನಿಯಿಂದ ಆಳುಗಳನ್ನು ವಿಚಾರಿಸಿ ವರ್ತಮಾನವನ್ನು ಕೇಳಿ ಬೆರಗಾಗಿ ಹೋದನು; ಇವತ್ತು ಭುಜಂಗಾಚಾರ್ಯರ ಮೊಮ್ಮಗನ ಅನ್ನಪ್ರಾಶನ, ಆದರೂ ಅವನಿಗೇನೂ ತಿಳಿಯದು. ಭುಜಂಗನು ಸಡಗರ–ಸಂಭ್ರಮಗಳಲ್ಲೇನೂ ಕಡಮೆಮಾಡಿಲ್ಲ. ಊರಿನವರಿಗೆಲ್ಲಾ ಔತಣ ಹೇಳಿದ್ದಾನೆ; ರಮೇಶನಿಗೆ ಹೇಳಲು ಯಾರಾದರೂ ಬಂದಿದ್ದರೊ ಇಲ್ಲವೊ ಮನೆಯವರಾರಿಗೂ ತಿಳಿಯದು. ಅಷ್ಟೆಯಲ್ಲ, ತಲೆಯ ಮೇಲೆ ಕವಿದಿರುವ ಇಷ್ಟು ದೊಡ್ಡ ವ್ಯಾಜ್ಯದ ದಿನ ಹತ್ತಿರವಾಗಿದ್ದರೂ, ಕಳೆದ ಇಪ್ಪತ್ತು ಇಪ್ಪತ್ತೈದು ದಿನಗಳಲ್ಲೊಂದು ದಿನ ಒಂದಾವರ್ತಿಯಾದರೂ ಅವನು ಸಹ ತನ್ನ ಭೇಟಿಗೆ ಬರಲಿಲ್ಲ. ಕಾರಣವೇನಿರಬಹುದೆಂದು ಯೋಚಿಸಿದನು. ಇಹ ಸಂಸಾರದಲ್ಲಿ ಭುಜಂಗ ತನ್ನನ್ನು ತ್ಯಜಿಸಬಲ್ಲನೆಂದು ಅವನ ಮನಸ್ಸಿಗೆ ಹತ್ತಲಿಲ್ಲ. ಅದಕ್ಕೇನೆ ಇಂತಹ ಆಶಂಕೆ ಆತಂಕಗಳಿಂದ ತಾನೆ ನಾಚಿ ರಮೇಶ

ತಕ್ಷಣವೆ ಉತ್ತರೀಯವನ್ನು ಹೆಗಲ ಮೇಲೆಸೆದು ನೆಟ್ಟಗೆ ಆಚಾರ್ಯರ ಮನೆಗೆ ಹೋಗಲು ಹೊರಬಿದ್ದನು. ಹೊರಗೆ ಬಂದೊಡನೆಯೆ ಹಾದಿಯ ಬದಿಯಲ್ಲಿ ಎರಡು ಮೂರು ಬೀದಿನಾಯಿಗಳು ಸೇರಿ ಎಂಜಲೆಲೆಗೆ ಕಿತ್ತಾಡಿ ಕಾದುತ್ತಿವೆ. ಹತ್ತಿರದಲ್ಲಿಯೆ ಓಲಗದವರು ಬೆಂಕಿಯನ್ನು ಹೊತ್ತಿಸಿ ವಾದ್ಯದ ಡೋಲನ್ನು ಕಾಸುತ್ತಿದ್ದಾರೆ. ಒಳಗೆ ಹೋಗಿ ನೋಡಿದನು. ಅಂಗಳದಲ್ಲಿ ಚಿಂದಿ ಚೀರಲಾದ ಷಾಮಿಯಾನೆಯೊಂದನ್ನು ಹಾಕಿದ್ದಾರೆ. ಆ ಗ್ರಾಮಕ್ಕೆಲ್ಲಾ ಗತಿಯಾದ ಐದಾರು ಬಹು ಪುರಾತನ ಸೀಮೆಯೆಣ್ಣೆಯ ಲ್ಯಾಂಪುಗಳನ್ನು ಕಳ್ಳಂಬಿ ಮತ್ತು ಘೋಷಗೇರಿ ಯವರ ಮನೆಗಳಿಂದ ಎರವಲು ತಂದು ಹಚ್ಚಿಟ್ಟಿದ್ದಾರೆ. ಅವುಗಳ ಸ್ವಲ್ಪ ಬೆಳಕು ಮತ್ತು ಅತಿ ಹೆಚ್ಚಿನ ಹೊಗೆಯ ವಾಂತಿಗಳಿಂದ ಸ್ಥಳವೆಲ್ಲಾ ದುರ್ಗಂಧಮಯವಾಗಿ ಹೋಗಿದೆ. ಊಟ ಮುಗಿದಿದೆ. ಹೆಚ್ಚಿಗೆ ಜನ ವಿನ್ನಿಲ್ಲ. ಊರಿನ ಹಿರಿಯರು ಇನ್ನೇನು ಹೊರಡಬೇಕೆನ್ನುವುದರಲ್ಲಿದ್ದಾರೆ; ಧರ್ಮದಾಸ ಹರಿಹರರಾಯರನ್ನು ಇನ್ನೂ ಕೊಂಚ ಕೂಡಬೇಕೆಂದು ಬಲವಂತ ಮಾಡುತ್ತಿದ್ದಾನೆ. ಗೋವಿಂದ ಗಂಗಾಳಿ ಕೊಂಚ ಸರಿದು ಕೂತು ಯಾವನೊ ಒಬ್ಬ ವಕ್ಕಲಿಗ ಹುಡುಗನೊಡನೆ ಗುಟ್ಟುಮಾತಿನಲ್ಲಿ ಮಗ್ನನಾಗಿದ್ದಾನೆ. ಇಂತಹ ಹೊತ್ತಿನಲ್ಲಿ ರಮೇಶ ದುಸ್ವಪ್ನದಂತೆ ಅಂಗಳದ ನಟ್ಟನಡುವೆ ಬಂದು ನಿಂತನು. ಇವನನ್ನು ನೋಡಿದೊಡನೆಯೆ ಅವರ ಮುಖಗಳೆಲ್ಲಾ ಒಂದೆ ಗಳಿಗೆಯಲ್ಲಿ ಮಸಿಬಣ್ಣಗಟ್ಟಿ ಹೋದವು. ಹಗೆಯ ಕಡೆಯವರು ಇದೆ ಮನೆಯಲ್ಲಿ ಈ ಬಗೆಯಾಗಿ ಬೆರದಿರುವುದನ್ನು ನೋಡಿ ರಮೇಶನ ಮೊಗ ತಾನೆ ಮುರುಗಲಿಲ್ಲ. ಅವನನ್ನು ಮರ್ಯಾದೆ ಯಿಂದ ಬರಮಾಡಿಕೊಂಡು ಕೂಡಿಸಲಿಕ್ಕೆ ಯಾರೂ ಮುಂದೆ ಬರಲಿಲ್ಲ, ಅಷ್ಟೇನು, ಒಂದು ಮಾತು ಸಹ ಯಾರೂ ಆಡಲಿಲ್ಲ. ಭುಜಂಗ ಅಲ್ಲಿರ ಲಿಲ್ಲ. ಕೊಂಚ ಹೊತ್ತಾದ ಮೇಲೆ ಏನೊ ಕೆಲಸದ ಮೇಲೆ ಮನೆಯೊಳ ಗಿಂದ, "ನಾನನ್ನೋದು ಗೋವಿಂದಣ್ಣ?" ಎಂದು ಹೊರಗೆ ತಲೆ ಹಾಕಿದೊಡನೆಯೆ ಅಂಗಳದ ನಡುವೆ ಭೂತವನ್ನು ಕಂಡಂತೆ ಪರಕ್ಷಣವೆ ಓಡಿ ಹೋಗಿ ಒಳಗೆ ಹೊಕ್ಕೊಂಡನು. ರಮೇಶ ಮೊಗ ಬಣ್ಣಿಸಿಕೊಂಡು ಹೊರಗೆ ಬಂದಾಗ ಪ್ರಚಂಡ ವಿಸ್ಮಯದಿಂದ ಅವನ ಮನಸ್ಸು ಮಂದ

ವಾಗಿ ಹೋಗಿತ್ತು. ಹಿಂದೆ ಕೂಗು ಕೇಳಿಸಿತು. "ಅಪ್ಪಾ ರಮೇಶ ರಾಯ!" ತಿರುಗಿ ನೋಡಿದನು; ದೀನನು ಹುಸ್ ಹುಸ್ ಎಂದು ಬರುತ್ತಿದ್ದಾನೆ. ಪತ್ತಿರಕ್ಕೆ ಬಂದೆಂದನು. "ನಡೆಯಪ್ಪಾ, ಮನೆಗೆ ನಡೆ." ರಮೇಶ ಕೊಂಚ ನಗಲು ಯತ್ನಮಾಡಿದನಷ್ಟೆ. ನಡೆಯುತ್ತ ದೀನ ಹೇಳಿದನು. "ನೀನವನಿಗೆ ಮಾಡಿದುಪಕಾರ ಅವನ ಹೆತ್ತು ಹೊತ್ತವರು ಸಹ ಮಾಡರು. ಸಣ್ಣ ಪುಟ್ಟ ಮಕ್ಕಳುಮರಿಗಳನ್ನು ಕಟ್ಟಿಕೊಂಡೆ ನಮ್ಮೆಲ್ಲರ ಬಾಳು. ಅದಕ್ಕೇನೆ ನಿನ್ನನ್ನು ಔತಣಕ್ಕೆ ಕರೆದರೆ ತಿಳಿಯಲಿಲ್ಲವೆ ಅಪ್ಪಾ, ಭುಜಂಗನ ಮೇಲೆ ತಾನೆ ತಪ್ಪು ಹೊರಿಸಲಾದೀತೆ, ನೀವೆಲ್ಲಾ ಈಗಳ ಕಾಲದ ಪಟ್ಟಣವಾಸದ ಹುಡುಗರು. ಜಾತಿಕುಲವನ್ನು ಮನ್ನಿಸಿ ನಡೆಯತಕ್ಕವರಲ್ಲ. ಅದಕ್ಕೇ ತಿಳಿಯಲಿಲ್ಲವೆ, ಅಪ್ಪ, ಇನ್ನೇನು ಎರಡು ದಿನಗಳಗೆ ಅವನ ಚಿಕ್ಕಮಗಳಿಗೂ ಹನ್ನೆರಡು ತುಂಬುತ್ತದೆ. ಪಾರಗಾಣಿಸಬೇಕಲ್ಲಪ್ಪ! ನಮ್ಮ ಸಮಾಜದವಸ್ಥೆ ಎಲ್ಲರಿಗೂ ತಿಳಿದೆ ಇದೆ ತಿಳಿಯಲಿಲ್ಲವೆ ಅಪ್ಪ." ರಮೇಶ ಬೇಸರದಿಂದೆಂದನು. "ಸ್ವಾಮಿ, ಸರಿ, ತಿಳಿಯಿತು." ರಮೇಶನ ಮನೆಯ ತೋರಣದ್ವಾರದಲ್ಲಿ ನಿಂತು ದೀನ ಹರ್ಷಿತನಾಗಿ ಹೇಳಿದನು. "ತಿಳಿಯದೆ ಉಂಟೆ, ರಾಯ, ನೀವೇನು ಅರಿಯದವರೆ, ಆ ಬ್ರಾಹ್ಮಣನನ್ನು ತಾನೇ ದೋಷಿ ಎಂತ ಅನ್ನುವುದಾದೀತೆ ನಮ್ಮಂಥಹ ಮುದುಕರಿಗೆ ಪರಕಾಲದ ಚಿಂತೆ.."

"ಸ್ವಾಮಿ, ಹೌದು, ಆ ಮಾತು ಸರಿ" ಎಂದು ರಮೇಶ ದಡಬಡನೆ ಒಳಹೊಕ್ಕನು. ಊರಿನವರು ಅವನನ್ನು ಹೊರಗಿಟ್ಟಿದ್ದಾರೆ; ಅದನ್ನು ತಿಳಿಯುವುದು ಉಳಿಯಲಿಲ್ಲ. ತನ್ನ ಕೋಣೆಗೆ ಬಂದು ಕೋಪ ತಾಪಗಳಿಂದ ಅವನ ಕಂಗಳೆರಡೂ ಬೇಯುಹತ್ತಿದವು. ಇವತ್ತು ಅವನಿಗೆ ಎಲ್ಲಕ್ಕಿಂತಲೂ ಹಚ್ಚಿಗೆ ಇದೆ ಬಡಿಯಿತು; ವೇಣಿ ಗೋವಿಂದರನ್ನು ಭುಜಂಗ ಇವತ್ತು ಆದರಿಸಿ ಕರೆತಂದಿದ್ದಾನೆ ಮತ್ತು ಗ್ರಾಮದ ಮಂದಿ ಕೇಳಿ ತಿಳಿದೂ ಭುಜಂಗನ ಈ ನಡತೆಯನ್ನು ಕ್ಷಮಿಸುವುದಲ್ಲದೆ ಸಮಾಜದ ನಂಬಿಗೆಯ ಮೇಲೆ ಅವನು ರಮೇಶನನ್ನು ಕರೆಯದೆ ಬಿಟ್ಟದ್ದನ್ನೆ ಶಿಫಾರಸು ಮಾಡಿ ಮಂಡಿಸುತ್ತಿದ್ದಾರೆ.

"ಆಹಾ ಭಗವಂತ!" ಅವನೊಂದು ಕುರ್ಚಿಯ ಮೇಲೆ ಕುಕ್ಕ

ರಿಸಿ ದೀರ್ಘಶ್ವಾಸ ಬಿಟ್ಟು ಎಂದುಕೊಂಡನು. "ಈ ಕೃತಘ್ನ ಜಾತಿಯ ಇಂಥಹ ಮಹಾಪಾತಕಕ್ಕೆ ಪ್ರಾಯಶ್ಚಿತ್ತವೇತರಿಂದ! ಇಷ್ಟು ದೊಡ್ಡ ನಿಷ್ಠುರದ ಅಪಮಾನವನ್ನು, ದೇವರೆ, ನೀನು ಕ್ಷಮಿಸಲಾರೆಯಾ?"

೧೫

ಇಂತಹುದೊಂದು ಶಂಕೆ ರಮೇಶನ ತಲೆಗೆ ಸುತರಾಂ ಹೊಳೆಯು ಲಿಲ್ಲವೆಂತಲ್ಲ. ಆದರೂ ಮರುದಿನ ಸಂಜೆಯ ವೇಳೆಗೆ ಗೋಪಾಲ ಗುಮಾಸ್ತೆ ಜಿಲ್ಲೆಯಿಂದ ಹಿಂದಿರುಗಿ ಸ್ಪಷ್ಟವಾಗಿ ತಿಳಿಹಿಸಿದಾಗ—ಭುಜಂಗ ಅವನ ತಲೆಯಮೇಲೆಯೆ **ಹಲಸಿನ ಹಣ್ಣನ್ನು ಕುಕ್ಕಿ ತಿಂದಿದ್ದಾನೆ;** ಅಂದರೆ ಅವನು ಮೊಕದ್ದಮೆಗೆ ಹಾಜರಾಗಲಿಲ್ಲ. ಆದು ಏಕಪಕ್ಷವಾಗಿ ಕೇಸು ಡಿಸ್‌ಮಿಸ್ ಆಗಿ ಅವರು ಕಟ್ಟಿದ್ದ ಹಣ ವೇಣಿ ಮೊಲಾಡವರ ಕೈಸೇರಿತು. ಆಗ ಆ ಕ್ಷಣಕ್ಕೆ ರಮೇಶನ ಕೋಪದ ಜ್ವಾಲೆ ಏದ್ಯುದ್ವೇಗವಾಗಿ ಅಡಿಯಿಂದ ಮುಡಿಯವರೆಗೂ ಹೊತ್ತಿತು. ಅಂದು ಇವರ ಮೋಸಜಾಲಗಳನ್ನು ಅಡಗಿಸುವುದಕ್ಕೆ ಭುಜಂಗನ ಪಕ್ಷವನ್ನು ವಹಿಸಿ ಸುಳ್ಳು ಸಾಲಕ್ಕೆ ಹಣವನ್ನು ಜಮಾ ಕಟ್ಟಿದ್ದನಷ್ಟೆ; ಮಹಾ ಪಾಪಿಷ್ಠ ಭುಜಂಗ ತನ್ನಿಂದಲೆ ತಲೆ ತಪ್ಪಿಸಿಕೊಂಡು ತಿರಗೂ ವೇಣಿಯೊಡನೆಯೆ ಸ್ನೇಹ ಬೆಳೆಯಿಸಿದ್ದಾನೆ. ಅವನ ಈ ಕೃತಘ್ನತೆ ನಿನ್ನಿನ ಅಪಮಾನವನ್ನು ಬಹುಮೇಲಕ್ಕೆತ್ತಿ ಕಟ್ಟಿ ಇಂದು ರಮೇಶನ ತಲೆಯು ತಾಳಗೆಟ್ಟಿತ್ತು. ರಮೇಶ ಇದ್ದಹಾಗೆಯೆ ಎದ್ದುನಿಂತು ಹೊರಕ್ಕೆ ಹೋದನು. ಯಜಮಾನರ ರೇಗಿದ ಕಂಗಳನ್ನು ನೋಡಿ ಭೀತಿಗೊಂಡ ಗೋಪಾಲ ಕೇಳಿದನು. "ರಾಯರೆ, ಎಲ್ಲಾದರೂ ಹೋಗುತ್ತೀರಾ?"

"ಬಂದೆ" ಎಂದು ರಮೇಶ ಬೇಗನೆ ಹೊರಟು ಹೋದನು. ಭುಜಂಗನ ಹೊರಗಿನ ಅಂಗಳಕ್ಕೆ ನುಗ್ಗಿ ನೋಡಿದನು, ಯಾರೂ ಇರ ಲಿಲ್ಲ. ಒಳಹೊಕ್ಕನು; ಅಲ್ಲಿ ಆಚಾರ್ಯರ ಹೆಂಡತಿ ಸಂಜೆಯ ದೀಪಿಗೆ ಮನ್ನು ಹಿಡಿದು ತುಳಸಿ ಕಟ್ಟೆಯಡಿಯಲ್ಲಿ ಇಡುತ್ತಿದ್ದಳು, ಅಕಸ್ಮಾತ್ ರಮೇಶನನ್ನು ಎದುರಿಗೆ ಕಂಡು ಧಟಕ್ಕನೆ ಅವಳು ಬೆಪ್ಪಾದಳು. ಎಂದೂ ಇವನು ಬಂದವನಲ್ಲ ಇಂದೇಕೆ ಬಂದನೆಂದು ಮನಸಿನಲ್ಲಿ ದಿಗಿಲು ಬಡಿದು ದೆವ್ವ ಬಡಿದಂತಾದಳು. ರಮೇಶ ಅವಳನ್ನೆ ಕೇಳಿದನು.

"ಆಚಾರ್ಯರೆಲ್ಲಿ?"

ಗರತಿ ತೊದಲು ದನಿಯಲ್ಲೇನಗಳೇನೊ ಕಿವಿಗೆ ಬೀಳಲಿಲ್ಲವಾದರೂ ತಿಳಿಯಿತು, ಅವರು ಮನೆಯಲಿಲ್ಲ, ಎಂದು. ರಮೇಶನ ಮೈಮೇಲೆ ಷರಟು ಸಹ ಇಲ್ಲ. ಸಂಜೆಯ ಮೊಬ್ಬಿರದಲ್ಲಿ ಯಾರ ಮೊಗವೂ ಕಣ್ಣಿಗೆ ಚೆನ್ನಾಗಿ ಕಾಣಿಸದು. ಇಂಥಹ ಹೊತ್ತಿನಲ್ಲಿ ಭುಜಂಗನ ಹಿರಿಯ ಮಗಳು ಲಕ್ಷ್ಮಿ ಕಂಕುಳಲ್ಲಿ ಮಗುವನ್ನೆತ್ತಿಕೊಂಡು ಕೋಣೆ ಯಿಂದ ಹೊರಬಿದ್ದೊಡನೆಯೆ ಈ ಅಪರಿಚಿತನನ್ನು ಕಂಡು ತಾಯಿ ಯನ್ನು ವಿಚಾರಿಸಿದಳು. "ಯಾರೆ ಅಮ್ಮಾ?" ಅವಳ ತಾಯಿ ಪರಿಚ ಯವನ್ನು ಕೊಡಲಾರದೆ ಹೋದಳು, ರಮೇಶನೂ ಮಾತಾಡಲಿಲ್ಲ. ಲಕ್ಷ್ಮಿ ದಿಗಲುಬಿದ್ದು ಕಿರಿಚಿಕೊಂಡಳು. "ಅಪ್ಪಾ ಯಾರೋ ಒಬ್ಬರು ಒಳಂಗಳ ದಲ್ಲಿ ನಿಂತಿದ್ದಾರೆ, ಮಾತಾಡ!"

"ಯಾರೋ ಅದು?" ಎಂದು ದನಿಗೊಟ್ಟು ಅವಳ ತಂದೆ ಕೋಣೆಯ ಹೊರಗೆ ಬಂದೊಡನೆಯೆ ಒಂದೇ ಪೆಟ್ಟಿಗೆ ಕಟ್ಟಿಗೆಯ ತುಂಡಾಗಿ ಹೋದನು. ಸಂಜೆ ಬೆಳಗಿನಲ್ಲಿ ಆ ಎತ್ತರ, ನೆಟ್ಟನೆಯ ಮೈಯ ಗುರ್ತಿ ಸಲು ಅವನಿಗೆ ತಡವಾಗಲಿಲ್ಲ. ರಮೇಶ ಕಠೋರ ದನಿಯಲ್ಲಿ, "ಇಳಿದು ಬನ್ನಿ" ಎಂದು ತಕ್ಷಣವೆ ತಾನೆಯೆ ಮುಂದುಬಿದ್ದು ವಜ್ರಮುಷ್ಟಿ ಯಿಂದ ಭುಜಂಗನ ಕೈಯೊಂದನ್ನು ಬಿಮ್ಮನೆ ಹಿಡಿದು ಎಂದನು. "ಇಂತಹ ಕೆಲಸವೇಕೆ ಮಾಡಿದಿರಿ?"

ಭುಜಂಗ ಗೋಳಿತ್ತಿ, "ಪ್ರಾಣ ಹೋಯಿತು ಕಾಣೆಲೇ ಲಕ್ಷ್ಮೀ, ವೇಣೀರಾಯರಿಗೆ ಹೇಳಿಕಳುಹಿಸೆ." ಜೊತೆ ಜೊತೆಯಲ್ಲೆ ಮನೆ ಮಂದಿ ಮಕ್ಕಳೆಲ್ಲಾ ಸೇರಿ ಕಿರಿಚಿಗೊಳ್ಳಿಂದರು. ರೆಪ್ಪೆ ಹೊಯ್ಯುವಷ್ಟರಲ್ಲಿ ಸಂಜೆಯ ಸದ್ದಿಲ್ಲದ ಶಾಂತಿಯನ್ನು ಸೀಳಿ ಬಲು ಗಂಟಲುಗಳ ಗಗನಭೇದಿ ಮಹಾರವದಿಂದ ಅಲ್ಲಿನ ಕೇರಿಯೆಲ್ಲಾ ಗಾಬರಿಗೊಂಡಿತು. ರಮೇಶ ಅವ ನನ್ನು ಪ್ರಚಂಡವಾಗೊಂದು ಸಲ ಕುಲಕಿ ಎಂದನು. "ಮುಚ್ಚಿ ಬಾಯಿನ, ಹೇಳಿ ಹೀಗೇಕೆ ಮಾಡಿದಿರಿ?"

ಭುಜಂಗ ಉತ್ತರ ಹೇಳುವ ಸೂಚನೆಯನ್ನೆ ತೋರದೆ ಒಂದೇ ಸಮ ನಾಗಿ ಅದು ಚುಕ್ಕಾ ಗಂಟಲೊಡದುಕೊಳ್ಳುತ್ತಿದ್ದನು ಮತ್ತು ತನ್ನನ್ನು

ಬಿಡಿಸಿಕೊಳ್ಳುವುದಕ್ಕಾಗಿ ಎಳೆದಾಡಿ ಮೊದಲಿಸಿದನು. ನೋಡುತ್ತ ನೋಡುತ್ತ ಪಾರಿನ ಹೆಣ್ಣುಗಂಡುಗಳು ಅಂಗಳದ ತುಂಬಾ ತುಂಬಿ ಹೋದರು. ತಮಾಷೆ ನೋಡಲು ಇನ್ನೂ ಜನಗಳು ಗುಂಪುಗಟ್ಟಿ ಕೊಂಡು ಒಳಹೊಗಲಿಕ್ಕೆ ತಳ್ಳಿ ನುಗ್ಗಾಡುತ್ತಿದ್ದರು. ಕ್ರೋಧಾಂಧ ರಮೇಶನಾದರೊ, ಅತ್ತಕಡೆ ಲಕ್ಷ್ಯ ಇಡಲಿಲ್ಲ. ನೂರಾರು ಕೌತೂಹಲದ ನೋಟಗಳ ನಡುವೆ ನಿಂತು ಅವನು ಹುಚ್ಚನಂತೆ ಭುಜಂಗನನ್ನು ಹಿಡಿದು ಒಂದೆ ಭಾವದಿಂದ ಅಲ್ಲಾಡಿಸುತ್ತಿದ್ದನು. ರಮೇಶನ ವೈಬಲ ಬಣ್ಣಗಟ್ಟಿ ಬಣ್ಣಿತವಾಗಿ ಜನಗಳಲ್ಲಿ ಗಾದೆಯಂತೆ ರಟ್ಟಾಗಿತ್ತು. ಆದುದರಿಂದಲೆ ಅವನ ಕಂಗಳನ್ನು ನೋಡಿ ನಿರ್ಭಾಗ್ಯ ಭುಜಂಗನನ್ನು ಅವನ ಕೈಯಿಂದ ಬಿಡಿಸಲಿಕ್ಕೆ ಆ ಮನೆಯಲ್ಲಿ ತುಂಬಿಕೊಂಡಿದ್ದವರಲ್ಲೊಬ್ಬರಿಗೂ ಎದೆ ಯುಂಟಾಗಲಿಲ್ಲ. ಗೋವಿಂದ ಮನೆಯೊಳಗೆ ಬಂದೊಡನೆಯೆ ದೊಂಬಿ ಯಲ್ಲಿ ಕಣ್ಮರೆಯಾದನು. ವೇಣಿ ಇಣಿಕಿ ನೋಡಿ ಸರಿದುಕೊಳ್ಳುತ್ತಿದ್ದನು. ಭುಜಂಗ ಕಂಡು ಗೋಳಿಟ್ಟನು. "ದೊಡ್ಡರಾಯರೆ"–ದೊಡ್ಡರಾಯರು ಕಿವಿಗೆ ಹಾಕಿಕೊಳ್ಳಲಿಲ್ಲ. ಕಣ್ಮುಚ್ಚಿ ತೆರೆಯುವಷ್ಟರಲ್ಲಿ ಎಲ್ಲಿಯೊ ಮಾಯ ವಾದರು. ಥಟ್ಟನೆ ಜನತೆಯಲ್ಲಿ ದಾರಿಯಂತೆ ಬಿಡುವು ಬಿಟ್ಟಿತು; ಮರು ಕ್ಷಣದಲ್ಲಿಯೆ ರಮೆ ಬೇಗನೆ ಬಂದು ರಮೇಶನ ಕೈಯನ್ನು ಬಿಗಿಯಾಗಿ ಹಿಡಿದು ಎಂದಳು. "ಆಯಿತು, ಈಸಲ ಬಿಟ್ಟು ಬಿಡಿ." ರಮೇಶ ಅವಳ ಮೇಲೆ ಕೆಂಡವನ್ನುಗುಳುವಂತೆ ನೋಡಿ ಎಂದನು. "ಏಕೆ?"

ರಮೆ ಹಲ್ಲುಕಡಿಯುತ್ತಾ ಸಿಟ್ಟಿನಿಂದ ತೊದಲುದನಿಯಲ್ಲೆಂದಳು. "ಇಷ್ಟು ಜನಗಳ ಮುಂದೆ ನಿಮಗೆ ನಾಚಿಕೆಯಾಗುವದಿಲ್ಲವೆ, ನಾನಂತೂ ಸಿಗ್ಗಿನಿಂದ ಸಾಯುತ್ತಿದ್ದೇನೆ!"

ರಮೇಶ ಅಂಗಳದ ತುಂಬಾ ತುಂಬಿರುವ ಜನವನ್ನು ನೋಡಿ, ತಕ್ಷಣ ಭುಜಂಗನ ಕೈಯನ್ನು ಬಿಟ್ಟುಬಿಟ್ಟನು. ರಮೆ ಹಾಗೆ ಮೃದು ದನಿಯಲ್ಲೆಂದಳು. "ಮನೆಗೆ ಹೋಗಿ." ರಮೇಶ ಮರುಮಾತಿಲ್ಲದೆ ಹೊರಗೆ ಹೋದನು. ಥಟ್ಟನೆ ಒಂದೇನೊ ಇಂದ್ರಜಾಲವಾದಂತೆ ಆಗಿ ಹೋಯಿತು. ಆದರೆ, ಅವನು ಹೊರಟು ಹೋಗಲು, ರಮೆಯ ಮೇಲೆ ಅವಳ ನಿರತಿಶಯವಾದ ಬಾಧ್ಯತೆಯಿಂದ ಎಲ್ಲರೂ ಅದೇನೊ ಒಂದು

ಬಗೆಯಾಗಿ ಒಬ್ಬರ ಮೊಗವನ್ನೊಬ್ಬರು ನೋಡುತ್ತಿದ್ದರು. ಮತ್ತು ಇಂಥಹ ವಸ್ತು ಇಷ್ಟು ಆಡಂಬರದಲ್ಲಿ ಮೂಡಿ ಈ ಬಗೆಯಾಗಿ ಮುಗಿದುದರಿಂದ ಯಾರ ಮನಸ್ಸೂ ತಣಿಯಲಿಲ್ಲ.

ಜನ ಹೊರಟು ಹೋದರು. ಗೋವಿಂದ ಗಂಗಾಳಿ ಮೈಯ್ದೋರಿ ಬೆರಳೊಂದನ್ನೆತ್ತಿ ಮಿತಿಮೀರಿ ಗಂಭೀರ ಮುಖ ಮಾಡಿ ಎಂದನು. "ಮನೆಗೆಯೆ ಲಗ್ಗೆ ಹತ್ತಿ ಅರೆಸಾಯಬಡಿದು ಹೋದನಲ್ಲಾ ಇದಕ್ಕೇನು ಮಾಡುತ್ತಿ ಗೊತ್ತುಮಾಡು."

ಭುಜಂಗ ಮಣಕಾಲೆರಡನ್ನು ಎದೆಗೆ ಪೋಟಿಕೊಟ್ಟು ಮಂಕನಂತೆ ಕೂತು ಮೇಲುಸಿರಿಕ್ಕುತ್ತಿದ್ದನು; ನಿರುಪಾಯನಂತೆ ವೇಣಿಯ ಮೊಗವನ್ನು ನೋಡಿದನು. ರಮೆಯಿನ್ನೂ ಹೋಗಿರಲಿಲ್ಲ. ವೇಣಿಯ ಅಭಿಪ್ರಾಯವನ್ನು ಅನುಮಾನಿಸಿ ಬೇಗನೆಂದಳು. "ಈ ಪಕ್ಷದವರದಾದರೂ ಕಡಮೆಯೇನೂ ಇಲ್ಲ, ದೊಡ್ಡಣ್ಣಾ ಇದಲ್ಲದೆ ಆಗಿರುವುದು ತಾನೆ ಏನು, ಅದನ್ನು ಕಟ್ಟಿಕೊಂಡು ಹಾ, ಹೂ ಎಂತ ಕುಣಿಯೋಕೆ!"

ಭಯಂಕರ ಬೆರಗಾಗಿ ವೇಣಿಯೆಂದನು, "ಏನಂದೆ ರಮೆ?"

ಭುಜಂಗನ ಹಿರೆ ಮಗಳು ಕಂಬವನ್ನೊರಗಿ ನಿಂತಿದ್ದಳು. ಅವಳು ಸನುಕಿದ ನಾಗರದಂತೆ ಪಟ್ಟನೆ ಹೆಡೆ ಬಿಚ್ಚಿ, "ನೀನಂತೂ ಅವನ ಕಡೆಯೇನೆ ಮಾತಾಡೋಳು ರಮೆಯಕ್ಕ! ನಿಮ್ಮಪ್ಪನ್ನ ಯಾರಾದರೂ ಮನೆಯೊಳಗೆ ನುಗ್ಗಿ ಬಡಿದು ಬಾರಿಸಿದ್ದರೆ ಏನು ಮಾಡುತ್ತಿದ್ದಿ ಹೇಳು?"

ಅವಳ ಹುಂಕಾರದಿಂದ ರಮೆ ಮೊದಲು ಚಮಕಿದಳು. ಅವಳಲ್ಲಿ ತಂದೆಯನ್ನು ಬಿಡಿಸಿದ್ದಕ್ಕೆ ಕೃತಜ್ಞತೆಯಿಲ್ಲ— ಅದಿಲ್ಲದೆ ಹೋದರೆ ಬೇಡ, ಆದರೆ ಅವಳ ತೀವ್ರತೆಯಲ್ಲಿ ಹುಗಿದಿದ್ದ ಕಹಿ ಶ್ಲೇಷದ ಬಿರುಗಾಳಿಯೊಂದು ರಮೆಯ ಮೈಗೆ ತಗುಲಿತು. ಆದರಿಂದವಳು ಮರುಗಳಿಗೆಯಲ್ಲೇ ಬೆಂಕಿ ಬೆಂಕಿಯಂತಾದಳು. ಆದರೂ ತನ್ನನ್ನು ತಾನೆ ತಡೆದುಕೊಂಡು ಎಂದಳು. "ನಮ್ಮಪ್ಪನಿಗೂ ನಿಮ್ಮಪ್ಪನಿಗೂ ವ್ಯತ್ಯಾಸ ಬಹಳ ಕಾಣೆ ಲಕ್ಷ್ಮೀ, ನೀನು ಆ ಹೋಲಿಕೆ ತೆಗೆಯಬೇಡ. ನಾನು ಅವರ ಕಡೆ ಇವರ ಕಡೆಯಂತ ಯಾರ ಕಡೆಗೂ ಯಾವ ಮಾತೂ ಆಡಿಲ್ಲ; ಒಳಿತನ್ನೆ ಹೇಳಿದೆ."

ಲಕ್ಷ್ಮಿ ಹಳ್ಳಿಗಾಡಿನ ಹುಡುಗಿ, ಜಗಳದಲ್ಲಿ ಕಡಮೆಯವಳಲ್ಲ.

ಅವಳು ನೆವರಿಬಿಟ್ಟೆಂದಳು. “ಸಾರ್ಥಕವಾಯಿತು, ಅವನಿಗಾಗಿ ಹೋರು ವುದಕ್ಕೆ ನಿನಗೆ ನಾಚಿಕೆ ಸಹ ಬೇಡವೆ? ದೊಡ್ಡವರ ಮಗಳೆಂತ ದಿಗಿಲು ಬಿದ್ದು ಎಲ್ಲರೂ ಬಾಯಿಮುಚ್ಚಿಕೊಂಡಿದ್ದಾರೆ– ಇಲ್ಲದೆ ಹೋದರೆ ಯಾರು ತಾನೆ ಕೇಳಿಲ್ಲ? ನೀನಾಗೊ ಹೊತ್ತಿಗೆ ಹೀಗೆ ಮೊಗ ತೋರಿಸು ತ್ತೀಯೆ, ಇನ್ನಾರಾದರೂ ಆಗಿದ್ದರೆ ಕೊರಳಿಗೆ ನೇಣು ಬಿಕ್ಕೊಳ್ಳುತ್ತಿ ದ್ದರು!”

ವೇಣಿ ಲಕ್ಷ್ಮಿಯನ್ನು ಗದರಿ ಹೇಳಿದನು. “ಸಾಕುಮಾಡು ನೀನು ಲಕ್ಷ್ಮೀ! ಈಗ ಆ ಮಾತುಗಳೇಕೆ?”

ಲಕ್ಷ್ಮಿಯೆಂದಳು. “ಕೆಲಸವೇಕಿಲ್ಲ? ನಮ್ಮಪ್ಪನ್ನ ಇಷ್ಟು ಹಣ್ಣು ಗಾಯಿ ನೀರಗಾಯಿ ಮಾಡಿದನಲ್ಲಾ ಅವನ ಪಕ್ಷವನ್ನೇ ಹಿಡಿದು ಇವಳು ಹೋರಾಡಿದಳಲ್ಲ! ಅಪ್ಪ ಈಹೊತ್ತು ಸತ್ತೇ ಹೋಗಿದ್ದರೆ!—”

ರಮೆ ನಿಮಿಷಮಾತ್ರ ಸ್ತಂಭಿತಳಾಗಿದ್ದಳಷ್ಟೆ. ವೇಣಿಯ ಕೃತ್ರಿಮ ಕ್ರೋಧದ ದನಿ ಅವಳನ್ನು ತಿರುಗಿ ಕೆಣಕಿತು. ಅವಳು ಲಕ್ಷ್ಮಿಯ ಕಡೆಗೆ ನೋಡಿ ಎಂದಳು. “ಲಕ್ಷ್ಮಿ, ಅಂತಹ ಮನುಷ್ಯನ ಕೈಲಿ ಸಾವು ಸಿಗುವುದಕ್ಕೆ ಪುಣ್ಯವಿರಬೇಕು, ಇವತ್ತು ಸತ್ತು ಹೋಗಿದ್ದರೆ ನಿಮ್ಮಪ್ಪ ನಿಗೆ ಸ್ವರ್ಗ ಸಿಕ್ಕುತ್ತಿತ್ತು.”

ಲಕ್ಷ್ಮಿ ಬೆಂಕಿಯಾಗೆಂದಳು, “ಓಹೊ, ಅದಕ್ಕೇನೆ ನೀನು ನಿನ್ನ ಪ್ರಾಣ ಕೊಟ್ಟೇನೊ ಇರಬೇಕು ರಮಕ್ಕ.”

ರಮೆ ಇನ್ನು ಉತ್ತರವೀಯಲಿಲ್ಲ. ಅವಳ ಕಡೆಯಿಂದ ಮೊಗವನ್ನು ಹಿಂದಿರುಗಿಸಿ ವೇಣಿಯ ಕಡೆ ತಿರುಗಿ ವಿಚಾರಿಸಿದಳು. “ಆದರೆ ಅದೇನು ಮಾತು, ನೀನೆ ಹೇಳು ನೋಡೋಣ ದೊಡ್ಡಣ್ಣ?” ಎಂದವಳು ನಿಟ್ಟಿಸಿ ಒಂದೆ ನೋಟದಲ್ಲಿದ್ದಳು. ಅವಳ ದೃಷ್ಟಿ ಕಗ್ಗತ್ತಲನ್ನು ಕತ್ತರಿಸಿ ವೇಣಿಯ ಎದೆಯೊಳಗಿನವರೆಗೂ ನೋಡುವಂತೆ ತೋರಿತು. ವೇಣಿ ಕಳವಳಿಸಿ ಎಂದನು. “ನಾನು ಬಲ್ಲೆ ತಂಗಿ. ಜನವೆಷ್ಟೊ ಅಂದುಕೊಳ್ಳುತ್ತಾರೆ— ಅದಕ್ಕೆಲ್ಲಾ ಕಿವಿಗೊಟ್ಟರಾದೀತೆ.”

“ಜನವೇನಂತಾರೆ?”

ವೇಣಿ ಪೂರಾ ತಾತ್ಸಾರ ಭಾವದಿಂದೆಂದನು. “ಅಂದರೆ ತಾನೆ

ಏನು, ಜನಗಳ ಮಾತಿನಿಂದ ಮೈಮೇಲೆ ಬೊಬ್ಬೆಗರದೀತೆ. ಅಂದು ಕೊಳ್ಳಲೇಳು!''

ಅವನ ಈ ಕಪಟ ಕರುಣೆಯ ಸಂಚು ರಮೆ ಕಂಡುಹಿಡಿದಳು. ನಿನ್ನ ಮೈಗಂತೂ ಏತರಿಂದಲೂ ಬೊಬ್ಬೆಯಾಗದು. ಆದರೆ ಎಲ್ಲರ ಚರ್ಮವೂ ಗೇಂಡಾಮೃಗದ್ದಾಗಿರದು. ಆದರೆ ಜನಗಳ ಬಾಯಲ್ಲಿಯ ಮಾತು ಆಡಿಸುವರಾರು? ನೀನೋ?''

"ನಾನು!''

ರಮೆ ಜೀವ ಬಿಗಿಹಿಡಿದು ಸಮಾಧಾನವನ್ನು ತಂದುಕೊಂಡು ಒಳಗಣ ತಡೆಯಲಾಗದ ಕ್ರೋಧವನ್ನು ಮರೆಮಾಚಿಕೊಂಡಳು. ಇನ್ನು ಅವಳ ದನಿಯಲ್ಲಿ ಅದು ಹೊರಬೀಳಲಿಲ್ಲ. "ನಿನ್ನ ಬಿಟ್ಟರೆ ಇನ್ನಾರೂ ಇಲ್ಲ. ಭೂಮಿಯ ಮೇಲಿನ ಕೆಟ್ಟಕೆಲಸಗಳಲ್ಲೊಂದನ್ನೂ ನೀನು ಮಾಡದೆ ಉಳಿಸಿಲ್ಲ— ಕಳ್ಳತನ, ಮೋಸ, ತಂತ್ರ, ಮನೆಗೆ ಬೆಂಕಿ ಹಾಕುವುದು, ಎಲ್ಲಾ ಆಯಿತು, ಇದೊಂದೇಕುಳಿಯಬೇಕು?'' ಎಂದಳು.

ವೇಣಿ ಮಂಕಾಗಿ ಧಟಕ್ಕನೆ ಮಾತಾಡಲಿಕ್ಕೆ ಅವನ ಬಾಯಿ ಕಟ್ಟಿ ಹೋಯಿತು. ರಮೆಯೆಂದಳು. "ಹೆಂಗಸಿಗೆ ಇದಕ್ಕಿಂತ ದೊಡ್ಡ ಹೀನಾಯ ಇನ್ನಿಲ್ಲ, ಅದನ್ನು ತಿಳಿಯುವದು ನಿನಗೆ ಸಾಧ್ಯವಿಲ್ಲ. ಆದರೆ ಈ ಕಳಂಕವನ್ನು ಹಟ್ಟಿಸಿ ನಿನಗೇನಾಗಬೇಕು?''

ವೇಣಿ ದಿಗಲುಬಿದ್ದು ಎಂದನು. "ನನಗೇನಾಗಬೇಕು? ನೀನು ರಮೇಶನ ಮನೆಯಿಂದ ಮುಂಜಾನೆಯಲ್ಲಿ ಹೊರಬಿದ್ದುದನ್ನು ಜನ ನೋಡಿ.... ನಾನೇನು ಮಾಡಲಿ?''

ರಮೆ ಆ ಮಾತಿಗೆ ಕಿವಿಗೊಡದೆ ಹೇಳಿದಳು. "ಇಷ್ಟು ಜನಗಳ ಮುಂದೆ ಇನ್ನು ನಾನು ಹೇಳಲಾರೆ. ಆದರೆ, ದೊಡ್ಡಣ್ಣಾ, ನಿನ್ನ ಮನಸ್ಸಿನ ಭಾವವನ್ನು ನಾನು ಹಿಡಿಯಲಾರೆನೆಂದು ತಿಳಿಯಬೇಡ. ಇದನ್ನಾದರೆ ಖಂಡಿತ ತಿಳಿ, ನಾನು ಸಾಯುವುದಕ್ಕೆ ಮುಂಚೆ ನೀನು ಬದುಕಲು ಬಿಟ್ಟುಹೋಗೆ.''

ಆಚಾರ್ಯರ ಹೆಂಡತಿ ಇಷ್ಟು ಹೊತ್ತು ಸದ್ದಿಲ್ಲದೆ ಹತ್ತಿರದಲ್ಲೆಲ್ಲೊ ನಿಂತಿದ್ದಳು. ಸರಿದು ಮುಂದೆ ಬಂದು ರಮೆಯ ತೋಳೊಂದನ್ನು

ಹಿಡಿದು ಮೃದುದನಿಯಲ್ಲೆಂದಳು. "ಹುಚ್ಚಳಾಗಿದ್ದೀಯಾ ಅಮ್ಮಾ, ಇಲ್ಲಿ ನಿನ್ನ ತಿಳಿಯದವರಾರು?" ತನ್ನ ಮಗಳನ್ನು ಕುರಿತು ಎಂದಳು. "ಎಲೆ ಲಕ್ಷ್ಮಿ, ಹೆಂಗಸಾಗಿ ಹೆಂಗಸಿನ ಹೆಸರ ಮೇಲೆಯೇ ಇಂಥಹ ಅಪವಾದ ವನ್ನು ಹಟ್ಟಿಸಬಾರದು; ಧರ್ಮ ಸಹಿಸದು. ಇವತ್ತು ಈಕೆ ನಿಮಗಳಿಗೆ ಮಾಡಿರುವ ಉಪಕಾರ ನೀವು ಮನುಷ್ಯನ ಮಕ್ಕಳಾಗಿದ್ದರೆ ತಿಳಿಯುತ್ತಿ ದ್ದಿರಿ," ಎಂದು ಎಳೆದು ರಮೆಯನ್ನು ಒಳಕ್ಕೆ ಕರೆದೊಯ್ದಳು. ಆಚಾ ರ್ಯರ ಗರತಿಯ ಈ ಕಠೋರಶ್ಲೇಷ ಮತ್ತು ನಿರಪೇಕ್ಷ್ಯ ಸತ್ಯವಾದಿತೆ ಯಿಂದ ಅಲ್ಲಿದ್ದವರೆಲ್ಲಾ ಕುಂಠಿತರಾಗಿ ಸರಿದುಕೊಂಡರು.

ಈ ಘಟನೆಯ ಕಾರ್ಯಕಾರಣಗಳೆಷ್ಟೆ ದೊಡ್ಡವಾಗಲಿ ಮತ್ತು ಏನೆ ಯಾಗಲಿ ತನ್ನ ಪೊಲಸು ಆ ಸಂಯಮದಿಂದ ರಮೇಶನ ಶಿಕ್ಷಿತ ಭದ್ರ ಅಂತಃಕರಣವು ಪೂರ್ತಿ ಎರಡು ದಿನಗಳತನಕ ಸಂಕೋಚವನ್ನು ಪಡೆದು ಮನೆಯ ಹೊರಗೆ ಸಹ ಅವನು ತಲೆ ಹಾಕಲಾರದೆ ಹೋದನು. ಹೀಗಿ ದ್ದರೂ ಇಷ್ಟು ಜನಗಳೊಳಗಡೆಯಿಂದ ರಮೆ ಸ್ವೇಚ್ಛೆಯಿಂದ ಅವನ ನಾಚಿಕೆಯಂಶವನ್ನು ವಹಿಸಲು ಬಂದಿದ್ದಳು. ಈ ಚಿಂತೆಯು ಅವನ ಸಮಸ್ತ ನಿಗ್ಗಿನ ಕಾನುರ್ಗಿಲ ಮೃಯಿಂದ ದಿಗಂತವನ್ನು ತುಂಬಾ ತುಂಬಿರಲು ಬಲು ಸಣ್ಣ ಮಿಂಚಿನ ಹೊಳಪಿನಂತೆ ಕ್ಷಣಕ್ಷಣಕ್ಕೂ ಸೌಂದ ರ್ಯದ, ಮಾಧುರ್ಯದ ದೀಪ್ತಿರೇಖೆಯೊಂದನ್ನು ಅದರಲ್ಲಿ ಅಂಕಿಸುತ್ತಿ ದ್ದಿತು. ಆದುದರಿಂದಲೆ ಅವನ ಈ ಗ್ಲಾನಿಯಲ್ಲಿಯೂ ಪರಿತೃಪ್ತಿಯ ಪೀಡನೆ ಬೆರೆತಿದ್ದಿತು. ಈ ದುಃಖ ಮತ್ತು ಸುಖ ಬೆರೆತ ವೇದನೆಯನ್ನು ಹೊತ್ತು ಇನ್ನೂ ಕೆಲದಿನಗಳು ತನ್ನ ನಿರ್ಜನಗೃಹದಲ್ಲಿ ಅಜ್ಞಾತವಾಸದ ಸಂಕಲ್ಪಮಾಡಿಕೊಳ್ಳುತ್ತಿರಲು, ಅದೆ ಸಮಯದಲ್ಲಿ ಅವನ ಕಾರಣದಿಂಧಲೆ ಹೊರಗೆ ಇನ್ನೊಬ್ಬಳ ತಲೆಯ ಮೇಲೆ ನಾಚಿಕೆಕೇಡಿನ ಮತ್ತು ಅಪಮಾನದ ಪರ್ವತವು ಒಡೆದು ತಡಪ್ರಗೂಪದೆ ಕಲ್ಮಳೆ ಗೆರೆಯುತ್ತಿದ್ದಿತು. ಇದು ಅವನಿಗೆ ಕನಸಿನಲ್ಲಿ ಸಹ ತಿಳಿಯದು.

ಆದರೆ ಮುಚ್ಚುಮರೆಯುಲ್ಲಿರುಪಿಕೆಯ ಅನುಕೂಲ ಅವನಿಗೆ ಘಟಿಸ ಲಿಲ್ಲ. ಇವತ್ತೆ ಸಂಜೆಯಾದ ಮೇಲೆ ಪೀರಪುರದ ಮುಸಲಮಾನ ರೈತರು ತಮ್ಮ ಪಂಚಾಯತರ ಬೈಠಕ್ಕಿನಲ್ಲಿ ಇರಬೇಕೆಂದು ಅವನನ್ನು ಕರೆಯಲು

ಬಂದರು. ಈ ಬೈಠಕ್ಕಿನ ವ್ಯವಸ್ಥೆಯನ್ನು ರಮೇಶ ತಾನೆ ಕೆಲದಿನಗಳ ಮುಂಚೆ ಮಾಡಿಬಂದಿದ್ದನು. ಅದಕ್ಕನುಸಾರವಾಗಿ ಅವರು ಇವತ್ತು ಒಟ್ಟುಗೂಡಿ ಚಿಕ್ಕರಾಯರಿಗಾಗಿಯೆ ಕಾದು ಕೂತಿದ್ದಾರೆಂದು ವರ್ತಮಾನವನ್ನು ತಿಳುಹಿಸಿರಲು ಅಲ್ಲಿಗೆ ಹೋಗಬೇಕೆಂದು ಏಳಲೆಬೇಕಾಯಿತು.

ರಮೇಶ ಸಂಧಾನ ಮಾಡಿ ತಿಳಿದಿದ್ದನು, ಪ್ರತಿಯೊಂದು ಹಳ್ಳಿಯಲ್ಲಿಯೂ ಒಕ್ಕಲಿಗರಲ್ಲಿ ಒಡವರ ಸಂಖ್ಯೆಯೆ ಹೆಚ್ಚು. ಅನೇಕರಿಗೆ ಒಂದು ತಾಕು ಜಮೀನು ಸಹ ಇಲ್ಲ; ಹೆರರ ಜಮೀನಿಗೆ ಕಂದಾಯಕೊಟ್ಟು ವಾಸಮಾಡುತ್ತಾರೆ. ಹೆರರ ಜಮೀನಿನಲ್ಲಿ ಆಳಾಗಿ ಕೂಲಿ ಮಾಡಿ ಹೊಟ್ಟೆ ಹೊರೆಯುತ್ತಾರೆ. ಎರಡು ದಿನಗಳು ಕೆಲಸ ಸಿಗದೆ ಹೋದರೆ, ಅಥವಾ ಜಡ್ಡು-ಜಾಪತ್ರಿಯಿಂದ ಕೆಲಸ ಮಾಡಲಾರದೆ ಹೋದರೆ ಮನೆಮಂದಿ ಮಕ್ಕಳು ಸಹ ಉಪವಾಸ ಮಾಡುತ್ತಾರೆ. ಹುಡುಕಿ ಇನ್ನೂ ತಿಳಿದನು, ಇವರಲ್ಲಿ ಬಹುಜನಗಳಿಗೆ ಆಸ್ತಿಗಳೇನೊ ಇದ್ದವು; ಅವೂ ಕೂಡ ಸಾಲಕ್ಕೆ ತುತ್ತಾಗಿದ್ದವು. ಸಾವುಕಾರರು ಜಮೀನಿನ ಅಡವಿನ ಮೇಲೆ ಸಾಲ ಕೊಡುತ್ತಾರೆ; ಆದರೆ ಪ್ರಾಯವಾಗಿ ಬಡ್ಡಿಯನ್ನು ತೆಗದುಕೊಳ್ಳರು, ಫಸಲಿನ ಅಂಶಕ್ಕೆ ತಗಾದೆ ಹಚ್ಚುತ್ತಾರೆ. ಬಡ್ಡಿಯನ್ನು ಲೆಕ್ಕವಿಟ್ಟರೆ ಈ ಅಂಶದ ಬೆಲೆ ಸಮಯ ಸಮಯಗಳಲ್ಲಿ ಅಸಲಿನ ಅನತಿ ದೂರಕ್ಕೆ ಬರುವುದು. ಸುತರಾಂ ಒಂದು ಸಲ ಆರಂಬಗಾರನು ಸಾಮಾಜಿಕ ಕ್ರಿಯೆಕರ್ಮಗಳಿಗೆಂತಾಗಲಿ, ಅಥವಾ ಅನಾವೃಷ್ಟಿಯ ಕಾರಣದಿಂದಾಗಲಿ ಸಾಲಕ್ಕೆ ಬಿದ್ದರೆ ಇನ್ನವನು ಚೇತರಿಸಿಕೊಂಡೇಳಲಾರ. ಪ್ರತಿವರುಷವೂ ಅವನು ಸಾಹುಕಾರನ ಬಾಗಿಲಲ್ಲಿ ನಿಂತು ಕೈಚಾಚಬೇಕು! ಈ ವಿಷಯದಲ್ಲಿ ಹಿಂದೂ ಮುಸಲಮಾನರಿಬ್ಬರಿಗೂ ಒಂದೇ ಅವಸ್ಥೆ. ಕಾರಣ ಸಾಹುಕಾರರು ಪ್ರಾಯವಾಗಿ ಹಿಂದೂಗಳು. ರಮೇಶ ಪಟ್ಟಣದಲ್ಲಿದ್ದಾಗ್ಗೆ ಈ ಸಂಬಂಧವಾಗಿ ಪುಸ್ತಕವನ್ನು ಓದಿ ತಿಳಿದಿದ್ದನು; ಹಳ್ಳಿಗೆ ಬಂದು ಅದನ್ನು ಕಣ್ಣಾರೆ ನೋಡಿ ಮೊದಲು ಒಂದೇ ಪೆಟ್ಟಿಗೆ ಗಾಬರಿಬಿದ್ದು ಹೋಗಿದ್ದನು. ಅವನದು ಬಹಳ ಹಣ ಬ್ಯಾಂಕಿನಲ್ಲಿ ಬಿದ್ದಿತ್ತು. ಈ ಹಣ ಮತ್ತು ಇನ್ನೂ ಅಷ್ಟಿಷ್ಟು ಕೂಡಿಸಿ, ಈ ದುರ್ಭಾಗ್ಯರನ್ನೆಲ್ಲಾ ಸಾವುಕಾರರ ಕುತ್ತಿನಿಂದ ಸಲಹುವುದಕ್ಕಾಗಿ ಅವನು ಸೊಂಟಬಿಗಿದಿದ್ದನು.

ಆದರೆ ಒಂದೆರಡು ಕೆಲಸಗಳನ್ನು ಮಾಡುವಷ್ಟರಲ್ಲೆ ಪೆಟ್ಟುತಿಂದು ನೋಡಿದನು, ಈ ಎಲ್ಲಾ ಬಡವರು ಎಷ್ಟು ಅಸಹಾಯರು ಮತ್ತು ಕೃಪೆಗೆ ಪಾತ್ರರೆಂದು ಎಣಿಸಿದ್ದನೊ ಅಷ್ಟು ಮಾತ್ರವಿರಲಿಲ್ಲ. ಇವರು ದರಿದ್ರರು, ನಿರುಪಾಯರು ಮತ್ತು ಅಲ್ಪಬುದ್ಧಿ ಜೀವಿಗಳೇನೊ ಹೌದು, ಆದರೆ ತುಂಟು ಬುದ್ಧಿಯಲ್ಲಿ ಇವರೇನೂ ಕಡಮೆಯಲ್ಲ. ಸಾಲವನಾದಿ ಕೊಡದೆ ತಪ್ಪಿಸಿಕೊಳ್ಳುವ ನಡತೆ ಇವರಲ್ಲಿ ಬಹುಪ್ರಬಲ. ಅಧಿಕಾಂಶ ಕ್ಷೇತ್ರಗಳಲ್ಲಿ ಸರಳರೂ ಅಲ್ಲ ಸಾಧುಗಳೂ ಅಲ್ಲ. ಸುಳ್ಳು ಹೇಳುವುದಕ್ಕೆ ಇವರು ಮೊಗ ತಗ್ಗಿಸರು, ಮತ್ತು ಕಳ್ಳತನ ತಪ್ಪಿಸಿಕೊಳ್ಳುವುದನ್ನು ಒಲ್ಲರು. ನೆರೆಹೊರೆಯರ ಹೆಂಡರಮಕ್ಕಳ ಸಂಬಂಧವಾಗಿ ಅಂದ ಚಂದದ ಚರ್ಚೆಯು ಸೊಕ್ಕು ಇವರಲ್ಲಿ ಮಂದವಾಗೇನೂ ನಡೆಯದು. ಗಂಡಸರಿಗೆ ಮದುವೆಯಾಗುವುದು ಬಹಳ ಕಷ್ಟದ ವಿಷಯ, ಆದರೂ ನಾನಾ ವಯಸ್ಸಿನ ವಿಧವೆಯರಿಂದ ಪ್ರತಿ ಗೃಹಸ್ಥನೂ ಭಾರಾಕ್ರಾಂತನಾಗಿದ್ದಾನೆ. ಆದುದರಿಂದ ನೈತಿಕ ಸ್ವಸ್ಥತೆಯೂ ದುಸ್ತರವಾಗಿದೆ. ಸಮಾಜವಿವರಿಗೂ ಇದೆ, ಅದರ ಶಾಸನ ಸಹ ಕಮ್ಮಿಯೇನೂ ಇಲ್ಲ; ಆದರೆ ಪೋಲೀಸರೊಡನೆ ಕಳ್ಳರ ಸಂಬಂಧವೆಂತೊ ಸಮಾಜದೊಡನೆ ಇವರಿಗೆ ಆ ಬಗೆಯ ಸಂಬಂಧವನ್ನೇ ಹಾಕಿದ್ದಾರೆ. ಇವರು ಪೀಡಿತರು, ದುರ್ಬಲರು, ದಿಕ್ಕೆಟ್ಟವರು, ಇವರ ಸ್ಥಿತಿಗೆ ಇವರ ಮೇಲೆ ಸಿಟ್ಟು ಮಾಡಲಾಗುವದಿಲ್ಲ. ಮೋಸಕ್ಕೆ ಸಿಲುಕಿ ಕೆಟ್ಟು ದಾರಿಯನ್ನು ಹಿಡಿದ ಮಗನ ವಿಷಯದಲ್ಲಿ ತಂದೆಗಿರುವ ಮನೋಭಾವದಂತೆ ರಮೇಶನ ಅಂತರಂಗ ಶುದ್ಧವಿತ್ತೆಂದು ಇವತ್ತಿನ ಸಂಜೆಯ ಮೇಲೆ ಪೀರಪುರದ ಹೊಸ ಸ್ಕೂಲ ಮನೆಯಲ್ಲಿ ಪಂಚಾಯತರನ್ನು ಕಲೆ ಹಾಕಿದ್ದರು. ಕೊಂಚ ಹೊತ್ತಾಯಿತು; ಸಂಜೆ ಮುಂದಿನ ಅತಿ ಮಬ್ಬಾರ ಕಳೆದು ದಶಮಿಯ ಬೆಳದಿಂಗಳು ಕಿಟಕಿಯ ಹೊರಗೆ ತುಂಬಿತುಳುಕುತ್ತಲಿದೆ. ಅತ್ತ ಕಡೆಗೆ ನೋಡಿ ರಮೇಶ ಹೊರಡಲು ನೇರವಾಗಿ ಹೋಗಬೇಕೆಂತ ತಡವರಿಸುತ್ತಿದ್ದಾನೆ. ಇಂತಹ ಸಮಯದಲ್ಲಿ ರಮೆ ಬಂದು ಅವನ ಕೋಣೆಯ ಬಾಗಿಲಲ್ಲಿ ನಿಂತಳು. ಆ ತಾವಿನಲ್ಲಿ ಬೆಳಕಿರಲಿಲ್ಲ. ರಮೇಶ ಮನೆಯ ಶೂದ್ರಿತಿಯೆಂದಂದುಕೊಂಡು ಎಂದನು. "ಏನ್ಬೇಕೆ?"

"ನೀವೇನು ಹೊರಗೆ ಹೊರಟಿದ್ದೀರಾ? '

ರಮೇಶ ಚಮಕಿ ಬಿದ್ದನು, “ಇದಾರು, ರಮೆಯೆ? ಈ ಹೊತ್ತಿನಲ್ಲಿಯೆ!”

ಸಂಜೆಯನ್ನೇಕೆ ಮರೆ ಬೀಳಬೇಕಾಗಿತ್ತೊ ಹೇಳುವುದು ಅನಾವಶ್ಯಕ, ಆದರೆ ಅವಳೇಕೆ ಬಂದಳೊ ಅದೂ ಬಲು ಕತೆ— ಆದರೂ ಏನ ಮಾಡಿ ಮೊದಲಿಡುವುದೆಂತ ಭಾವಿಸಿ ಬಗೆ ಹರಿಯದೆ ರಮೆ ಗಡುಸಾಗಿ ನಿಂತಿದ್ದಳು. ರಮೇಶ ಬಾಯಿಲ್ಲದವನಾದನು. ತುಸಹೊತ್ತು ಸುಮ್ಮನಿದ್ದು, ರಮೆ ಪ್ರಶ್ನೆಮಾಡಿದಳು. “ತಮ್ಮ ದೇಹಸ್ಥಿತಿ ಹೇಗಿದೆ?”

“ಚನ್ನಾಗಿಲ್ಲ. ತಿರಗೂ ದಿನವಹಿ ರಾತ್ರಿ ಜ್ವರಕ್ಕಿಟ್ಟಿದೆ.”

“ಹಾಗಿದ್ದರೆ ಕೆಲದಿನ ಹೊರಗೆ ಅಲದಾಡಿ ಬಂದರೆ ನೆಟ್ಟಗಾದೀತು.”

ರಮೇಶ ನಗುತ್ತ ಹೇಳಿದನು. “ನೆಟ್ಟಗಾಗುತ್ತೆ, ಅದನ್ನು ಬಲ್ಲೆ, ಆದರೆ ಹೋಗುವ ಬಗೆ ಹೇಗೆ?”

ಅವನ ನಗೆಯನ್ನು ನೋಡಿ ರಮೆ ಬೇಸರಗೊಂಡಳು, “ನೀವನ್ನುವರಿ ನಿಮಗೆ ಕೆಲಸ ಬಹಳವೆಂತ, ಆದರೆ ಸ್ವಂತ ದೇಹಕ್ಕಿಂತ ಹೆಚ್ಚಿನ ಕೆಲಸವಾವುದು?”

ರಮೇಶ ಮೊದಲಿನಂತೆಯೆ ನಕ್ಕು ಉತ್ತರವಿತ್ತನು. “ಸ್ವಂತ ದೇಹ ಸಣ್ಣ ಕೆಲಸವೆಂತ ನಾನು ಹೇಳೆ, ಆದರೆ ದೇಹಕ್ಕಿಂತಲೂ ಎಷ್ಟೊ ದೊಡ್ಡದಾದ ಕೆಲಸಗಳು ಮನುಷ್ಯನಿಗುಂಟು. ಅದು ನಿನಗೆ ತಿಳಿಯುವ ಹಾಗಿಲ್ಲ.

ರಮೆ ತಲೆಯನ್ನಲ್ಲಾಡಿಸಿ ಎಂದಳು. “ನನಗೆ ತಿಳಿಯಬೇಕಾದುದೂ ಇಲ್ಲ. ಆದರೆ ನಿಮಗೆ ಇನ್ನೆಲ್ಲಾದರೂ ಹೋಗಲೇಬೇಕಾಗುತ್ತೆ. ಗುಮಾಸ್ತೆಗೆ ಹೇಳಿ ಹೋಗೋಣಾಗಲಿ, ನಾನು ಅವನ ಕೆಲಸಕಾರ್ಯಗಳನ್ನು ನೋಡಿಕೊಳ್ಳುತ್ತೇನೆ.”

ರಮೇಶ ವಿಸ್ಮಿತನಾಗೆಂದನು. “ನೀನು ನನ್ನ ಕೆಲಸಕಾರ್ಯಗಳನ್ನು ನೋಡಿಕೊಳ್ಳುತ್ತೀಯಾ? ಆದರೆ.”

“ಆದರೇನು?”

“ಆದರೇನು ಬಲ್ಲೆಯಾ, ನಾನು ನಿನ್ನನ್ನು ನಂಬೇನೆಯೆ?”

ರಮೆ ಅಸಂಕೋಚವಾಗಿ ತಕ್ಷಣವೆಂದಳು. "ಇತರರಿಂದ ಆಗದು, ಆದರೆ ನಿಮ್ಮಿಂದಾಗುತ್ತೆ."

ಅವಳ ಧೃಡ ಕಂಠದ ಅಚಿಂತನೀಯವಾದ ಹೇಳಿಕೆಯಿಂದ ರಮೇಶ ಬೆರಗಾಗಿ ಬೆಂಡಾದನು. ಆದರೆ ಕ್ಷಣ ಹೊತ್ತು ಸುಮ್ಮನಿದ್ದು ಎಂದನು. "ಒಳ್ಳೇದು ಯೋಚಿಸಿ ನೋಡುತ್ತೇನೆ."

"ಇವತ್ತೆ ತಾವು ಇನ್ನೆಲ್ಲಾದರೂ ಹೋಗಲೇಬೇಕು, ಇಲ್ಲವಾದರೆ— "

ಹೇಳುತ್ತಿರುವಾಗಲೆ ರಮೇಶ ಗಾಬರಿಬಿದ್ದಿದಾನೆಂದು ಅವಳು ಸ್ಪಷ್ಟವಾಗಿ ಕಂಡಳು: ರಮೇಶ ನೆಟ್ಟಗೆ ಊಹಿಸಿದನು. ಆದರೆ ಆತ್ಮಸಂವರಣ ಮಾಡಿಕೊಂಡು ಎಂದನು. "ಒಳ್ಳೇದು, ಹಾಗೆ ಹೋದುದುರಿಂದ ನಿನಗೇನು ಲಾಭ ? ನನ್ನನ್ನು ವಿಪತ್ತಿಗೀಡುಮಾಡುವುದರಲ್ಲಿ ನೀನೇನೂ ಕಡಮೆಯಾಗಿ ಪ್ರಯಾಸ ಪಟ್ಟಿಲ್ಲ. ಉತ್ತಮ ಪಕ್ಷ, ಬಿಡಿಸಿಯಾದರೂ ಹೇಳು, ನಾನು ಹೋದರೆ ನಿನಗೇನಾದರೂ ಅನುಕೂಲವಿದೆಯೆ ? ನಾನು ಹೋಗಲು ಒಪ್ಪಿದರೂ ಒಪ್ಪಬಹುದು," ಎಂದು ಉತ್ತರವನ್ನಪೇಕ್ಷಿಸಿ ರಮೆಯ ಅಸ್ಪಷ್ಟವಾದ ಮೊಗವನ್ನೆ ನೋಡುತ್ತಿದ್ದನು. ಆದರೆ ಅದು ದೊರೆಯಲಿಲ್ಲ. ಅವಳೆದೆಯನ್ನು ಜಡಿದುಕೊಂಡೆದ್ದ ಸಿಟ್ಟು ಎಷ್ಟು ದೊಡ್ಡದೆಂಬುದು ಸಹ ಅವನಿಗೆ ತಿಳಿಯಬರಲಿಲ್ಲ. ರಮೇಶನ ನಿಷ್ಠುರವಾದ ವಿದ್ರೂಪದ ಪೆಟ್ಟಿನಿಂದ ಅವಳ ಮೊಗವೆಂತು ಒಣ್ಣಗೆಟ್ಟಿತೆಂಬುದೂ ಆ ಕತ್ತಲಲ್ಲಿ ಕಾಣಿಸಲಿಲ್ಲ. ಕೊಂಚ ಹೊತ್ತು ಸುಮ್ಮನಿದ್ದು ತನ್ನನ್ನು ತಾನು ತಡೆದುಕೊಂಡಳು. ಆಮೇಲೆಂದಳು.

"ಒಳ್ಳೇದು ಬಿಡಿಸಿಯೆ ಹೇಳುತ್ತೇನೆ. ತಾವು ಹೋದರೆ ನನಗೆ ಲಾಭವೇನೂ ಇಲ್ಲ, ಹೋಗದೆ ಹೋದರೆ ಬಹಳ ಹಾಳು. ನಾನು ಸಾಕ್ಷಿ ಹೇಳಬೇಕಾಗುತ್ತೆ."

ರಮೇಶ ಒಣಕಲಾಗಿ ಎಂದನು. "ಇದೇಯೆ ? ಆದರೆ ಸಾಕ್ಷಿ ಕೊಡದೆ ಹೋದರೆ ?"

ರಮೆ ಇನ್ನು ಕೊಂಚ ನಿಂತು ಹೇಳಿದಳು. "ಕೊಡದೆ ಹೋದರೆ ಎರಡು ದಿನಗಳನಂತರ ನಮ್ಮ ಜಯನ ಉಪನಯನದಲ್ಲಿ ಯಾರೂ ಊಟ

ಮಾಡರು— ನನ್ನ ಸೋಮವಾರದ ವ್ರತಕ್ಕೆ " ಈ ಬಗೆಯ ದುರ್ಘಟನೆ ಯಾಗಬಹುದೆಂಬ ಯೋಚನೆ ಮಾತ್ರಕ್ಕೇನೆ ಅವಳು ಗಡಗಡನೆ ನಡುಗಿ ದಳು. ರಮೇಶ ಇನ್ನು ಹೆಚ್ಚು ಕೇಳದೆ ಇದ್ದರೆ ಆಗಿತ್ತು, ಆದರೆ ಸುಮ್ಮ ನಿರದೆ ಹೋದ, ಕೇಳಿದನು.

" ಆದರ ಮೇಲೆ ? "

ರಮೆ ಕಳವಳಿಸಿ ಎಂದಳು. " ಆದಾದ ಮೇಲೇನು ! ಇಲ್ಲ, ನೀನು ಹೋಗು ಎಂದರೆ ನಾನು ಬೇಡಿಕೊಳ್ಳುತ್ತೇನೆ, ರಮೇಶಣ್ಣ, ನನಗೆ ಎಲ್ಲಾ ಕಡೆಯಿಂದಲೂ ನಷ್ಟವನ್ನು ತರಬೇಡ; ನೀ ಹೋಗು, ಹೋಗು ಈ ದೇಶದಿಂದ. "

ಕೊಂಚ ಹೊತ್ತಿನತನಕ ಇಬ್ಬರೂ ಸುಮ್ಮನಿದ್ದರು. ಇದಕ್ಕೆ ಮುಂಚೆ ಎಲ್ಲಾಗಲಿ, ಎಂಥ ಸ್ಥಿತಿಯಲ್ಲಾಗಲಿ ರಮೆಯನ್ನು ಕಂಡಕ್ಷಣವೆ ರಮೇಶನ ಎದೆಯ ರಕ್ತ ಚಲಿಪಿಲಿಗುಟ್ಟುತಿತ್ತು. ನೂರಾರು ಯುಕ್ತಿ ಗಳನ್ನು ಮನಸಲ್ಲಿ ತಂದುಕೊಂಡು, ತನ್ನಂತರವನ್ನು ಸಾಹಿರಾರು ಕೆಟ್ಟ ಬೈಗಳಿಂದ ಬೈದುಕೊಂಡರೂ ಅದನ್ನು ಹಿಡಿತದಲ್ಲಿಡಲು ಆಗುತ್ತಿರಲಿಲ್ಲ. ಹೃದಯದ ಈ ಸದ್ದಿಲ್ಲದ ವಿರೋಧದಿಂದ ಅವನಿಗೆ ದುಃಖ ಬರುತ್ತಿತ್ತು; ನಾಚಿಕೆಯಾಗುತ್ತಿತ್ತು; ರೇಗಿ ಹೋಗುತ್ತಿದ್ದನು; ಆದರೂ ಏನು ಮಾಡಿ ದರೂ ಅದನ್ನು ವಶದಲ್ಲಿ ತರಲಾರದೆ ಇರುತ್ತಿದ್ದನು. ಹೆಚ್ಚಾಗಿ ಇಂದು ಈಗತಾನೆ ತನ್ನ ಕೋಣೆಯಲ್ಲಿ ಅದೆ ರಮೆ ಆಕಸ್ಮಾತ್ ಒಬ್ಬಳೆ ಬಂದು ದನ್ನು ನೋಡಿ ನಿನ್ನೆಯ ಮಾತನ್ನು ನೆನೆದುಕೊಂಡೊಡನೆಯೆ ಅವನ ಹೃದಯದ ಚಾಂಚಲ್ಯವು ಒಂದೇ ಏಟಿಗೆ ಕಟ್ಟುಮೀರಿದ್ದಿತು. ರಮೆಯ ಕೊನೆಯ ಮಾತಿನಿಂದ ಇಷ್ಟು ದಿನಗಳಾದ ಮೇಲೆ ಈ ಹೊತ್ತು ಅದೆ ಹೃದಯ ಸ್ಥಿರಗೊಂಡಿತು. ರಮೆಯ ಭಯವ್ಯಾಕುಲದ ನಿರ್ಬಂಧತೆಯಿಂದ ಅಖಂಡಸ್ವಾರ್ಥಪರತೆಯ ಭಾವ ಹೊರಬಿದ್ದಿತು. ಅದನ್ನು ಸ್ಪಷ್ಟವಾಗಿ ಕಂಡು ಅವನ ಅಂಥಹ ಹೃದಯದ ಕಣ್ಮುಸರೆ ಸಹ ಇಂದು ಹರಿಯಿತು. ರಮೇಶ ಆಳವಾದುದೊಂದು ನಿಟ್ಟುಸಿರಿಟ್ಟು ಎಂದನು. " ಒಳ್ಳೆಯದು, ಹಾಗೆಯೆ ಆಗುತ್ತೆ, ಆದರೆ ಇವತ್ತು ನನಗೆ ಹೊತ್ತಿಲ್ಲ. ಕಾರಣವೇನಂದರೆ ನಾನು ಓಡಿ ಹೋಗಬೇಕಾದ ಹೇತು ನಿನ್ನ ಮನಸ್ಸಿಗೆ ಎಷ್ಟೇ

ದೊಡ್ಡದಾಗಿ ಕಂಡರೂ, ಈ ರಾತ್ರಿಯು ನನಗೆ ಅದಕ್ಕಿಂತ ದೊಡ್ಡದು. ನಿನ್ನ ದಾಸಿಯನ್ನು ಕರೆ, ನಾನು ಈಗಲೆ ಹೊರಗೆ ಹೋಗಬೇಕಾಗಿದೆ!''

ರಮೆ ಮೆಲ್ಲನೆ ಎಂದಳು. ''ಇವತ್ತು ಹೋಗುವುದಕ್ಕೆ ಏನು ಮಾಡಿದರೂ ಸಾಗದೊ?''

''ಇಲ್ಲ, ನಿನ್ನ ದಾಸಿ ಎಲ್ಲಿ ಹೋದಳು?''

''ಯಾರೂ ನನ್ನ ಜೊತೆಯಲ್ಲಿ ಬರಲಿಲ್ಲ!''

ರಮೇಶ ಬೆಪ್ಪಾಗಿ ಎಂದನು. ''ಅದೆಂತಹ ಮಾತು? ಇಲ್ಲಿಗೆ ಒಬ್ಬಳೆ ಬಂದೆಯಾ? ಯಾವ ಸಾಹಸದಿಂದ? ಒಬ್ಬ ದಾಸಿಯನ್ನು ಸಹ ಜೊತೆಯಲ್ಲಿ ತರಲಿಲ್ಲವೆ?

ರಮೆ ಒಂದು ಬಗೆಯ ಮಿದುವಾದ ದನಿಯಲ್ಲೆಂದಳು. ''ಅದರಿಂದ ತಾನೆ ಆಗುತ್ತಿದ್ದುದೇನು? ಅವಳು ತಾನೇ ನಿನ್ನ ಕೈಯಿಂದ ನನ್ನನ್ನು ಕಾಪಾಡಲು ಸಾಧ್ಯವಿರಲಿಲ್ಲ.''

''ಸಾಧ್ಯವಿರದೆ ಇರಲಿ, ಜನಗಳ ಬಾಯಿನ ಸುಳ್ಳು ಸುಳ್ಳು ಕೆಟ್ಟ ಹೆಸರಿನಿಂದಲಾದರೂ ಕಾಪಾಡುತ್ತಿದ್ದಳು. ರಾತ್ರಿ ಕಮ್ಮಿಯೇನೂ ಇಲ್ಲ, ರಾಣಿ!''

ಅದೆ ಬಹುದಿನಗಳ ಹಿಂದಿನ ಮರೆತ ಹೆಸರು! ಥಟ್ಟನೆ ಏನೊ ಒಂದನ್ನು ಹೇಳುವುದಕ್ಕೆ ರಮೆಗೆ ಅತ್ಯಂತ ಆವೇಗವುಂಟಾಯಿತು, ಆದರೆ ಅದನ್ನು ಮರೆಮಾಚಿಕೊಂಡಳು. ಆ ಮೇಲಿಷ್ಟೇ ಎಂದಳು. ''ಅದರಿಂದಲೂ ಪ್ರಯೋಜನವಾಗುತ್ತಿರಲಿಲ್ಲ, ರಮೇಶಣ್ಣ! ಕತ್ತಲರಾತ್ರಿಯೇನೂ ಅಲ್ಲ, ನಾನು ಸುಲಭವಾಗಿ ಹೋಗಬಲ್ಲೆ,'' ಎಂದು ಇನ್ನು ಮಾತನಾಡುವುದಕ್ಕಾಗದೆ ಮೆಲ್ಲನೆ ಹೊರಗೆ ಹೋದಳು.

## ೧೬

ಪ್ರತಿವರುಷವೂ ರಮೆ ನಿಯಮ ಮಾಡಿ ದುರ್ಗಾಷ್ಟಮಿ ಮಹಾನೋಮಿಗಳನ್ನು ಮಾಡುವಳು. ಪೂಜೆಯ ಮುಂದಲ ದಿನವೇ ಹಳ್ಳಿಗರಿಗೆಲ್ಲಾ ಹೊಲೆಯರು ಮಾದಿಗರು ಸಹಿತ ಎಲ್ಲರಿಗೂ ಅನ್ನ ಹಾಕಿಸುವುಳು. ಬ್ರಾಹ್ಮಣರ ಮನೆಯಲ್ಲಿ ಅಮ್ಮನ ಪ್ರಸಾದ ಪಡೆಯಬೇಕೆಂದು ಬಹಳ

ಗಲಭೆಯಾಗುವುದು. ರಾತ್ರಿ ಒಂದು ಘಂಟೆಯವರೆಗೂ ಆಡುವುದು, ಬಡಿಸುವುದು, ಎಲೆ ಎಂಜಲ ಕಸಗಳಿಂದ ಹೆಜ್ಜೆಯಿಡಲು ತಾವಿರುತ್ತಿರಲಿಲ್ಲ. ಹಿಂದೂಗಳು ಮಟ್ಟಿಗಲ್ಲಾ, ಪೀರಪುರದ ರೈತರೂ ಗುಂಪು ಸೇರಲು ತಪ್ಪುತ್ತಿರಲಿಲ್ಲ. ಈ ಸರ್ತಿ ತಾನು ಕಾಯಿಲೆಯಲ್ಲಿದ್ದರೂ ಸಜ್ಜುಸರಜರಾಯಿ ಕಡಮೆಯೇನೂ ಆಗಿಲ್ಲ. ಚಂಡಿಯ ಮಂಟಪದಲ್ಲಿ ಪ್ರತಿಮೆ ಮತ್ತು ಪೂಜೆಯ ವ್ಯವಸ್ಥೆ ಕೆಳಗಡೆ ಉತ್ಸವದ ಭಾರಿ ಬೈಲು. ಸಪ್ತಮೀ ಪೂಜೆ ಹೊತ್ತಿಗೆ ಸರಿಯಾಗಿ ಮುಗಿಯಿತು. ಯಥಾರೀತಿಯಾಗಿ ಮಧ್ಯಾಹ್ನದ ಮತ್ತು ಸಂಜೆಯ ಪೂಜೆಗಳು ಆದವು. ಆಕಾಶದಲ್ಲಿ ಸಪ್ತಮಿಯ ಅರ್ಧ ಚಂದ್ರ ಚೆನ್ನಾಗಿ ಬೆಳುತ್ತ ಬಂದನು; ಆದರೆ ಕಳ್ಳಂಬಿಯವರ ಮನೆ ಮುಂದಿನ ದೊಡ್ಡ ಅಂಗಳದ ಬೈಲು ಕೆಲ ದೊಡ್ಡ ಮನುಷ್ಯರ ವಿನಃ ಬೇರೆ ನ್ಯಾರಿಲ್ಲ, ಮನೆಯೊಳಗೆ ಅನ್ನದ ದೊಡ್ಡ ಸ್ತೂಪ ಒರಬರುತ ಒಣಗಿ ಗಡಸಾಗುತ್ತಲಿದೆ; ವ್ಯಂಜನಗಳ ರಾಶಿಗಳು ಬಣ್ಣಗೆಡುತ್ತ ಬಂದಿವೆ, ಆದರೂ ಇದುವರೆಗೂ ಒಬ್ಬ ರೈತನಾದರೂ ಅನ್ನದ ಪ್ರಸಾದಕ್ಕೆ ಕೈಚಾಚಿ ಬೇಡಲು ಮನೆಯೊಳಗೆ ಕಾಲಿಡಲಿಲ್ಲ. "ಇಸ್! ಇಷ್ಟೊಂದು ಊಟದ ಸಾಮಾನ ನಷ್ಟ ಮಾಡುತ್ತಿದ್ದಾರಲ್ಲಾ ನಾಡಿನ ಸಣ್ಣ ಜನರಗುಂಪು? ಎಷ್ಟೊಂದು ಹೆಚ್ಚಿಕೊಂಡಿದ್ದಾರೆ, ಇವರ ಕೊಬ್ಬು ನೋಡಿದೆಯಾ." ವೇಣಿಯೊಂದು ಸಲ ಒಳಕ್ಕೆ ಮತ್ತೊಂದು ಸಲ ಹೊರಕ್ಕೆ ಕೈಯಲ್ಲಿ ನಶ್ಯವನ್ನು ಹಿಡಿದುಕೊಂಡು, ಕೂಗಿ ಅರಚಿ ದಡಬಡನೆ ಓಡಿಯಾಡುತ್ತಿದ್ದಾನೆ, "ಬಡ್ಡಿಯಾಳುಗಳಿಗೆ ಬುದ್ಧಿಕಲಿಸುತ್ತೇನೆ. ಮಾಳಿಗೆಗಳ ತರಿದು ಹಾಕಿಸುತ್ತೇನೆ, ಹೀಗೆ ಮಾಡುತ್ತೇನೆ, ಹಾಗೆ ಮಾಡುತ್ತೇನೆ, " ಮುಂತಾಗಿ ಗೋವಿಂದ, ಧರ್ಮದಾಸ, ಹಲಧರ ಮೊದಲಾದವರು ಕೆಚ್ಚಿದ ಮೊಗದಿಂದ ಬಿಡುವಿಲ್ಲದೆ ಅಲೆದು ಅತ್ತಿಕಾಯುಂಡು ಅಂದಾಜು ಹಾಕಲು ಮೊದಲು ಮಾಡಿದರು. "ಈ ಕೆಲಸ ಯಾವ ಸೂಳೆಯ ಮಗನದು, ಇದು ಹೀಗಾಯಿತು; ಹಿಂದೂ ಮುಸಲಮಾನರೂಂದಾಗಿದ್ದಾರೆ, ಇದು ಬಹಳ ಅಚ್ಚರಿ!" ಇತ್ತ ಚಿಕ್ಕಿ ಎದ್ದೆದ್ದು ಕುಣಿಯುತ್ತಿದ್ದಾಳೆ; ಅದೊಂದು ಮಹಾ ಮಾರೀಕಾಟಕ್ಕಿಟ್ಟಿದೆ! ಈ ತುಮುಲು ತೊಂದರೆಗಳೊಳಗೆ ಒಬ್ಬಳು ಮಾತ್ರ ಸುಮ್ಮನಿದ್ದಾಳೆ, ಅವಳು ತಾನೆ ರಮೆ. ಒಂದು ಮಾತು ಸಹ

ಯಾರ ವಿರುದ್ಧವಾಗಿಯೂ ಆಡಲಿಲ್ಲ, ಯಾರ ಮೇಲೂ ತಪ್ಪು ಹೊರಿಸಲು, ಆಕ್ಷೇಪಣೆ ಅಥವಾ ದೋಷಾರೋಪಣೆಯೊಂದಾಗಲಿ ಅವಳ ಬಾಯಿಂದ ಇನ್ನಿದುವರೆಗೂ ಬಂದಿಲ್ಲ. ಇದೇನು ಆ ರಮೆಯೆ ? ಅವಳಂತೂ ಬಹು ಕಾಯಿಲೆಯಿಂದ ನರಳುತ್ತಿದ್ದಾಳೆ; ಅದರಲ್ಲಿ ಕೊಂಚವೂ ಸಂಶಯವಿಲ್ಲ. ಆದರೆ ಹೀಗೆಂತ ತಾನೆ ಒಪ್ಪಳು, ನಕ್ಕು ಹಾರಿಸಿಬಿಡುತ್ತಾಳೆ. ರೋಗದಿಂದ ರೂಪು ಕೆಡುತ್ತೆ, ಅದು ಹೋಗಲಿ. ಆದರೆ ಸಿಟ್ಟಿಲ್ಲ, ಆ ಸಿಡುಕುತನವಿಲ್ಲ, ಆ ಜೇರಿಕೆಯಿಲ್ಲ. ಸಪ್ಪೆಬಿದ್ದ ಕಂಗಳೆರಡೂ ವ್ಯಥೆ ಕರುಣೆಗಳಿಂದ ತುಂಬಿವೆ, ಕೊಂಚ ಲಕ್ಷ್ಯವಿಟ್ಟು ನೋಡಿದೊಡನೆಯೆ ಕಟ್ಟೆ ಒಡೆದರೆ ವಿಶ್ವ ಸಂಸಾರವನ್ನೆ ಕೊಚ್ಚಿಕೊಡೆದು ಬಿಡುವಂತಹ ಅಳುವಿನ ಸಮುದ್ರ ಈ ನೀರುದುಂಬಿದ ಆವರಣಗಳ ಹಿಂದೆ ಅಡಗಿದೆಯೋನೊ ಎಂಬಂತೆ ಮನಸ್ಸಿಗೆ ಹೊಳೆಯುವುದು. ಚಂಡೀಮಂಟಪದ ಹಿಂಬಾಗಲಿಂದ ರಮೆ ಪ್ರತಿಮೆಯ ಪಕ್ಕದಲ್ಲಿ ಬಂದು ನಿಂತಳು. ಅವಳು ಕಣ್ಣಿಗೆ ಬಿದ್ದೊಡನೆಯೆ ಮಂಗಳಾಕಾಂಕ್ಷಿಗಳ ಗುಂಪು ಒಂದೇ ಪೆಟ್ಟಿಗೆ ಕೀರಲು ದನಿಯಲ್ಲಿ ಕೀಳ ಜನಗಳ ಹದಿನಾಲಕ್ಕು ತಲೆಗಳಿಂದ ಮೊದಲಿಕ್ಕಿದ ಹೆಸರುಗಳನ್ನೆತ್ತಿ ಬೈಗಳನ್ನು ಮಳೆಗರೆಯಲು ಮೊದಲು ಮಾಡಿದರು. ರಮೆ ಕೇಳಿ ಸದ್ದು ಮಾಡದೆ ಕೊಂಚ ನಕ್ಕಳು. ತೊಟ್ಟನ್ನು ಹಿಡಿದು ಸೀಳಿದ ಹೂ ಮನುಷ್ಯನ ಕೈಯಲ್ಲಿ ನಗೆಗರೆನಂತೆ ಆ ನಗೆ ಬೆಳಗಿತು. ಅದರಲ್ಲಿ ರಾಗದ್ವೇಷ, ಆಶೆ ಭಗ್ನೆ, ಒಳ್ಳೆಯದು ಕೆಟ್ಟದ್ದು ಒಂದೂ ಹೊರಬೀಳಲಿಲ್ಲ. ಆ ನಗು ಸಾರ್ಥಕವೊ ನಿರರ್ಥಕವೊ ಅದನ್ನು ತಾನೆ ಬಲ್ಲವರಾರು !

"ಇಲ್ಲ, ಇಲ್ಲ, ಇದು ನಗುವ ಮಾತಲ್ಲ, ಇದು ದೊಡ್ಡ ಮನೆ ಹಾಳ ಮಾತು! ಒಂದು ಸಲ ತಿಳಿದರೆ, ಇದಕ್ಕೆಲ್ಲಾ ಮೂಲ ಯಾರೆಂತ?" ಎಂದು ಕೈ ಬೆರಳನ್ನು ಜೋಡಿಸಿ ಎಂದನು. "ಆಗ ಹೀಗೆ ಮಾಡಿ ಸೀಳಿ ಬಿಸುಟೇನು !"

ರಮೆ ಮನಸ್ಸಿನಲ್ಲೆ ಆದುರಿದಳು. ವೇಣಿ ಹೇಳುತ್ತ ಹೋದನು. "ತಾಯಿಗಂಡ ಸೂಳೆಮಕ್ಕಳು ಇದನ್ನರಿಯರು, ಯಾರ ಜೋರಿನಿಂದ ನೀವೆಲ್ಲಾ ಜೋರು ಮಾಡುತ್ತಾ ಇದ್ದೀರೊ ಅವನು, ಆ ರಮೇಶ ಈಗ ಜೈಲಿನ ಸರಪಳಿ ತುಂಡು ಎಳೆಯುತ್ತಾ ಇದ್ದಾನೆ. ನಿಮ್ಮನ್ನ ಸದೆಬಡಿಯೋಕೆ ಎಷ್ಟು ಹೊತ್ತುಬೇಕು ?"

ರಮೆ ಯಾವ ಮಾತನ್ನೂ ಆಡಲಿಲ್ಲ. ತಾನು ಬಂದ ಕೆಲಸವನ್ನು ಮುಗಿಸಿ ಹೊರಟು ಹೋದಳು; ಸುಮಾರು ಎರಡೂವರೆ ತಿಂಗಳಾಯಿತು, ರಮೇಶ ಅಕ್ರಮಪ್ರವೇಶ ಮಾಡಿ ಭುಜಂಗನನ್ನು ಕಠಾರಿಯಿಂದ ತಿವಿದನೆಂಬ ಅಪರಾಧದ ಮೇಲೆ ಜೈಲನ್ನು ಅನುಭವಿಸುತ್ತಿದ್ದಾನೆ! ಮೊಕದ್ದಮೆಯಲ್ಲಿ ವಾದಿಯ ಪಕ್ಷದವರಿಗೆ ಬಹಳ ತೊಂದರೆ ತೆಗೆದುಕೊಳ್ಳಬೇಕಾಗಲಿಲ್ಲ. "ಹೊಸ ಮ್ಯಾಜಿಸ್ಟ್ರೇಟ ಸಾಹೇಬರು, ಅದ್ಹೇಗೊ ಮುಂಚಿತವಾಗಿಯೇ ತಿಳಿದುಕೊಂಡಿದ್ದರು; ಈ ಬಗೆಯ ಅಪರಾಧವು ಆಸಾಮಿಯ ವಿಷಯದಲ್ಲಿ ವಿಶೇಷ ಸಂಭವ ಮತ್ತು ಸ್ವಾಭಾವಿಕ, ಇವನು ದರೋಡೆಖೋರರ ಮುಂತಾದವರ ಸಹಿತ ಬೆರತವನೊ ಅಲ್ಲವೊ ಎಂಬ ವಿಷಯದಲ್ಲಿ ಅವರಿಗೆ ವಿಶೇಷ ಸಂಶಯವೇನೊ ಇದೆ. ಠಾಣೆಯ ಕಡತಗಳಿಂದಲೆ ಅವರಿಗೆ ಸಹಾಯ ದೊರೆತಿದೆ. ಅದರಲ್ಲಿ ಬರೆದಿದೆ, ಸರಿಯಾಗಿ ಈ ಬಗೆಯ ಅಪರಾಧವನ್ನು ಅವನು ಹಿಂದೆಯೂ ಮಾಡಿದ್ದಾನೆ; ಮತ್ತು ಇನ್ನೂ ಹೇರಳ ಬಗೆ ಬಗೆಯ ಸಂದೇಹಾಸ್ಪದವಾದ ನಡತೆ ಅವನ ಹೆಸರೊಂದಿಗೆ ಗಂಟುಬಿದ್ದಿದೆ. ಮುಂದೆ ಪೋಲೀಸು ಅವನ ಮೇಲೆ ವಿಶೇಷ ನಿಗ ಇಡತಕ್ಕದ್ದು; ಅವರು ಈ ಅಭಿಪ್ರಾಯವನ್ನು ಹೊರಪಡಿಸಲು ಹಿಂದೆಗೆಯಲಿಲ್ಲ. ಸಾಕ್ಷಿಗಳಿಂದ ವಿಶೇಷ ಪ್ರಮಾಣಗಳ ಪ್ರಯೋಜನವೂ ಬೇಕಾಗಲಿಲ್ಲ, ಆದರೆ ರಮೆ ಸಾಕ್ಷಿ ಕೊಡಬೇಕಾಯಿತು. ಅವಳು ಹೇಳಿದಳು. "ರಮೇಶ ಮನೆಗೆ ನುಗ್ಗಿ ಆಚಾರ್ಯರನ್ನು ಹೊಡೆಯಲು ಬಂದ, ಅದನ್ನು ತಾನು ಬಲ್ಲಳು; ಆದರೆ ಕಠಾರಿಯನ್ನು ತಿವಿದನೊ ಇಲ್ಲವೊ ಅರಿಯೆನು; ಕೈಯಲ್ಲಿ ಕಠಾರಿ ಇತ್ತೆ ಇಲ್ಲವೆ ಅದೂ ಸಹ ನನಗೆ ನೆನಪಿಲ್ಲ."

ಇದೆಂಥಹ ಸತ್ಯ? ಜಿಲ್ಲೆಯ ವಿಚಾರಾಲಯದಲ್ಲಿ ಪ್ರಮಾಣ ಮಾಡಿ ರಮೆ ಈ ಸತ್ಯವನ್ನು ನುಡಿದು ಬಂದಳು; ಆದರೆ ಪ್ರಮಾಣಮಾಡಬೇಕಾದ ಸಂಪ್ರದಾಯವಿಲ್ಲದ ವಿಚಾರಾಲಯದಲ್ಲಿ ಅವಳೇನುತ್ತರ ಹೇಳಿಯಾಳು! ರಮೇಶ ಕಠಾರಿಯನ್ನು ಹೊಡೆಯಲಿಲ್ಲವೆಂತ ಅವಳಿಗಿಂತ ಚೆನ್ನಾಗಿ ತಿಳಿದಿದ್ದವರು ಮತ್ತಾರು; ಕೈಲಿ ಅಸ್ತ್ರವಿರುವುದಂತಿರಲಿ ಒಂದು ಹುಲ್ಲು ಕಡ್ಡಿ ಸಹ ಇರಲಿಲ್ಲ! ಆ ಅದಾಲತ್ತಿನಲ್ಲಿ, ಈ ಮಾತನ್ನು ಯಾರಾದರೂ

ಕೇಳಬಹುದಾಗಿತ್ತಲ್ಲ, ಇಲ್ಲ, ಕೇಳಲಿಲ್ಲ! ವೇಣೀ ಮೊದಲಾದವರ ಕೈಹಿಡಿದ ಹಳ್ಳಿ ಸಮಾಜಕ್ಕೆ ಸತ್ಯ ಬೇಕಿಲ್ಲ. ಸತ್ಯಕ್ಕೆ ಅವಳು ಕೊಡಬೇಕಾಗಿದ್ದ ಬೆಲೆ ಮಿಥ್ಯಾಪವಾದದ ಕಗ್ಗಪ್ಪನ್ನು ತನ್ನ ಮೊಗಕ್ಕೆಲ್ಲಾ ಚೆನ್ನಾಗಿ ಬಡಿದು ಕೊಂಡು ಇದೇ ಸಮಾಜದಿಂದ ಹೊರಬಿದ್ದು ನಿಲ್ಲಬೇಕಾಗಿತ್ತು. ಹೀಗೆ ಅನೇಕರಿಗೆ ಆಗಿದೆ ಈ ಮಾತನ್ನು ಅವಳು ನಿಃಸಂದೇಹವಾಗಿ ಬಲ್ಲಳು. ಇದ ಲ್ಲದೆ ಶಿಕ್ಷೆ ಇಷ್ಟು ಬಲವಾಗುವುದೆಂದು ಅವಳು ಕನಸಲ್ಲಿ ಸಹ ಕಂಡರಿ ಯಳು. ಬಹಳ ಹೆಚ್ಚೆಂದರೆ ಒಂದೆರಡುನೂರು ರೂಪಾಯಿಗಳ ಜುಲ್ಮಾನೆ ಯಾದೀತೆಂದು ಅಂದುಕೊಂಡಿದ್ದಳು. ಒಳ್ಳೇದಾಯಿತು, ಬಾರಿ ಬಾರಿಗೂ ಎಚ್ಚರಕೊಟ್ಟರೂ ರಮೇಶ ಅವಳ ಸೆರೆಯನ್ನು ಬಿಟ್ಟು ಓಡಿಹೋಗಲೊಲ್ಲದೆ ಇರಲು ಆಗ ರೋಷದಿಂದ ರಮೆ ಮನಸ್ಸಿನಲ್ಲಿದ್ದನ್ನೆ ಕೋರಿದ್ದಳು; ಆಗಲಿ ಜುಲ್ಮಾನೆ. ಒಂದು ಸಲ ಬೆಸಿಗೆ ಬೀಳಲಿಯೆಂದು. ಆದರೆ ಆ ಶಿಕ್ಷೆ ಹೀಗೆ ತಿರುಗುವುದೆಂದು, ರಮೇಶನ ರೋಗದಿಂದ ಬಳಲಿ ಬಿಳಿಚಿಗೊಂಡ ಮೊಗದ ಕಡೆ ನೋಡಿಯೂ ವಿಚಾರಕನಿಗೆ ದಯೆಯುಂಟಾಗದು– ಒಂದೇ ಪೆಟ್ಟಿಗೆ ಆರುತಿಂಗಳ ಸಶ್ರಮ ಕಾರಾವಾಸದ ಹುಕ್ಕುಂ ಮಾಡಿಬಿಡುವನೆಂದು ಅವಳಿಗೆ ತೋಚಲೇ ಇಲ್ಲ. ಆ ಸಮಯದಲ್ಲಿ ರಮೇಶನ ಕಡೆ ಸಿಟ್ಟಿಸಿ ನೋಡಲು ರಮೆಗೆ ಸಾಗದೆ ಹೋಯಿತು. ಹೆರರ ಬಾಯಿಂದ ಕೇಳಿದಳು, ರಮೇಶ ಒಂದೇ ನೋಟದಿಂದ ಅವಳ ಮೊಗವನ್ನೆ ನೋಡುತ್ತಿದ್ದನು ಮತ್ತು ಜೈಲಿಗೆಂತ ಹುಕ್ಕುಂ ಆಗಲು, ಗೋಪಾಲ ಗುಮಾಸ್ತೆಯ ಪ್ರಾರ್ಥ ನೆಗೆ ಉತ್ತರವಾಗಿ ತಲೆಯನ್ನಾಡಿಸಿ ಹೇಳಿದನು. “ ಬೇಡ, ಮ್ಯಾಜಿಸ್ಟ್ರೇ ಟರು ನನಗೆ ಜೀವಾವಧಿ ಕಾರಾಗಾರದಲ್ಲಿರುವಂತೆ ಹುಕ್ಕುಂ ಮಾಡಿದರೂ ಅಪೀಲು ಮಾಡಿ ಕುಲಾಸೆಯಾಗಬೇಕೆಂಬ ಇಚ್ಛೆ ನನಗಿಲ್ಲ. ಜೈಲೆ ಇದ ಕ್ಕಿಂತ ಉತ್ತಮವೆಂದು ತೋರುತ್ತದೆ. ”

ಉತ್ತಮ ತಾನೆ! ಬಹುಕಾಲದಿಂದ ಅವರನ್ನು ಅನುಸರಿಸಿದ ಭುಜಂಗ ಸುಳ್ಳು ದಾವೆ ಹಾಕಿ ತನ್ನ ಋಣವನ್ನು ನೀಗಿದ. ರಮೆ ಸಾಕ್ಷೀ ಮಂಚದಲ್ಲಿ ನಿಂತು ಅವನ ಕೈಯಲ್ಲಿ ಕಠಾರಿ ಇತ್ತೇ ಇಲ್ಲವೆ ನೆನಪಿಗೆ ತರ ಲಾರದೆ ಹೋದಳು; ಆಗ ಅಪೀಲು ಮಾಡಿ ಬಿಡಿಸಿಕೊಳ್ಳಲೇಕೆ! ಅವನ ಆ ದುರ್ಜಯವಾದ ಘೃಣೆ (ಹೀಯಾಳಿಕೆ) ದೊಡ್ಡದೊಂದು ಬಂಡೆಯಂತೆ

ರಮೆಯ ಎದೆಯ ಮೇಲೆ ಹೇರಿಕೊಂಡಿದೆ. ಯಾವ ಬದಿಗೂ ಅದನ್ನು ಸರಿಸಲು ಅವಕಾಶದೊರೆಯದು. ಇದೆಂತಹ ದೊಡ್ಡ ಹೋರೆ! ಅವಳು ಸುಳ್ಳ ನುಡಿದು ಬರಲಿಲ್ಲ. ಈ ತೃಪ್ತಿಯನ್ನವಳ ಅಂತರ್ಯಾಮಿ ಮಂಜೂರ ಮಾಡವಲ್ಲನಲ್ಲಾ! ಸುಳ್ಳು ನುಡಿಯಲಿಲ್ಲ ಸರಿ, ಆದರೆ ನಿಜವನ್ನೂ ಹೊರ ಪಡಿಸಲಿಲ್ಲ. ಸತ್ಯವನ್ನು ಮರೆಮಾಚುವುದರ ಅಪರಾಧ ಇಷ್ಟು ದೊಡ್ಡದೆ; ಇದೇಸಿದು ತನ್ನನ್ನು ಹಗಲಿರಳು ಸುಟ್ಟುಬಿಡುತ್ತಿರುವುದಲ್ಲಾ; ಇದು ಮೊದಲೆ ತಿಳಿದಿದ್ದರೊಂದಾವರ್ತಿ ಬಿಟ್ಟು ಬಿಟ್ಟು ಅವಳಿಗೆ ಇದೇ ಮನ ಸ್ಸಿಗೆ ಬೀಳುತ್ತಿದೆ; ಭುಜಂಗನ ಅಪರಾಧದಿಂದ ರಮೇಶ ಪ್ರಜ್ಞೆಕಳೆದು ಕೊಂಡನಲ್ಲಾ ಅದೆಂತಹ ಭಾರಿ ಅಪರಾಧ! ಆದರೂ ಅವಳೊಂದೇ ಮಾತಿ ನಿಂದ ಅವನು ಎಲ್ಲವನ್ನು ಮನ್ನಿಸಿ ಮರುಮಾತಾಡದೆ ಹೊರಟು ಹೋದ ನಲ್ಲಾ! ಅವಳ ಇಚ್ಛೆಯನ್ನು ತಲೆಯ ಮೇಲೆ ಹೊತ್ತು ಯಾರವಳನ್ನು ಇಷ್ಟು ಸನ್ಮಾನಿಸಿದ್ದರು! ತನ್ನಲ್ಲಿ ತಾನೆ ಬೆಂದು ಬೆಂದು ಇತ್ತೀಚಿಗೆ ಅವಳೊಂದು ಸತ್ಯವನ್ನು ಪತ್ತೆ ಹಚ್ಚುವಂತಿತ್ತು. ಯಾವ ಸಮಾಜದ ಭೀತಿಯಿಂದ ಇಂತಹ ಗರ್ಹಿತವಾದ ಕರ್ಮವನ್ನು ಮಾಡಿಬಿಟ್ಟಳಲ್ಲಾ, ಆ ಸಮಾಜ ತಾನೆ ಎಲ್ಲಿದೆ? ವೇಣೀ ಮೊದಲಾದ ಕೆಲ ಸಮಾಜಪತಿಗಳ ಸ್ವಾರ್ಥ ಮತ್ತು ಕ್ರೂರ ಹಿಂಸೆಯ ಪೊರಗಡೆ ಅದರ ಇರುವಿನ ಗುರುತು ಎಲ್ಲಿ? ಗೋಪಿಂದನ ವಿಧವೆಯಾದ ನಾದನಿಯ ವಿಷಯ ಅರಿಯದವ ರಾರು? ವೇಣಿಯೊಡನೆ ಅವಳ ಸಂಬಂಧದ ಮಾತು ತಿಳಿಯದವರಿಲ್ಲ. ಆದರೂ ಸಮಾಜದ ಮರೆಯಲ್ಲಿ ಅವನು ನಿಷ್ಕಂಟಕವಾಗಿ ಕೂತಿದ್ದಾನೆ; ಮತ್ತು ಈ ವೇಣಿಯೆ ಸಮಾಜಪತಿ. ಇವರೇನೆ ಸಾಮಾಜಿಕ ಸಂಕೋಲೆ ಯನ್ನು ಸರ್ವಾಂಗಗಳಿಗೂ ನೂರಾರು ಸಲ ಸುತ್ತು ಹಾಕಿ ಬಿಗಿದಿಡು ವುದ ಇವರಿಗೆ ಇಹದ ಸಾರ್ಥಕತೆ! ಇದೆ ಹಿಂದುತ್ವ. ಆದರೆ ಭುಜಂಗ ಈ ಅನರ್ಥದ ಮೂಲವಾದರೂ ರಮೆ ತನ್ನ ಕಡೆಯೆ ನೋಡಿಕೊಂಡು ಅವನ ಮೇಲೆಂತು ಕೋಪಮಾಡುವುದು. ಅವನ ಮಗಳಿಗೆ ಹನ್ನೆರಡು ವರುಷ ತುಂಬಿತು– ಬಲು ಬೇಗನೆ ಮದುವೆಯಾಗದೆ ಹೋದರೆ ಒಂಟಿಗ ನಾಗಿ ಹೊರಗಾಗಿರಬೇಕಾದೀತು, ಮತ್ತು ಮನೆಯಲ್ಲಿನವರಿಗೆಲ್ಲಾ ಜಾತಿ ಹೋಗುತ್ತದೆ. ಈ ಪ್ರಮಾದದ ಆಶಂಕೆಯ ಮಾತ್ರದಿಂದಲೆ ಪ್ರತ್ಯೇಕ

ಹಿಂದುಗಿನ ಕೈಕಾಲುಗಳು ಕುಸಿದು ಹೊಟ್ಟೆಯೊಳಗೆ ಸೇರಿದುಕೊಳ್ಳುವುವು! ತನಗೆ ಇಷ್ಟೊಂದನುಕೂಲಗಳಿದ್ದೂ ಸಮಾಜದ ಭೀತಿಯನ್ನು ಮೀರಲಾರದಿರಲು ಬಡಪಾಪಿ ಭುಜಂಗ ಮೀರುವನೆ? ವೇಣಿಯ ವಿರುದ್ಧಕ್ಕೆ ನಿಲ್ಲುವುದೆಂತಹ ಭಯಂಕರ ಮೃತ್ಯುಮಯ ವ್ಯಾಪಾರ! ಈ ಮಾತನ್ನು ಅವಳೊಪ್ಪದೆ ಹೋಗಲು ದಾರಿಯಂತೂ ಇಲ್ಲ.

ಮುದುಕ ಹಳೆ ಹಾಲಪ್ಪ ಮನೆಯ ಮುಂದುಗಡೆ ಹೋಗುತ್ತಿದ್ದನು; ಗೋವಿಂದ ಕಂಡು ಕೂಗಿ ಕರೆದು ಬೇಡಿ ಕೊನೆಗೆ ಒಂದು ಬಗೆ ಜೋರಾವರಿಯಿಂದಲೇ ಹಿಡಿದು ತಂದು ವೇಣೀರಾಯರ ಮುಂದೆ ಹಾಜರು ಮಾಡಿದನು. ವೇಣಿ ಬಿಸಿಬಿಸಿಯಾಗಿ ಕೇಳಿದನು. "ಏನೊ ಇಷ್ಟು ದಿವಾಕು ಎಂದಸಿಂದ ಕಾಣೊ ಹಳೆಯಪ್ಪ? ನಾನನ್ನೋದು ನಿಮಗೆಲ್ಲಾ ಏನು ಇತ್ತೀಚೆಗೆ ಕತ್ತಿನ ಮೇಲೆ ಇನ್ನೊಂದು ತಲೆ ಮೊಳೆತುಕೊಂಡೈಯ್ತೇನೊ!"

ಹಳೆಯನೆಂದನು. "ಎರಡು ತಲೆ ಯಾರಿಗುಂಟು ರಾಯರೆ? ನಿಮ್ಮಂಥವರಿಗೆ ಇಲ್ಲ, ನಮ್ಮಂಥ ಬಡವರಿಗೆಲ್ಲೀದು!"

"ಏನೆಂದೊ!" ಎಂದರಚಿದನು. ಮುಂದೆ ಕ್ರೋಧದಿಂದ ಗಂಟಲು ಬಿಕ್ಕೊಂಡು ಮಾತು ಹೊರಡದೆ ಹೋಯಿತು.

ಇವನ ಆಸ್ತಿಯೆಲ್ಲಾ ಒಂದು ದಿನ ವೇಣಿಯಲ್ಲಿ ಅಡವಾಗಿತ್ತು. ಆಗ ಇದೆ ಹಳೆಯ ಎರಡು ಹೊತ್ತೂ ಬಂದು ದೊಡ್ಡರಾಯರ ಅಂಗಾಲು ನೆಕ್ಕಿ ಹೋಗುತ್ತಿದ್ದನು. ಇವತ್ತು ಅಂಥವನ ಬಾಯಲ್ಲಿ ಈ ಮಾತು! ಹಳೆಯನೆಂದನು. "ಎರಡು ತಲೆ ಯಾರಿಗೂ ಇರೋಲ್ಲ, ಅದೇ ಮಾತು ಹೇಳಿದೆ, ದೊಡ್ಡರಾಯರೆ, ಇನ್ನೇನೂ ಇಲ್ಲ."

ಗೋವಿಂದ ಓಗರಿಸಿ ಎಂದನು. "ನಿಮ್ಮಗಳ ಎದೆಯಗಲ ಮಾತ್ರ ನಾವು ನೋಡ್ತಾ ಇದೇವೆ! ಅಮ್ಮಾವರ ಪ್ರಸಾದ ಸಹ ಇಸಕೊಳ್ಳೋಕೆ ನೀವಾರೂ ಬರಲಿಲ್ಲವಲ್ಲ, ಯಾಕೊ, ಕಾರಣ ಹೇಳೀಯಾ?"

ಮುದುಕ ಕೊಂಚ ನಕ್ಕು ಹೇಳಿದನು. "ಇನ್ನು ಎದೆಯಗಲಾ! ಮಾಡಬೇಕಾದ್ದೆಲ್ಲಾ ನೀವು ಸ್ವಾಮಿಗಳು ನಮಗೆ ಮಾಡಿದ್ದೀರಲ್ಲಾ.

ಅದು ಹೋಗಲಿ; ಅವಮ್ಮಾವರ ಪ್ರಸಾದ ಅಂತಲೇ ಅನ್ನಿ, ಇನ್ನೇನು ಬೇಕಾದರೂ ಅನ್ನಿ ಕೈವರ್ತನಾದೋನು ಇನ್ನು ಹಾರೋರ ಮನೇಲಿ ಉಣ್ಣಾಕಿಲ್ಲ. ಇಷ್ಟೊಂದು ಪಾಪಾವ, ಅವ್ವ ಭೂಮಿತಾಯಿ ಹಂಗೆ ಹೊರತಾವಳೊ! ಅದಕ್ಕೇನೆ ನಮ್ಮಲ್ಲಿ ಗಟ್ಟಿ ಜಳ್ಳು ಏಂಗಡ ಹಾಕಿಕೊಳ್ಳತಾ ಇದೇವೆ!'' ಎಂದು ಸಿಟ್ಟುಸಿರಿಟ್ಟು ಹಳೆಯ ರಮೆಯ ಕಡೆ ತಿರುಗಿ ನೋಡಿ ಎಂದನು. "ಕೊಂಚ ಎಚ್ಚರದಿಂದ ಇರಿ ಅಕ್ಕಮ್ಮಾವರೆ, ಪೀರಪುರದ ಮುಸಲಮಾನ ಹೈಕಳು ಒಂದೇ ಪಟ್ಟಿಗ ಹುಚ್ಚತ್ತಿ ಹೋಗಿದ್ದಾರೆ. ಚಿಕ್ಕರಾಯರು ಹಿಂದಕ್ಕೆ ಬಂದರು ಅಂದರೆ ಏನು ಕಾಂಡ ಆಗಿಹೋಗುತ್ತೊ ಅದನ್ನ ಈ ಮಾದುರ್ಗಿಯೆ ತಿಳಿಯಬೇಕು. ಇಷ್ಟರಲ್ಲೇನೆ ಎರಡುಮೂರು ತಡವೆ ಅವರು ದೊಡ್ಡರಾಯರ ಮನೆ ನಾಲ್ಕು ಕಡೆ ಅಲೆದು ಹೋಗವರೆ, ಎದುರಿಗೆ ಸಿಗಲಿಲ್ಲ; ಆದರಿಂದಲೇ ಬದುಕ್ಕೊಂಡರು!'' ಎಂದು ಅವನು ವೇಣಿಯ ಕಡೆ ನೋಡಿದನು. ಕಣ್ಣು ಮಿಟಿಕಿಸುವಷ್ಟರಲ್ಲಿ ವೇಣಿಯ ರೋಷದ ಮುಖ ಬಣ್ಣಗೆಟ್ಟುಹೋಯಿತು. ಹಳೆಯ ಹೇಳುತ್ತ ಹೋದನು. "ದ್ಯಾವರ ಮುಂದ ಸುಳ್ಳು ಹೇಳೋಕಿಲ್ಲ, ದೊಡ್ಡರಾಯರೆ, ತುಸು ಎಚ್ಚರಗಚ್ಚರವಾಗಿರಬೇಕು. ಇರಳು, ಮುಂಜಾನ ಹೊರಗೆ ಹೋಗಬೇಡಿ; ಯಾರು ಎಲ್ಲಿ ಕಾಯ್ಕೊಂಡು ಇರತಾರೊ, ಹೇಳಾಕಿಲ್ಲ!''

ವೇಣಿ ಏನನ್ನೊ ಹೇಳಹೋದನು, ಆದರೆ ಬಾಯಿಂದ ಮಾತುಗಳೇ ಹೊರಬೀಳಲಿಲ್ಲ. ಅವನಂತಹ ಬೆದರು ಹೇಡಿ ಇಹಸಂಸಾರದಲ್ಲಿ ಇನ್ನಿರಲಾರ.

ಇಷ್ಟು ಹೊತ್ತಿನ ಮೇಲೆ ರಮೆ ಮಾತನಾಡಿದಳು. ಸ್ನೇಹಾರ್ದ್ರ ಕರುಣ ದನಿಯಲ್ಲಿ ಹೇಳಿದಳು; "ಹಳೆಯ, ಚಿಕ್ಕರಾಯರಿಗೋಸ್ಕರ ಏನೊ ನಿಮ್ಮದೆಲ್ಲಾ ಇಷ್ಟು ಕೋಪ?''

ಹಳೆಯ ಪ್ರತಿಮೆಯ ಕಡೆಯೊಂದು ಸಲ ನೋಡಿ ಎಂದನು. "ಸುಳ್ಳು ಕಟವಟ ನಾಲಿಗೇಲಿ ನುಡಿದು ನರಕಕ್ಕೆ ನಡೀಲೇಕೆ ಅಕ್ಕಮ್ಮಾವರೆ, ಹಂಗೆ ಅನ್ನಿ! ಆದರೆ ಮುಸಲಮಾನರ ಕೋಪಾನ ಎಲ್ಲಾರಿಗಿಂತ ಹೆಚ್ಚು. ಅವರೆಲ್ಲಾ ಚಿಕ್ಕರಾಯರನ್ನ ಹಿಂದೂಗಳ ಪೈಗಂಬರ ಅಂತ

ಅಂದುಕೊಂಡವರೆ. ಅದಕ್ಕೆ ಸಾಕ್ಷಿ ನೋಡಿಕೊಳ್ಳಿ, ನೀವೇನೆ; ಜಾಫರಾಲಿ ಉಂಟಲ್ಲಾ ಅವನು ಬೆರಳಾಗೆ ನೀರು ಕಲಕಿದರೆ ಆಸ್ತಿಯೆಲ್ಲಾ ಹೋಯ್ತು ಅಂತ ಹೊಡಕೊಳ್ತಾ ಇದ್ದಾನಲ್ಲಾ, ಅವ ಚಿಕ್ಕರಾಯರಿಗೆ ಜೈಲಾದ ಟನವೆ ಅವರ ಇಸ್ಕೂಲಿಗೆ ಸಾವಿರ ರೂಪಾಯಿ ಕೊಟ್ಟವನೆ! ಕಿವೀಲಿ ಬಿತ್ತು, ಮಸೀದೀಲಿ ಸಹಿತ ಅವರ ಹೆಸರ ಹೇಳಿ ನಮಾಜು ಮಾಡತಾರಂತೆ"

ರಮೇಯ ಬಣ್ಣ ಬಾಳಕವಾದ ಮೊಗ ಅವ್ಯಕ್ತವಾದ ಆನಂದದಿಂದ ಮಿನುಗಿತು. ಅವಳು ಸುಮ್ಮನೆ ಇದ್ದು ಬೆಳಗುವ ಕಂಗಳಿಂದ ಎವೆಯಿಕ್ಕದೆ ಹಳೆಯನ ಕೈಮೊಗಗಳನ್ನು ನಿಟ್ಟಿಸಿನೋಡುತ್ತಿದ್ದಳು. ವೇಣಿ ಅಕಸ್ಮಾತ್ತಾಗಿ ಹಳೆಯನ ಕೈಬಗ್ಗದು ಹಿಡಿದು ಎಂದನು. "ನೀನೊಂದು ಸಲ ದರೋಗರಲ್ಲಿ ಹೋಗಿ ಹೇಳಬೇಕು, ಹಳೆಯ! ನೀನೇನು ಬೇಕೆಂದರೂ ಕೊಡುತ್ತೇನೆ, ಎರಡೆಕರೆ ಜಮೀನು ಬಿಟ್ಟುಕೊಡಬೇಕೆಂದರೆ ಸಹ ಕೊಡುತ್ತೇನೆ, ದೇವರ ಮುಂದೆ ಕೂತು ಭಾಷೆ ಕೊಡುತ್ತೇನೆ, ಹಳೆಯ, ಬ್ರಾಹ್ಮಣನ ಮಾತು ನಡಿಸಿಕೊಡು."

ಹಳೆಯ ಬೆರಗಾದವನಂತೆ ಕೊಂಚ ಹೊತ್ತು ವೇಣಿಯ ಮೊಗವನ್ನು ನಿಟ್ಟಿಸಿ ನೋಡುತ್ತಿದ್ದನು. "ಇನ್ನೇಸುದಿನ ಬದುಕೇನು, ದೊಡ್ಡರಾಯರೆ! ಲೋಭಕ್ಕೆ ಬಿದ್ದು ಈ ಕೆಲಸಾವ ಮಾಡಿದರೆ, ಸತ್ತ ಮೇಲೆ ಎತ್ತ್ಯೋದು ಹಾಳಾಗಲಿ, ಕಾಲಿಂದ ಸಹ ನನ್ನ ಯಾರೂ ತಾಗೋಕಿಲ್ಲ; ಆ ಕಾಲ ಇನ್ನು ಇಲ್ಲ, ದೊಡ್ಡರಾಯರೆ, ಇನ್ನು ಆ ಕಾಲ ಇಲ್ಲ! ಚಿಕ್ಕರಾಯರು ಅದನ್ನೆಲ್ಲಾ ತಲೆಕೆಳಗು ಮಾಡಿ ಹೋಗವರೆ."

ಗೋವಿಂದನೆಂದನು. "'ಬ್ರಾಹ್ಮಣನ ಮಾತು' ಹಾಗಾದರೆ ಉಳಿಸೋಲ್ಲ ಅನ್ನು!"

ಹಳೆಯ ತಲೆಯಾಡಿಸಿ ಎಂದನು. "ಇಲ್ಲ. ಹೇಳಿದರೆ ನಿಮಗೆ ಕೋಪ ಬರುತ್ತೆ, ಗಂಗಾಳಿ ರಾಯರೆ. ಆದರೆ ಆ ದಿನ ಪೀರುಪುರದ ಹೊಸ ಇಸ್ಕೂಲಮನೇಲಿ ಚಿಕ್ಕರಾಯರು ಅಂದಿದ್ದರು. 'ಕತ್ತಿನಲ್ಲಿ ಅಷ್ಟು ಲಡಿದಾರ ನೇತಾಡುತಾ ಇದ್ದರೆಯೆ ಬ್ರಾಹ್ಮಣ ಆಗೋಕಿಲ್ಲ!' ನಾನಂತೂ ನಿನ್ನೆ ಮೊನ್ನೆಯೋನಲ್ಲಾ, ಪಂತರೆ, ಎಲ್ಲಾವ ಬಲ್ಲೆ. ನೀವು ಮಾಡೋ

ಕೆಲಸ ಏನು ಬ್ರಾಹ್ಮಣರ ಕೆಲಸಾನೊ ? ನಿಮ್ಮನ್ನೆ ಕೇಳ್ತೀನೆ, ಅಕ್ಕಮ್ಮಾ ವರೆ ನೀವೇ ಹೇಳಿ, ನೋಡೋವಾ ?''

ರಮೆ ಉತ್ತರವಿಲ್ಲದೆ ತಲೆಬಾಗಿಸಿದಳು. ಪಳೆಯ ಹುರುಪುಗೊಂಡು ಮನಸ್ಸಿನ ಹೊಟ್ಟೆಯುರಿಯನ್ನು ತೀರಿಸಿಕೊಂಡು ಹೇಳುತ್ತ ಹೋದನು. "ಹೈಕಳ ದಳ ಬಲಿತಾ ಐತೆ ಬಹಳವಾಗಿ, ಸಂಜೇ ಮೇಲೆ ಎಲ್ಲಾರು ಹೋಗಿ ಜಮಾಯಿಸತ್ತಾರೆ ಜಾಫರಾಲಿ ಮನೇಲಿ. ಅವರೆಲ್ಲಾ ಬಾಯಿ ಬಿಟ್ಟು ಗಂಟೆಬಡೆದಂಗೆ ಹೇಳಿಕೊಂಡು ತಿರುಗತಾವರೆ, ಜಮೀನ್‌ದಾರ್ರು ಚಿಕ್ಕರಾಯರು ! ಇನ್ನು ಎಂಗಲಾದವರೆಲ್ಲಾ ಕಳ್ಳರು, ಠಕ್ಕರು. ಅದ ಲ್ಲದೆ ನಾವೆಲ್ಲಾ ಕಂದಾಯಕಟ್ಟಿ ವಾಸಮಾಡುತ್ತೀವೆ. ಯಾರಿಗೂ ಹೆದ ರೋಕ್ಕಿಲ್ಲ. ಇನ್ನು ಹಾರೋರ ಹಾಂಗಿದ್ದಾರೆ ಹಾರುವ, ಇಲ್ಲದೆ ಇದ್ದರೆ ನಾವು ಹೆಂಗೋ ಅವರೂ ಹಂಗೇನೆ.''

ವೇಣಿ ಆತಂಕದಿಂದ ತುಂಬಿ ಪ್ರಶ್ನೆ ಕೇಳಿದನು. "ಹಳೆಯ, ನನ್ನ ಮೇಲೇಕೊ ಅವರಿಗಿಷ್ಟು ಕೋಪ, ಹೇಳು ನೋಡೋಣ ?''

ಹಳೆಯನೆಂದನು. "ಕೋಪ ಮಾಡಬೇಡಿ, ದೊಡ್ಡರಾಯರೆ, ಆದರೆ ನೀವೇ ತಾನೆ ಎಲ್ಲಾ ತೊಂದರೆಗಳಿಗೂ ಬುಡ. ಅದು ಅವರಿಗೆ ತಿಳಿ ಯಾಕೆ ಬಾಕಿ ಇನ್ನಿಲ್ಲ.''

ವೇಣಿ ಸುಮ್ಮನಾಗಿ ಕೂತಿದ್ದನು. ಸಣ್ಣ ಜನವಾದ ಹಳೆಯನ ಬಾಯಲ್ಲಿ ಇಂತಹ ಮಾತ ಕೇಳಿಯೂ ಅವನು ಕೋಪಗೊಳ್ಳಲಿಲ್ಲ, ಏಕೆಂದರೆ ಕೋಪಮಾಡುವುದಕ್ಕೆ ತಕ್ಕ ಮನಸ್ಸಿನ ಸ್ಥಿತಿ ಅವನಿಗಿರಲಿಲ್ಲ; ದಿಗಲಿನಿಂದ ಎದೆಯೊಳಗೆ ಡವಡವವೆನ್ನುತ್ತಿತ್ತು. ಗೋವಿಂದನೆಂದನು. "ಹಾಗಾದರೆ ಜಾಫರಾಲಿ ಮನೆಯಲ್ಲೊ ಕೂಟ ಸೇರೋದು, ಹೇಳು ? ಅವರಲ್ಲೇನು ಮಾಡುತ್ತಾರೆ ಹೇಳಬಲ್ಲೆಯೊ ?''

ಹಳೆಯ ಅವನ ಮೊಗವನ್ನು ನೋಡಿ ಏನೋ ಚಿಂತಿಸಿದನು. ಕೊನೆ ಗೆಂದನು. "ಅವರೇನು ಮಾಡುತ್ತಾರೆಯೊ ತಿಳೀದು. ಒಳ್ಳೇದಾಗಬೇಕು ಅನ್ನೊಹಂಗಿದ್ದರೆ ಕುಂಟಯುಕ್ತಿಗಳನ್ನೆಲ್ಲಾ ಹೂಡಬೇಡಿ. ಅವರು ಹಿಂದೂ ಮುಸಲಮಾನರು ಅಣ್ಣತಮ್ಮಂದಿರಂತೆ ಮಾಡಿಕೊಂಡಿದ್ದಾರೆ. ಒಂದೇ ಮನಸ್ಸು, ಒಂದೇ ಜೀವ, ಚಿಕ್ಕರಾಯರಿಗೆ ಜೈಲಾದಂದಿನಿಂದ

ಎಲ್ಲಾರು ರೇಗಿ ಸಿಡಿಮಿದ್ದಾಗವರೆ, ಅದರೊಳಗೆ ಹೋಗಿ ಚಕಮುಕಿ ಹೊಡೆದು ಬೆಂಕಿಹಾಕಬೇಡಿರಿ, ಪಂತರೆ."

ಹಳಿಯ ಹೊರಟು ಹೋದನು; ಬಹಳ ಹೊತ್ತಿನತನಕ ಮಾತ ನಾಡಲು ಯಾರಿಗೂ ಬೇಕಾಗಲಿಲ್ಲ. ರಮೆ ಹೋಗಲು ಏಳುತ್ತಲೆ ವೇಣಿ ಹೇಳಹತ್ತಿದನು. "ವ್ಯಾಪಾರವನ್ನು ಕೇಳಿದೆಯಷ್ಟೆ, ರಮೆ?"

ರಮೆ ಮುಗುಳುನಗೆ ನಕ್ಕಳು, ಮಾತಾಡಲಿಲ್ಲ. ನಗೆಯನ್ನು ಕಂಡು ವೇಣಿಯ ಮೈಯುರಿಯಿತು. "ರಂಡೇದು, ಆ ಭುಜಂಗನಿಂದಲೆ ಇಷ್ಟು ಕಾಂಡ. ಇನ್ನು ನೀನು ಅಲ್ಲಿಗೆ ಹೋಗದೆ ಬಿಟ್ಟೆಯಾ, ಅವನ್ನ ಜಿಡಿಸದೆ ಬಿಟ್ಟೆಯಾ, ಇದೊಂದೂ ಆಗತಾ ಇರಲಿಲ್ಲ. ನೀನು ನಗೋಳೆಯೆ; ಹೆಂಗಸು ಮನೆಬಿಟ್ಟು ಹೊರಗೆ ಹೋಗಬಾರದು, ಆದರೆ ನಮ್ಮ ಗತಿ ಯೇನು? ಹೆಂಗಸಿನ ಜೊತೆಸೇರಿ ಕೆಲಸ ಮಾಡಲಿಕ್ಕೆ ಹೋದರೇನೆ ಈ ವಾಡಿಗಿಟ್ಟುಕೊಳ್ಳುತ್ತೆ," ಎಂದು ವೇಣಿ ಭಯದಿಂದಲೂ ಕ್ರೋಧ ದಿಂದಲೂ ಹೊಟ್ಟೆಯುರಿಯಿಂದಲೂ ಮೊಗವನ್ನೇನೊ ಒಂದು ಬಗೆ ಮಾಡಿಕೊಂಡು ಕೂತಿದ್ದನು. ರಮೆ ಸ್ತಂಭಿತಳಾದಳು. ವೇಣಿಯನ್ನು ಅವಳು ಚೆನ್ನಾಗಿಯೆ ಗುರ್ತಿಸಿದ್ದಳು; ಆದರೂ ಇಷ್ಟು ದೊಡ್ಡ ನಾಚಿಕೆ ಗೇಡಿನ ದೋಷಾರೋಪವನ್ನು ಅವಳು ಅವನ ಹತ್ತಿರಿಂದಲೂ ಪ್ರತ್ಯಾ ಶಿಸಿರಲಿಲ್ಲ. ಉತ್ತರವೇನನ್ನೂ ಕೊಡದೆ ಕೊಂಚ ಹೊತ್ತು ನಿಂತಿದ್ದು ಅವಳು ಜೇರಿ ಕಡೆಗೆ ಹೊರಟು ಹೋದಳು. ವೇಣಿ ಆಗ ಅರಚಿ ಕಿರಚಿ ಪೂರಾ ಎರಡು ದೀವಟಿಗೆಗಳನ್ನೂ ಮತ್ತು ಐದು ಆರು ಆಳುಗಳನ್ನೂ ಎಲ್ಲಾ ಜೊತೆಗೆ ಕರೆದುಕೊಂಡು ಬೆದರಿ ಬೆಚ್ಚಿ ಅಡಿಯಿಡುತ್ತಾ ಹೊರಟು ಹೋದನು.

೧೭

ವಿಶ್ವೇಶ್ವರಿ ಕೋಣೆಯೊಳಹೊಕ್ಕು ಕಂಬನಿದುಂಬಿ ಅಳುವದನಿ ಯಲ್ಲಿ ಕೇಳಿದಳು. "ಇವತ್ತು ಹೇಗಿದ್ದೀಯಮ್ಮಾ ರಮೆ?"

ರಮೆ ಅವಳ ಮೊಗವನ್ನು ನೋಡಿ ತುಸು ನಕ್ಕು ಎಂದಳು. "ಇವತ್ತು ಚೆನ್ನಾಗಿದ್ದೇನೆ ದೊಡ್ಡಮ್ಮ."

ವಿಶ್ವೇಶ್ವರಿ ಅವಳ ಕಾಲದೆಸೆಯಲ್ಲಿ ಕೂತು ಸದ್ದು ಮಾಡದೆ ತಲೆ ಮೊಗಗಳನ್ನು ಬೀಳ್ಳೈಸುತ್ತಾ ಇದ್ದಳು. ಇಂದಿಗೆ ಮೂರು ತಿಂಗಳಾದವು. ರಮೆ ಹಾಸಿಗೆ ಹತ್ತಿದ್ದಾಳೆ. ಎದೆಯ ತುಂಬಾ ನೀರ ಕೆಮ್ಮು ಮತ್ತು ಮಲೇರಿಯಾ ವಿಷ ಸರ್ವಾಂಗಕ್ಕೂ ಹರಡಿದೆ. ಹಳ್ಳಿಗಾಡಿನ ಹಳೆ ಪಂಡಿತ ಪ್ರಾಣ ವತ್ತೆಯಿಟ್ಟು ಇದಕ್ಕೆ ವ್ಯರ್ಥಚಿಕಿತ್ಸೆ ಮಾಡಿ ಜೀವ ಬಿಡುತ್ತಿದ್ದಾನೆ. ಯಾವುದರ ತಡೆಬಡೆಗೊಡದ ಮುತ್ತಿಗೆಯಿಂದ ಅವಳ ಸ್ನಾಯು ಶಿರಗಳೆಲ್ಲಾ ಹಗಲಿರಳು ಸುಟ್ಟು ಬೂದಿಯಾಗಿ ಹೋಗುತ್ತಿವೆಯೊ ಅದನ್ನು ಆ ಮುದುಕ ಬಲ್ಲನೆ? ವಿಶ್ವೇಶ್ವರಿಯ ಮನದಲ್ಲಿಯಂತೂ ಸಂಶಯದೊಂದರ ನೆಳಲು ಮೆಲ್ಲ ಮೆಲ್ಲನೆ ಗಟ್ಟಿಯಾಗುತ್ತಲಿದೆ. ರಮೆಯನ್ನು ಅವಳು ಮಗಳಂತೆಯೆ ಪ್ರೀತಿಸುತ್ತಿದ್ದಳು. ಆದ್ದರಿಂದಲೆ ಆ ಅತ್ಯಂತ ಸ್ನೇಹವೆ ರಮೆಯ ಸಂಬಂಧವಾಗಿ ಅವಳ ಸತ್ಯದೃಷ್ಟಿಯನ್ನು ಆ ಸಾಮಾನ್ಯ ರೀತಿಯಲ್ಲಿ ಹರಿತಮಾಡುತ್ತಿತ್ತು. ಹೆರರು ತಪ್ಪಾಗಿ ತಿಳಿದು, ತಪ್ಪಾಶೆಪಟ್ಟು, ತಪ್ಪು ವ್ಯವಸ್ಥೆಯನ್ನು ಮಾಡಹೋಗಲು ಅವಳೆದೆಯೊಡೆದು ಹೋಗುವಂತೆಯಾಯಿತು. ಅವಳು ನೋಡುತ್ತಿದ್ದಳು, ರಮೆಯ ಕಂಗಳೆರಡೂ ಆಳದ ಕೊಟದಿಗಳನ್ನು ಹೊಕ್ಕಿವೆಯಾದರೂ ನೋಟ ಅತಿಶಯ ಚುರುಕಾಗಿದೆ. ಬಲು ಬಲು ದೂರದ್ದೇನೊ ಒಂದನ್ನು ಅತ್ಯಂತ ಹತ್ತಿರ ಮಾಡಿಕೊಂಡು ನೋಡಬೇಕೆಂಬ ಏಕಾಗ್ರವಾಸನೆಯಿಂದಲೇನೊ ಹೀಗೆ ಅಸಾಧಾರಣ ತೀಕ್ಷ್ಣವಾಗಿದೆ. ವಿಶ್ವೇಶ್ವರಿ ಮೆಲ್ಲ ಮೆಲ್ಲನೆ ಕರೆದಳು. "ರಮೆ?"

"ಏನು ದೊಡ್ಡಮ್ಮ?"

"ನಾನು ನಿಮ್ಮಮ್ಮ ನಂತೆಯೆ ರಮೆ—"

ರಮೆ ಅಡ್ಡಿಮಾಡಿ ಎಂದಳು. "ಅಂತೆ ಏಕೆ, ದೊಡ್ಡಮ್ಮ, ನೀನೆ ನಮ್ಮಮ್ಮ."

ವಿಶ್ವೇಶ್ವರಿ ಬಗ್ಗಿ ಹಣೆಗೆ ಮುದ್ದಿಟ್ಟು ಎಂದಳು. "ಹಾಗಿದ್ದರೆ ಸತ್ಯವಾಗಿ ಹೇಳಮ್ಮಾ ನೋಡೋಣ, ನಿನಗೇನಾಗಿದೆ?"

"ಕಾಯಿಲೆಯಾಗಿದೆ, ದೊಡ್ಡಮ್ಮ!"

ಅವಳ ಈ ಬಗೆ ಬಿಳುಪುಗಿಳಿದ ಮೊಗ ಕೂಡ ಎವೆಯಿಕ್ಕುವಷ್ಟು

ಹೊತ್ತು ಕೆಂಚಗಾದದ್ದನ್ನು ವಿಶ್ವೇಶ್ವರಿ ಕಂಡಳು. ಆಗ ಗಭೀರ ಸ್ನೇಹದಿಂದ ಅವಳ ಸಿಕ್ಕುಗಟ್ಟಿದ ಕೂದಲನ್ನು ಒಂದು ಸಲ ಆಡಿಸಿ ಎಂದಳು. “ಅದಂತೂ ಈ ಚರ್ಮದ ಕಂಗಳಿಗೆ ಕಾಣುತ್ತೆ ಅಮ್ಮಾ! ಇವುಗಳಿಂದ ಹಿಡಿಯಲಾಗದ್ದೇನಾದರೂ ಇದ್ದರೆ, ತಾಯಿಯ ಹತ್ತಿರ ಮರೆಮಾಜ ಬೇಡಮ್ಮಾ! ಮರೆಮಾಚಿದರೆ ಕಾಯಿಲೆ ವಾಸಿಯಾದೀತೆ?”

ಕಿಟಕಿಯ ಹೊರಗಡೆ ಇನ್ನೂ ಬೆಳಗಿನ ಬಿಸಿಲು ಬಲಿತಿಲ್ಲ ಮತ್ತು ಮಂದ ತಂಗಾಳಿ ಬೀಸುತ್ತಿದೆ. ಅತ್ತಕಡೆ ನೋಡಿ ರಮೆ ಸುಮ್ಮನಿದ್ದಳು. ಕೊಂಚ ಹೊತ್ತಿನಮೇಲೆಂದಳು. “ದೊಡ್ಡಣ್ಣ ಹೇಗಿದ್ದಾನೆ, ದೊಡ್ಡಮ್ಮ?”

ವಿಶ್ವೇಶ್ವರಿಯೆಂದಳು. “ಚೆನ್ನಾಗಿದ್ದಾನೆ. ತಲೆಯ ಗಾಯ ಆರಲು ಇನ್ನೂ ತಡವಾಗುವದೇನೋ ಸರಿ, ಆದರೆ ೫-೬ ದಿನಗಳೊಳಗೇಯೆ ಆಸ್ಪತ್ರೆಯಿಂದ ಮನೆಗೆ ಬರಲು ಆಗುತ್ತೆ.” ರಮೆಯ ಮೊಗದಲ್ಲಿ ನೋವಿನ ಚಹರೆಯನ್ನನುಭವಿಸಿ ಮತ್ತೆ ಹೇಳಿದಳು. “ದುಃಖಪಡ ಬೇಡಮ್ಮಾ. ಇದರಿಂದ ಅವನಿಗೆ ಪ್ರಯೋಜನವಿತ್ತು. ಅವನಿಗೆ ಒಳ್ಳೆಯದೆ ಆಗುತ್ತೆ. ತಾಯಿಯಾಗಿ ಹೆತ್ತಕುವರ ಇಂತಹ ಕೆಟ್ಟ ಆಪತ್ತಿಗೆ ಸಿಕ್ಕಿರುವಾಗ ಈ ಮಾತನ್ನು ಹೇಳುವೆ, ಅದು ಹೇಗೆಂದು ಭಾವಿಸುತ್ತೀಯೋನೊ? ಆದರೆ ನಿನಗೆ ನಿಜ ಹೇಳುತ್ತೇನೆ, ಇದರಿಂದ ನಾನು ಹೆಚ್ಚಿಗೆ ವ್ಯಥೆ ಪಟ್ಟೆನೊ ಆನಂದಪಟ್ಟೆನೊ ಹೇಳಲಾರೆ. ಏಕೆನ್ನುವಿಯೊ, ನಾನು ಬಲ್ಲೆ ಅಧರ್ಮಕ್ಕೆ ಭಯಪಡದವರಿಗೆ, ಸಿಗ್ಗಿನ ಬಗಲಿಲ್ಲದವರಿಗೆ, ಪ್ರಾಣಭಯ ಅಷ್ಟಕ್ಕಷ್ಟೂ ಹೆಚ್ಚು; ಹೀಗಿಲ್ಲದೆ ಇದ್ದರೆ ಸಂಸಾರ ಚೂರುಮಾರಾಗಿ ಬಿಡುತ್ತಿತ್ತು. ಆದುದರಿಂದಲೆ ನನ್ನ ಮನಸ್ಸಿಗೆ ಕೇವಲ ಹೊಳೆಯುತ್ತೆ ರಮೆ, ಈ ಕಾಳನಮುಗ ವೇಣಿಗೆ ಮಾಡಿದ ಮಂಗಳ ಪ್ರಪಂಚದಲ್ಲಿ ಯಾವ ನೆಂಟನಿಂದಲೂ ಆಗುತ್ತಿರಲಿಲ್ಲ. ಇದ್ದಲವನ್ನು ತೊಳೆದರೆ ಬಣ್ಣ ಬದಲಾದೀತೆ, ಅಮ್ಮ, ಅದನ್ನು ಬೆಂಕಿಯಲ್ಲಿ ಸುಡಬೇಕು.”

ರಮೆ ವಿಚಾರಿಸಿದಳು. “ಮನೆಯಲ್ಲಿ ಆಗ ಯಾರೂ ಇರಲಿಲ್ಲವೆ?”

ವಿಶ್ವೇಶ್ವರಿಯೆಂದಳು, “ಇಲ್ಲದೆ ಏನು, ಎಲ್ಲರೂ ಇದ್ದರು. ಅವನು ಥಟ್ಟನೆ ದೊಣ್ಣೆಯನ್ನೆತ್ತಿ ಪೆಟ್ಟಿಕ್ಕಲಿಲ್ಲ, ತಾನು ಜೈಲಿಗೆ ಹೋಗುವದನ್ನು

ಖಂಡಿತ ಮಾಡಿಕೊಂಡೆ ಎಣ್ಣೆಯನ್ನು ಮಾರಲು ಬಂದ. ಅವನಿಗೆ ಕೋಪ ಕೊಂಚವೂ ಇರಲಿಲ್ಲ ಅಮ್ಮಾ, ಆದುದರಿಂದಲೆ ಅವನ ಸೊಟ್ಟಕೋಲಿನ ಒಂದೆ ಏಟಿಗೆ ವೇಣಿ ಜ್ಞಾನತಪ್ಪಿ ಬಿದ್ದುಬಿಡಲು ಅವನು ಸುಮ್ಮನೆ ನಿಂತಿದ್ದ, ಇನ್ನು ಪೆಟ್ಟಿಕ್ಕಲಿಲ್ಲ! ಅದಲ್ಲದೆ ಅವನು ಹೇಳಿ ಹೋಗಿದ್ದಾನೆ, ಇದಾದಮೇಲೂ ವೇಣಿ ಎಚ್ಚರಗೊಳ್ಳದೆ ಹೋದರೆ ತಾನು ಹಿಂದಕ್ಕೆ ಬರಲಿ, ಬಾರದೆ ಹೋಗಲಿ ಈ ಪೆಟ್ಟು ಅವನಿಗೆ ಕೊನೆಯದಲ್ಲ."

ರಮೆ ಮೆಲ್ಲಮೆಲ್ಲನೆ ಎಂದಳು, "ಹಾಗೆಂದರೆ ಇನ್ನೂ ಜನ ಅವನ ಹಿಂದೆ ಇದ್ದಾರೆ. ನಮ್ಮ ದೇಶದಲ್ಲಂತೂ ಸಣ್ಣ ಜನಗಳಲ್ಲಿ ಇಷ್ಟುಸಾಹಸ ಎಂದೂ ಇರಲಿಲ್ಲ, ದೊಡ್ಡಮ್ಮ, ಎಲ್ಲಿಂದ ಇದನ್ನವರು ಪಡೆದರು?"

ವಿಶ್ವೇಶ್ವರಿ ಮೃದುನಗೆ ನಕ್ಕು ಎಂದಳು. "ಅದನ್ನೇನು ನೀನರಿಯೆಯಾ, ಅಮ್ಮ! ನಾಡಿನ ಸಣ್ಣ ಜನಗಳ ಎದೆಯನ್ನು ಹೀಗೆ ತುಂಬಿದವರಾರೆಂಬುದನ್ನು ನೀ ಕಾಣೆಯಾ? ಬೆಂಕಿಯುರಿದು ಮೇಲಕ್ಕೇಳುವುದೆ ಹೊರತು ಕೆಳಕ್ಕೆ ಬಗ್ಗದು, ರಮೆ, ಅದನ್ನು ಬಲವಂತದಿಂದ ಬಗ್ಗಿಸಿದರೂ ಅದು ಅಕ್ಕಪಕ್ಕದ ದಿನಸುಗಳನ್ನು ಬೇಯಿಸಿ ಹೋಗುವುದು. ಅವನು ಹಿಂದಿರುಗಿ ಒಂದು ದೀರ್ಘಜೀವಿಯಾಗಿ ಬೇಕಾದಲ್ಲಿಗೆ ಹೋಗಲಿ; ವೇಣಿಯ ವಿಷಯವನ್ನು ಮನಸ್ಸಿಗೆ ತಂದುಕೊಂಡು ನಾನೆಂದಿಗೂ ನಿಟ್ಟುಸಿರಿಡೆ." ಹೀಗೆಂದರೂ ಕೂಡ ನಿಟ್ಟುಸಿರೊಂದನ್ನು ತಡೆದುಕೊಂಡಳು; ರಮೆ, ಅದನ್ನು ಗುರ್ತಿಸಿದಳು. ಆದುದರಿಂದಲೆ ಅವಳ ಕೈಯನ್ನು ಎದೆಯ ಮೇಲೆ ಎಳೆದುಕೊಂಡು ಸ್ಥಿರಳಾಗಿದ್ದಳು. "ರಮೆ ಒಬ್ಬನೆ ಮಗನೆಂಬುದೆಂತಹುದೊ ತಾಯಾದವಳೆ ಬಲ್ಲಳು. ಚೈತನ್ಯವಿಲ್ಲದೆ ಬಿದ್ದಿದ್ದ ವೇಣಿಯನ್ನು ಅವರು ಅತ್ತಿತ್ತ ಹಿಡಿದಾಡಿ ಎಳೆದು ತಳ್ಳಿ ಪಾಲಕ್ಕಿಯಲ್ಲಿ ಎತ್ತಿಟ್ಟು ಆಸ್ಪತ್ರಿಗೆ ಸಾಗಿಸಿದಾಗ ನನಗೇನಾಗಿತ್ತೊ ಎಂಬುದನ್ನು ನಿನಗೆ ತಿಳಿಯ ಹೇಳಲು ಸಾಮರ್ಥ್ಯ ಸಾಲದು. ಆದರೂ ಆಗ ಸಹಿತ ಯಾರನ್ನು ಶಪಿಸಲಿ ಯಾರನ್ನು ದೋಷಿಯೆನ್ನಲಿ, ಇಷ್ಟು ಸಹ ನನ್ನಿಂದ ಆಗದೆ ಹೋಯಿತು. ಈ ಮಾತನ್ನು ಮರೆಯಲಾಗಲಿಲ್ಲ, ಒಬ್ಬ ಮಗ ಎಂತ ಧರ್ಮದ ಶಾಸನ ತಾಯಿಯ ಮೊಗವನ್ನು ನೋಡಿ ಸುಮ್ಮನಾದೀತೆ."

ರಮೆ ಕೊಂಚ ಭಾವಿಸಿ ಎಂದಳು. "ನಿನ್ನೊಡನೆ ವಾದಿಸುತ್ತಿಲ್ಲ,

ದೊಡ್ಡಮ್ಮ, ಆದರೆ ಇದು ಹೀಗೆಂತಾದರೆ, ರಮೇಶಣ್ಣ, ಹಾಗಾದರೆ ಯಾವ ಪಾಪಕ್ಕೆ ಈ ದುಃಖವನ್ನುಣ್ಣುತ್ತಿದ್ದಾನೆ? ನಾವೇನೇನುಮಾಡಿ ಅವನನ್ನು ಜೈಲಿಗಟ್ಟಿ ಒಂದೆವೊ ಅದು ಯಾರ ಕಣ್ಣಿಗೂ ಮುಚ್ಚುಮರೆ ಯಾಗಿಲ್ಲ?''

ದೊಡ್ಡಮ್ಮನೆಂದಳು. ''ಇಲ್ಲ ಅಮ್ಮಾ, ಅದಲ್ಲ, ಇಲ್ಲವೆಂತಲೆ ವೇಣಿ ಆಸ್ಪತ್ರೆಯಲ್ಲಿ. ಇನ್ನು ನೀನು—'' ಅವಳು ಥಟ್ಟನೆ ನಿಂತು ಬಿಟ್ಟಳು. ನಾಲಿಗೆಯ ಕೊನೆಗೆ ಬಂದ ಮಾತು ಬಲವಂತದಿಂದ ಹಿಂದಕ್ಕೆ ತಳ್ಳಿ ಎಂದಳು. ''ಏನು ಒಳ್ಳೆಯಾ ಅಮ್ಮ, ಯಾವ ಕೆಲಸದಲ್ಲೂ ಎಂದಿಗೂ ಎಲ್ಲಾ ಸರಿಸರಿಯಾಗಿ ಸೊನ್ನೆಯತನಕ ಲೆಕ್ಕಾಚಾರ ಮಾಡಲು ಬಾರದು. ಅದರ ಶಕ್ತಿ ಎಲ್ಲೆಲ್ಲೊ ಹೋಗಿ ಕೆಲಸ ಮಾಡುತ್ತೆ. ಆದರೆ ಅದು ಹೇಗೆ ಮಾಡುತ್ತದೆಂಬದನ್ನು ಸಕಲ ಸಮಯಗಳಲ್ಲಿಯೂ ಹಿಡಿಯಲಾಗ ದೆಂತಲೆ ಇಂದಿನವರೆಗೂ ಈ ಸಮಸ್ಯೆಯ ತೀರ್ಮಾನವಾಗದೆ ಇದೆ. ಒಬ್ಬನ ಪಾಪಕ್ಕಾಗಿ ಅದೇತಕ್ಕೆ ಇನ್ನೊಬ್ಬ ಪ್ರಾಯಶ್ಚಿತ್ತ ಮಾಡು ತ್ತಾನೆ; ಆದರೆ ಮಾಡಲೇಬೇಕು, ಅದರಲ್ಲಿ ಲೇಶವೂ ಸಂದೇಹವಿಲ್ಲ.'' ರಮೆ ತನ್ನ ಸ್ವಂತ ನಡತೆಯನ್ನು ನೆನೆದು ಬಾಯಿಮುಚ್ಚಿಕೊಂಡು ಸಿಟ್ಟುಸಿರಿಕ್ಕಿದಳು. ವಿಶ್ವೇಶ್ವರಿ ಹೇಳುತ್ತ ಹೋದಳು. ''ಇದರಿಂದ ನನ್ನ ಕಣ್ಣು ತೆರೆಯಿತು; ರಮೆ, ಒಳ್ಳೆಯದನ್ನು ಮಾಡುತ್ತೇನೆಂದ ಮಟ್ಟಿಗೆ ಒಳ್ಳೆಯದಾಗದು. ಮೊಟ್ಟಮೊದಲು ಅನೇಕ ಬಗೆಯ ಚಿಕ್ಕ ದೊಡ್ಡ ಮೆಟ್ಟಲುಗಳನ್ನು ಹತ್ತುವ ಧೈರ್ಯ ಬೇಕು! ಒಂದು ದಿನ ರಮೇಶ ಹತಾಶನಾಗಿ ನನಗೆ ಹೇಳಬಂದ: 'ದೊಡ್ಡಮ್ಮ ಇವರಿಗೆ ಒಳ್ಳೆ ಯದನ್ನು ಮಾಡುವುದು ನನ್ನ ಕೆಲಸವಲ್ಲ, ನಾನು ಬಂಡಲ್ಲಿಗೆ ಹಿಂದಿರು ಗುತ್ತೇನೆ.' ಆಗ ನಾನು ಅಡ್ಡಿ ಮಾಡಿ ಹೇಳಿದೆ: 'ಇಲ್ಲ ರಮೇಶ ಕೆಲಸ ವನ್ನೇನೊ ಮೊದಲುಮಾಡಿದೆ, ಈಗ ಬಿಟ್ಟೋಡಬೇಡ.' ನನ್ನ ಮಾತನ್ನು ಅವನು ಎಂದಿಗೂ ತಳ್ಳಿಹಾಕನು; ಅದಕ್ಕೇನೇ ಅವನಿಗೆ ಜೈಲಿಗೆ ಹುಕ್ಕುಂ ಆದದ್ದು ಕೇಳಿದಂದು, ನಾನೆ ಅವನನ್ನು ಹಿಡಿದು ಕಟ್ಟಿ ಈ ಶಾಸ್ತಿಯನ್ನು ಕೊಟ್ಟೆನೆಂತ ನನ್ನ ಮನಸ್ಸಿಗೆ ಆಯಿತು. ಆದರೆ ಆದಾದ ಮೇಲೆ ವೇಣಿ ಯನ್ನು ಆಸ್ಪತ್ರೆಗೆ ಒಯ್ದಂದು ಮೊಟ್ಟಮೊದಲು ತೋಚಿತು, ಹಾಗಲ್ಲ

ಹಾಗಲ್ಲ, ಎಂದು. ಅವನು ಜೈಲಿಗೆ ಹೋಗುವುದರ ಪ್ರಯೋಜನವಿತ್ತು. ಅದಲ್ಲದೆ, ನನಗೆ ತಿಳಿಯಲಿಲ್ಲ– ಹೊರಗಳಿಂದ ಬಂದು ಒಳ್ಳೆಯದನ್ನು ಮಾಡಬೇಕೆಂತ ಹೊರಡುವುದು ಇಷ್ಟು ಡಬಡ್ಡಾಳಿಕೆಯದು, ಇಷ್ಟು ಕಠಿಣವೆಂತ. ಮೊದಲು ಬೆರೆಯಬೇಕು, ಎಲ್ಲರ ಜೊತೆಯಲ್ಲೂ ಒಳ್ಳೇದು ಕೆಟ್ಟದ್ದರಲ್ಲಿ ಒಂದಾಗದೆ ಹೋದರೆ ಏತರಿಂದಲೂ ಒಳ್ಳೆಯದನ್ನು ಮಾಡ ಲಾಗುವುದಿಲ್ಲ. ಈ ಮಾತು ಮನಸಿನಲ್ಲಿ ಸಹ ಯೋಚಿಸಿರಲಿಲ್ಲ. ಮೊದಲಿ ನಿಂದಲೆ ಅವನು ತನ್ನ ಶಿಕ್ಷಣ ಸಂಸ್ಕಾರ, ಬಲವತ್ತರದ ತೇಜಸ್ಸು, ಭಾರಿ ಪ್ರಾಣಗಳಿಂದ ಕೂಡಿ ಇಷ್ಟು ಮೇಲೆ ಬಂದು ನಿಂತನು; ಕೊನೆಯತನಕ ಅವನ ಆಳತೆಯು ಯಾರಿಗೂ ಸಿಗಲಿಲ್ಲ. ಆದರೆ ಅದು ನನ್ನ ಕಣ್ಣಿಗೆ ಬೀಳದೆ ಹೋಯಿತು, ಅಮ್ಮಾ, ನಾನು ಅವನನ್ನು ಹೋಗಲೂಗೊಡವಲ್ಲೆ ಇರಿಸಿ ಕೊಳ್ಳಲಾರದೆ ಹೋದೆ." ರಮೆ ಏನನ್ನೊ ಹೇಳ ಹೋಗಿ, ತಡೆದು ಹೋಯಿತು. ವಿಶ್ವೇಶ್ವರಿಯದನ್ನು ಊಹಿಸಿ ಹೇಳಿದಳು. "ಇಲ್ಲ ರಮೆ, ಮರುಳ ನಾನು ಅದಕ್ಕೆ ಪಡುತ್ತಿಲ್ಲ. ಆದರೆ ನೀನು ಸಹ ಕೇಳಿ ಕೋಪ ಗೊಳ್ಳಬೇಡಮ್ಮಾ. ಈ ಸಲ ನೀವೆಲ್ಲಾ ಅವನನ್ನು ಇಳಿಸಿ ಕರೆತಂದು ಎಲ್ಲರ ಜೊತೆಗೂ ಬೆರಸಿದಿರಿ, ಆದರಿಂದ ನಿಮ್ಮಗಳ ಅಧರ್ಮವೆಷ್ಟೆ ದೊಡ್ಡ ದಿರಲಿ ಅವನು ಹಿಂದಿರುಗಿ ಬಂದು ಈ ಸಲ ಸರಿಯಾಗಿ ನಿಜವನ್ನು ತಿಳಿದು ಕೊಳ್ಳುವನು; ಈ ಮಾತು ನಾನು ಸಾರಿ ಹೇಳಿ ಹೋಗುತ್ತೇನೆ."

ರಮೆಗೆ ಮಾತು ಅರ್ಥವಾಗಲಿಲ್ಲ. ಎಂದಳು. "ಆದರೆ ಇದರಿಂದೇಕೆ ಅವನು ಇಳಿದು ಬಿಡುವನು, ದೊಡ್ಡಮ್ಮ? ನಮ್ಮಗಳ ಅನ್ಯಾಯ ಅಧ ರ್ಮಗಳ ಫಲದಿಂದ ಎಷ್ಟೇ ದೊಡ್ಡ ಯಾತನೆಯನ್ನು ಅವನನುಭವಿಸಿ ದರೂ, ನಮ್ಮಗಳ ಕೆಟ್ಟ ಕೆಲಸ ನಮ್ಮಗಳನ್ನು ನರಕದ ಅಂಧಕೂಪದಲ್ಲಿ ತಳ್ಳಿಬಿಡುವುದೆ ಹೊರ್ತು ಅವನನ್ನು ತಾಗುವುದುಂಟೆ?"

ವಿಶ್ವೇಶ್ವರಿ ಸಪ್ಪೆ ನಗೆ ತೋರಿ ಎಂದಳು. "ತಾಗದೆ ಉಂಟೆ ಅಮ್ಮಾ; ಇಲ್ಲದೆ ಇದ್ದರೆ ಪಾಪವಿಷ್ಟು ಭಯಂಕರವೇಕೆ? ಉಪಕಾರಕ್ಕೆ ಪ್ರತ್ಯುಪಕಾರ ಮಾಡರು, ಅಷ್ಟೇಕೆ, ಅದಕ್ಕೆ ಬದಲು ಅಪಕಾರವನ್ನೆ ಮಾಡುವರು; ಆದರಿಂದಲೂ ಆಗುವದಷ್ಟರಲ್ಲೆ ಇದೆಯಮ್ಮ; ಆದರೆ ಈ ಕೃತಘ್ನತೆಯಿಂದ ದಾತನನ್ನೂ ಕೆಳಕ್ಕೆಳೆಯುವರಲ್ಲಾ! ನೀನೆ ಹೇಳಮ್ಮಾ,

ಆದರೆ ನಿಮ್ಮಗಳ ಭಾವಿಕುಂಟೆ ರಮೇಶನನ್ನು ಇನ್ನು ತಿರುಗಿ ಹಾಗೆ ಪಡೆದೀರಾ? ಅವನು ಹಿಂದಿರುಗಿದರೆ ನೀವೆ ಸ್ಪಷ್ಟವಾಗಿ ನೋಡುವಿರಿ: ಯಾವ ಕೈಯಿಂದ ಅವನು ದಾನಮಾಡಿ ಅಲೆಯುತ್ತಿದ್ದನೊ ಆ ಬಲಗೈಯನ್ನು ಭುಜಂಗ ತಿರಿಪ ಮುರಿದು ಬಿಟ್ಟಿರುವನು." ಆಮೇಲೆ ಕೊಂಚ ತಡೆದು ತಾನೆ ಹೇಳಿದಳು. "ಆದರೆ, ಯಾರು ಬಲ್ಲರು! ಅಂತು ಒಳ್ಳೆಯದೆ ಆಯಿತು. ಅವನ ಅಷ್ಟು ಸಮಗ್ರವಾದ ಕೈನ ಮಿತಿಯಿಲ್ಲದ ದಾನವನ್ನು ಹಿಡಿಯುವ ಶಕ್ತಿ ಹಳ್ಳಿಗರಿಗೆ ಇಲ್ಲದೆ ಇರುವಾಗ ಅವನ ಮುರುಕಲು ಕೈಯೆ ಈ ಸಲ ಅವರ ನಿಜವಾದ ಕೆಲಸಗಳಿಗೆ ಉಪಯೋಗವಾಗುವುದು;" ಹೇಳಿ ಅವಳು ಆಳವಾದೊಂದು ನಿಟ್ಟುಸಿರನ್ನಿಟ್ಟಳು. ಅವಳ ಕೈಯನ್ನು ರಮೆ ಸದ್ದಿಲ್ಲದೆ ಕೆಲ ಹೊತ್ತು ಆಡಿಸುತ್ತಿದ್ದು ಮೆಲ್ಲ ಮೆಲ್ಲನೆ ಬಹು ಕರುಣ ದನಿಯಲ್ಲಿ ಎಂದಳು. "ಒಳ್ಳೇದು, ದೊಡ್ಡಮ್ಮ, ಸುಳ್ಳು ಸಾಕ್ಷಿ ಕೊಟ್ಟು ನಿರಪರಾಧಿಗೆ ದಂಡನೆ ಅನುಭವಿಸುವಂತೆ ಮಾಡಿದ್ದಕ್ಕೆ ಶಾಸ್ತಿಯೇನು?"

ವಿಶ್ವೇಶ್ವರಿ ಕಿಟಿಕೆಯ ಹೊರಗೆ ನಿಟ್ಟಿಸಿ ರಮೆಯ ತಿರಿಗಟ್ಟಿದ ಕೂದಲ ರಾಸಿಯಲ್ಲಿ ಬೆರಳನ್ನು ನಡೆಯಿಸುತ್ತಾ ನಡೆಯಿಸುತ್ತಾ ಇರುವಾಗ ಅವಳ ಮುಚ್ಚಿದ ಕಂಗಳೆರಡರ ಕೊನೆಗಳಿಂದ ಕಂಬನಿ ಹನಿಗಟ್ಟಿ ಉರುಳುತ್ತಿದ್ದುದನ್ನು ಧಟ್ಟನೆ ಕಂಡಳು. ಸ್ನೇಹದಿಂದ ಅದನ್ನೊರಸಿ ಎಂದಳು. "ಆದರೆ ನಿನ್ನ ಕೈವಾಡವಲ್ಲಮ್ಮ. ಹೆಂಗಸಿಗೆ ಇಷ್ಟು ದೊಡ್ಡ ಕಳಂಕದ ಬೆದರಿಕೆ ಇಟ್ಟು ನಿನ್ನ ಮೇಲೆ ಅತ್ಯಾಚಾರ ಮಾಡಿದ ಕಾಪುರುಷರಿಗೆ ಇದಕ್ಕೆಲ್ಲಾ ದೊಡ್ಡ ದಂಡನೆ ಸಲ್ಲತಕ್ಕದ್ದು ಅಮ್ಮಾ. ನಿನಗೇನೂ ಇದಕ್ಕಾಗಿ ಅನುಭವಿಸಬೇಕಾದದ್ದು ಕಾಣೆ" ಎಂದು ಅವಳು ತಿರಗೂ ಅವಳ ಕಂಗಳನ್ನು ಒರಸಿದಳು! ಅವಳ ಇದೊಂದೆ ಸಮಾಧಾನವಚನದಿಂದ ರಮೆಯ ತಡೆದ ಕಣ್ಣೀರು ಈ ಸಲ ಕೋಡಿ ಕೋಡಿಯಾಗಿ ಹರಿಯಿತು. ಕೊಂಚ ಹೊತ್ತಾದ ಮೇಲೆ ಅವಳೆಂದಳು. "ಆದರೆ ದೊಡ್ಡಮ್ಮ ಅವರಂತೂ ಅವನ ವೈರಿಗಳು. ಅವರೆನ್ನಬಹುದು 'ವೈರಿಯನ್ನು ಎಂತಾದರೂ ಸರಿಯೆ ಬಡಿಯಬೇಕು, ಅದಕ್ಕೆ ದೋಷವಿಲ್ಲ' ಎಂದು. ನನಗಾದರೆ ಆ ಕೈಫಿಯತ್ತಂತೂ ಇಲ್ಲವಲ್ಲ."

"ನಿಂಗೆ ತಾಪೆ ಏಕಿಲ್ಲಮ್ಮಾ ?" ಪ್ರಶ್ನೆ ಹಾಕಿ ಅವಳು ನೋಟವನ್ನು ತಗ್ಗಿಸಿದೊಡನೆಯೆ ಆಕಸ್ಮಾತ್ ಅವಳ ಕಂಗಳ ಮೇಲೆ ಮಿಂಚು ಝಳಪಿ ಹೋದಂತೆಯಾಯಿತು. ಮೊಗ ಮರೆಮಾಚಿಕೊಂಡು ಇಷ್ಟು ದಿನಗಳೂ ಅವಳ ಮನಸ್ಸಿನಲ್ಲಿ ಅಕಾರಣವಾಗಿ ಅಡಗಿದ್ದ ಸಂಶಯ ಅವಳೆದುರಿಗೆ ಬಿದ್ದು ಒಂದೆ ಪೆಟ್ಟಿಗೆ ನೆಟ್ಟನೆ ನೇರವಾಗಿ ನಿಂತುಕೊಂಡಿತು. ಇಂದು ಅವಳನ್ನು ಗುರ್ತಿಸಿದವಳಾಗಿ, ಗಳಿಗೆಹೊತ್ತು ವಿಶ್ವೇಶ್ವರಿ ವೇದನೆ ಯಿಂದಲೂ ವಿಸ್ಮಯದಿಂದಲೂ ಸ್ತಂಭಿತಳಾಗಿ ಹೋದಳು. ರಮೆಯ ಹೃದಯದ ವ್ಯಥೆ ಅವಳಿಗಿನ್ನೂ ಅಗೋಚರವಾಗಿರಲಿಲ್ಲ! ರಮೆ ಕಣ್ಣು ಮುಚ್ಚಿದ್ದಳು; ವಿಶ್ವೇಶ್ವರಿಯ ಮುಖಭಾವವನ್ನು ನೋಡಲಾಗಲಿಲ್ಲ. "ದೊಡ್ಡಮ್ಮಾ." ಎಂದು ಕರೆದಳು.

ದೊಡ್ಡಮ್ಮ ಚಕಿತಳಾಗಿ ಅವಳ ತಲೆಯನ್ನಲ್ಲಾಡಿಸಿ ದನಿಗೊಟ್ಟಳು! ರಮೆಯೆಂದಳು. "ಒಂದು ಮಾತು ನಿನ್ನಲ್ಲಿ ಇವತ್ತು ಒಪ್ಪಿಕೊಳ್ಳುತ್ತೇನೆ, ದೊಡ್ಡಮ್ಮ. ಪೀರಪುರದ ಜಾಫರಾಲಿ ಮನೆಯಲ್ಲಿ ಸಂಜೆಯ ಮೇಲೆ ಗ್ರಾಮದ ಹುಡುಗರೆಲ್ಲಾ ಒಟ್ಟುಗೂಡಿ ರಮೇಶಣ್ಣನ ಮಾತಿನಂತೆ ಒಳ್ಳೆಯ ಆಲೋಚನೆಗಳನ್ನೆ ಮಾಡುತ್ತಿದ್ದರು; ಬಡಮಾಸಿಗಳ ದಳವೆಂದು ಪೋಲೀಸರಿಗೆ ಅವರನ್ನು ಹಿಡಿದುಕೊಡುವುದಕ್ಕೆ ಚಳವಳಿಯೊಂದು ನಡೆ ಯುತ್ತಿತ್ತು; ನಾನು ಆಳನ್ನಟ್ಟಿ ಅವರಿಗೆ ಎಚ್ಚರಕೊಟ್ಟೆ. ಕಾರಣ ಪೋಲೀಸರಿಗೆ ಬೇಕಾದುದೇ ಇದು. ಅವರ ಕೈಗೊಂದು ಸಲ ಬಿದ್ದ ಮೇಲಂತೂ ಉಳಿಗಾಲವಿಲ್ಲ!"

ಕೇಳಿ ವಿಶ್ವೇಶ್ವರಿ ಗಡಗಡನೆ ನಡುಗಿದಳು. "ಏನಂದೆಯೆ? ಸ್ವಂತ ಗ್ರಾಮದೊಳಗೇನೆ ಪೋಲೀಸರ ಹಾವಳಿಯನ್ನು ವೇಣಿ ಸುಳ್ಳುಸುಳ್ಳಾಗಿ ತಂದು ಹಾಕಿಕೊಳ್ಳಬೇಕೆಂತಿದ್ದನೆ?"

ರಮೆಯೆಂದಳು. "ನನ್ನ ಮನಸ್ಸಿಗೆ ತೋರುತ್ತದೆ, ದೊಡ್ಡಣ್ಣ ನಿಗೆ ಈ ಶಾಸ್ತಿ ಅದರ ಫಲವೆ ಎಂತ. ನನ್ನನ್ನು ಮನ್ನಿಸಲಾರದೇತೆ, ದೊಡ್ಡಮ್ಮಾ?"

ವಿಶ್ವೇಶ್ವರಿ ತಲೆಬಾಗಿ ಸದ್ದಿಲ್ಲದಂತೆ ರಮೆಯ ಹಣೆಗೆ ಮುದ್ದಿಟ್ಟಳು. "ಅವನ ತಾಯಿಯಾಗಿ ಇದನ್ನು ಮನ್ನಿಸದೆ ಹೋದೆನಾದರೆ ಮನ್ನಿಸು

ವರಿನ್ನಾರು? ನಾನು ಹರಸುತ್ತೇನೆ, ದೇವರು ನಿನಗೆ ಇದಕ್ಕೆ ಪುರಸ್ಕಾರ ಕೊಡಲಿ!" ಎಂದಳು.

ರಮೆ ಕೈಯಿಂದ ಕಣ್ಣೊರಸಿಕೊಂಡು "ನನಗಿದೊಂದೆ ಸಮಾಧಾನ, ದೊಡ್ಡಮ್ಮ. ಅವನು ಹಿಂದಿರುಗಿ ಬಂದು ನೋಡುವನು, ಅವನ ಸುಖದ ಕ್ಷೇತ್ರ ತಯಾರಾಗಿದೆ. ಅವನು ಬೇಕೆನ್ನುತ್ತಿದ್ದದ್ದು, ಅವನ ಈ ನಾಡಿನ ರೈತರೂ ಕೂಲಿಗಾರರೂ ಈಸಲ ನಿದ್ರೆಹರಿದು ಎದ್ದು ಕೂಡುವುದು, ಅದಾಗಿದೆ. ಅವನನ್ನು ಅವರು ಅರಿತುಕೊಂಡಿದ್ದಾರೆ; ಅವನನ್ನು ಪ್ರೀತಿಸಿದ್ದಾರೆ. ಈ ಪ್ರೀತಿಯ ಆನಂದದೊಳಗೆ ಅವನು ನನ್ನ ಅಪರಾಧವನ್ನು ಮರೆಯಲಾರನೆ, ದೊಡ್ಡಮ್ಮಾ?" ಎಂದು ಕೇಳಿದಳು.

ವಿಶ್ವೇಶ್ವರಿ ಮಾತನಾಡಲಾರದೆ ಹೋದಳು. ಅವಳ ಕಣ್ಣಿಂದ ಬಂದು ತೊಟ್ಟು ಕಣ್ಣೀರು ರಮೆಯ ಹಣೆಯಮೇಲೆ ಬಿದ್ದಿತು ಅಷ್ಟೆ. ಆಮೇಲೆ ಬಹು ಕ್ಷಣಗಳ ತನಕ ಇಬ್ಬರೂ ಸ್ತಬ್ಧರಾಗಿದ್ದರು. ರಮೆ ಕೂಗಿದಳು. "ದೊಡ್ಡಮ್ಮಾ?"

ವಿಶ್ವೇಶ್ವರಿಯೆಂದಳು. "ಏನಮ್ಮಾ!"

ರಮೆಯೆಂದಳು. "ಸುಮ್ಮನೆ ನಾವು ದೂರವಾದುದೊಂದು ತಾವಿಗೆ ಹೋಗಲಾಗದೆ ನಿನ್ನನ್ನು ನಾವಿಬ್ಬರೂ ಪ್ರೀತಿಸುತ್ತಿದ್ದೆವು."

ವಿಶ್ವೇಶ್ವರಿ ತಿರಗೂ ಬಗ್ಗಿ ಅವಳ ಹಣೆಯನ್ನು ಮುತ್ತಿಟ್ಟಳು.

ರಮೆಯೆಂದಳು, "ಅದೆ ಬಲದಮೇಲೆ ನಾನು ತಗಾದೆಯೊಂದನ್ನು ನಿನ್ನಲ್ಲಿರಿಸಿ ಹೋಗುತ್ತೇನೆ. ನಾನು ಇನ್ನು ಇಲ್ಲದೆ ಇರುವಾಗ ಆಗಲೂ ಅವನು ನನ್ನನ್ನು ಕ್ಷಮಿಸಲಾರದೆ ಹೋದಲ್ಲಿ ಬರಿ ಈ ಮಾತನ್ನು ನನ್ನ ಪರವಾಗಿ ಅವನಿಗೆ ಹೇಳಬೇಕು, ದೊಡ್ಡಮ್ಮ; ನನ್ನನ್ನು ಎಷ್ಟುಮಟ್ಟಿನ ಕೆಟ್ಟವಳೆಂದು ಅವನು ತಿಳಿದಿದ್ದಾನೆಯೊ ಅಷ್ಟು ಕೆಟ್ಟವಳು ನಾನಾಗಿರಲಿಲ್ಲ, ಮತ್ತು ಅವನಿಗೆ ಎಷ್ಟೆಷ್ಟು ದುಃಖಕೊಟ್ಟೆನೊ ಅಷ್ಟಕ್ಕಿಂತ ಹೆಚ್ಚಿಗೇಯೆ ನಾನು ಪಡೆದುಕೊಂಡೆ; ನಿನ್ನ ಬಾಯಿಯಲ್ಲಿನ ಈ ಮಾತನ್ನಾದರೆ ಅವನು ಅಪನಂಬುಗೆ ಮಾಡಲಾರ."

ವಿಶ್ವೇಶ್ವರಿ ಬೋರಲುಬಿದ್ದು ಎದೆಯಿಂದ ರಮೆಯನ್ನು ಬಿಗಿದು ಹಿಡಿದು "ಸಡಿಯಮ್ಮಾ, ನಾವು ಯಾವುದಾದರೊಂದು ತೀರ್ಥಸ್ಥಾನಕ್ಕೆ

ಹೋಗಿರೋಣ! ಎಲ್ಲಿ ವೇಣಿಯಿಲ್ಲವೊ, ರಮೇಶನಿಲ್ಲವೊ, ಎಲ್ಲಿ ಕಣ್ಣು ಬಿಟ್ಟೊಡನೆಯೆ ದೇವರ ಗುಡಿಗೋಪುರಗಳು ಕಾಣುವವೋ—ಅಲ್ಲಿಗೆ ಹೋಗೋಣ. ನನಗೆ ಎಲ್ಲವೂ ತಿಳಿಯಿತು, ರಮೆ. ಪಯಣದ ದಿನ ನಿನ್ನದು ಮುಂದರಿದು ಬಂದೆ ಇದ್ದವೆ, ಅಮ್ಮಾ, ಈ ವಿಷಯವನ್ನು ಎದೆಯ ತುಂಬಾ ತುಂಬಿಕೊಂಡು ಸುಟ್ಟು ಬೂದಿಯಾಗಿ ಅಲ್ಲಿಗೆ ಹೋದರೆ ನಡೆಯದು. ನಾವು ಬ್ರಾಹ್ಮಣ ಹೆಂಗಸರು. ಅಲ್ಲಿಗೆ ಹೋಗುವದಿನ ನಾವು ಅವರಿಗೆ ತಕ್ಕಂತೆಯೆ ಹೋಗಿ ನಿಲ್ಲಬೇಕಾಗುವುದು.'' ಎಂದು ಅತ್ತು ಬಿಟ್ಟಳು.

ರಮೆ ಬಹಳ ಹೊತ್ತು ಸುಮ್ಮನೆ ಬಿದ್ದುಕೊಂಡಿದ್ದು ಉಕ್ಕಿ ಬರುವ ನಿಟ್ಟುಸಿರೊಂದನ್ನು ಸ್ವಾಧೀನಕ್ಕೆ ತಂದುಕೊಳ್ಳುತ್ತಾ ಇಷ್ಟು ಮಾತ್ರವೆ ಹೇಳಿದಳು. ''ನಾನೂ ಹಾಗೆಯೆ ಮಾಡಿಕೊಂಡು ಹೋಗಬೇಕೆಂತಿದ್ದೇನೆ, ದೊಡ್ಡಮ್ಮ,''

## ೧೮

ಕಾರಾಗಾರದ ಪೌಳಿಯ ಹೊರಗೆ ಅವನ ದುಃಖವನ್ನೆಲ್ಲಾ ಸಾರ್ಥಕಮಾಡಲು ಭಗವಂತ ಮಾಡಿಟ್ಟಿದ್ದ ತಯಾರಿಯನ್ನು ನೋಡಿದರೆ ತನ್ನ ಅತ್ಯಂತ ಹುಚ್ಚು ಹತ್ತಿದ ವಿಕಾರದಲ್ಲಿ ಸಹ ಇಷ್ಟರಮಟ್ಟಿನ ಮಾರ್ಪಾಟಿನ ಆಶೆಯು ರಮೇಶನಿಗಿರಲಿಲ್ಲವೆಂತಲೆ ಹೇಳಬೇಕು. ಆರುತಿಂಗಳ ಸಶ್ರಮಾವರೋಧವಾದಮೇಲೆ ಮುಕ್ತನಾಗಿ ಜೈಲಿನ ಹೊರಗೆ ಕಾಲಿಟ್ಟೊಡನೆಯೆ ಅವನ ಕಣ್ಣುಗಳಿಗೆ ಬಿತ್ತು—ವ್ಯಾಪಾರ—ಭಾವನೆಗೆ ಮೀರಿದುದು! ಸ್ವಯಂ ವೇಣೀ ಘೋಷಗೇರಿ ತಲೆಗೆ ಮುಂಡಾಸನ್ನು ಸುತ್ತಿ ಎಲ್ಲರಗಿಂತ ಮುಂದೆ ನಿಂತಿದ್ದಾನೆ! ಅವನ ಹಿಂಗಡೆ ಎರಡು ವಿದ್ಯಾಲಯಗಳ ಮೇಷ್ಟರುಗಳು, ಪಂಡಿತರು ಮತ್ತು ಹುಡುಗರ ದಳ ಮತ್ತು ಹೀಗೆಯೆ ಕೆಲಬರು ಹಿಂದುಗಳೂ, ಮತ್ತು ಕೆಲವರು ಮುಸಲ್ಮಾನ ರೈತರು. ವೇಣಿ ರಮೇಶನನ್ನು ಬಿಗಿದಪ್ಪಿ ಬಿಕ್ಕಿ ಬಿಕ್ಕಿ ಅಳುವ ದನಿಯಲ್ಲಿ ಎಂದನು. ''ರಮೇಶು, ಎಲೊ ತಮ್ಮ, ಕರುಳ ಸೆಳತ ಎಂತಹದೆಂಬುದನ್ನು ಈಸಲ ಅರಿತುಕೊಂಡೆ. ವಾಸುದೇವ ಕಳ್ಳಂಬಿಯ ಮಗಳು ಆಚಾರ್ರ

ತಾಯಿಗಂಡನ್ನ ಕೈಲಿ ಹಾಕಿಕೊಂಡು ಹೀಗೆ ಹಗೆ ಸಾಧಿಸುತ್ತಾಳೆ, ನಾಚಿಕೆ-ಹೇಚಿಗೆ ಗಾಳಿಪಟಮಾಡಿ ತಾನೆ ಬಂದು ಸುಳ್ಳು ಸಾಕ್ಷಿ ಬೊಗಳಿ ಇಷ್ಟು ಕಷ್ಟ ಕೊಡುತ್ತಾಳೆಂತ ನನಗೆ ತಿಳಿದಿದ್ದರೂ ಆಗ ನಾನು ಕಿವಿಗೊಡಲಿಲ್ಲ; ದೇವರದಕ್ಕೆ ನನಗೆ ತಕ್ಕ ಶಾಸ್ತಿ ಕೊಟ್ಟಿಕೊಟ್ಟ. ಜೈಲಿ ನಲ್ಲಿ ನೀನಿದ್ದದ್ದು ಚನ್ನೆ ಆಯಿತು; ಹೊರಗೆ ಈ ಆರು ತಿಂಗಳೂ ನಾನಂತೂ ಹತ್ತಿಯಲ್ಲಿನ ಬೆಂಕಿಯಾಗಿ ಸುಟ್ಟು ಬೂದಿಯಾದೆ!"

ರಮೇಶನಿಗೆ ಏನು ಮಾಡಬೇಕು ಏನೆನ್ನಬೇಕು, ಯಾವದೂ ತೋಚದೆ ಮಂಕಾಗಿ ನಿಟ್ಟಿಸಿ ನಿಂತಿದ್ದನು. ಹೆಡ್‌ಮಾಸ್ಟರು, ವನಮಾಲಿ ಪಾಠಕ ಒಂದೆ ಪೆಟ್ಟಿಗೆ ನೆಲದಲ್ಲಿ ಬಿದ್ದುರುಳಿ ರಮೇಶನ ಪಾದಧೂಳಿಯನ್ನು ತೆಗೆದು ತಲೆಗೆ ಮುಡಿದನು. ಅವನ ಹಿಂದಿದ್ದ ದಳ ಆಗ ಮುಂದೆ ಸರಿದು ಕೆಲವರು ಹರಸುವುದು, ಕೆಲವರು ಸಲಾಂ ಮಾಡುವುದು, ಕೆಲವರು ಪ್ರಣಾಮ ಮಾಡುವ ನಿಷ್ಠೆಯಿಂದ ದಾರಿಯನ್ನೆಲ್ಲಾ ಉತ್ತುಬಿಟ್ಟರು. ವೇಣಿಯ ಅಳುವು ಇನ್ನೂ ಕಟ್ಟಿಏರಿತು. ಕಣ್ಣೀರಿಂದ ಗಂಟಲುಕಟ್ಟಿದ ದನಿಯಲ್ಲಿ ಬಿಕ್ಕಿ ಬಿಕ್ಕಿ ಎಂದನು. "ಅಣ್ಣನ ಮೇಲೆ ಸಿಟ್ಟಾಗಬೇಡ ತಮ್ಮ, ಮನೆಗೆ ನಡೆ. ಅಮ್ಮ ಅತ್ತತ್ತು ಕಂಗಳೆರಡನ್ನೂ ಇಂಗಿಸಿ ಕೊಳ್ಳುತ್ತಿದ್ದಾಳೆ!"

ಕುದುರೆ ಸಾರೋಟು ನಿಂತಿತ್ತು. ರಮೇಶ ಹೊತ್ತುಗಳೆಯದೆ ಅದರಲ್ಲಿ ಹತ್ತಿಕೂತನು. ವೇಣಿ ಎದುರಿನ ಆಸನದಲ್ಲಿ ಕೂತು ತಲೆಗೆ ಕಟ್ಟಿದ್ದ ಮುಂಡಾಸನ್ನು ಕಿತ್ತೆಸೆದನು. ಗಾಯವಾಗಿದ್ದರೂ ಪೆಟ್ಟಿನ ಗುರುತು ಬರೆ ತೀಡಿದಂತಿದೆ! ರಮೇಶ ಅಚ್ಚರಿಯಾಗಿ, "ಅದೇನು ದೊಡ್ಡಣ್ಣ?" ಎಂದು ಕೇಳಿದನು.

ವೇಣಿ ಉದ್ದವಾದೊಂದು ನಿಟ್ಟುಸಿರನ್ನು ಬಿಟ್ಟು ಬಲಗೈ ಬೆರಳು ಮುಂದೆ ಮಾಡಿ ಎಂದನು. "ತಪ್ಪು ಹಾಕುವುದಾರಮೇಲೆ? ನನ್ನ ಪಾಪಕ್ಕೆ ಶಾಸ್ತಿ! ಆದರೆ ಅದನ್ನು ಇನ್ನು ಹೇಳಿ ಏನಾದೀತು?" ಎಂದು ಮೊಗದ ಮೇಲೆ ಆಳವಾದ ವೇದನೆಯ ಆಭಾಸವನ್ನು ಅರಳಿಸಿ ಸುಮ್ಮ ನಿದ್ದನು. ಅವನ ಬಾಯಿಂದಲೆ ಈ ಒಪ್ಪಿಗೆ ಮಾತುಗಳನ್ನು ಕೇಳಿ ರಮೇಶನ ಮನಸ್ಸು ಕರಗಿಹೋಯಿತು. ಅವನು ತನ್ನಲ್ಲೇ ಅಂದುಕೊಂಡನು.

' ಏನೊ ಆಗಿಯೆ ಇದೆ. ' ಆದ್ದರಿಂದಲೆ ಆ ಮಾತನ್ನು ಕೇಳಲಿಕ್ಕೆ ಇನ್ನೂ ಬಲವಂತ ಮಾಡಲಿಲ್ಲ. ಆದರೆ ವೇಣಿ ಏತಕ್ಕೋಸ್ಕರ ಈ ಭೂಮಿಕೆಯನ್ನು ಮಾಡಿದ್ದನೊ, ಅದು ಕಳೆದು ಹೋಗುತ್ತಿದೆಯೆಂದುಕೊಂಡು ತಾನೆ ಮನಸ್ಸಿನಲ್ಲಿ ಚಟಿಗುಟ್ಟುತ್ತಿದ್ದನು. ನಿಮಿಷೆರಡುನಿಮಿಷ ಸದ್ದಿಲ್ಲದೆ ಕಳೆದ ಮೇಲೆ, ಅವನು ತಿರಗೂ ದೊಡ್ಡದೊಂದು ನಿಟ್ಟುಸಿರಿಟ್ಟು ರಮೇಶನ ಮನೋಯೋಗವನ್ನು ಸೆಳೆದು ಮೆಲ್ಲ ಮೆಲ್ಲನೆ ಹೇಳಿದನು. " ನನ್ನದು ಇದೊಂದು ಹುಟ್ಟುದೋಷ; ಏನಮಾಡಲಿ ಮನಸಲ್ಲೊಂದು ಬಾಯಿಲಿ ಮತ್ತೊಂದು ಆಡಲಾರೆ! ಮನಸ್ಸಲ್ಲಿ ಮಾಡಿಕೊಂಡದ್ದನ್ನು ನಾಲ್ಕು ಜನರಂತೆ ಮರೆಮಾಚಲು ಬಾರದೆಂತಲೆ ಎಷ್ಟೋ ಶಾಸ್ತಿಯನ್ನುಂಡೆ; ಆದರೂ ನನಗೆ ಎಚ್ಚರ ಬರಲಿಲ್ಲ. " ರಮೇಶ ಸುಮ್ಮನೆ ಕೇಳುತ್ತಿದ್ದಾನೆಂದು ನೋಡಿಕೊಂಡು ವೇಣಿ ದನಿಯನ್ನು ಇನ್ನೂ ಮೃದು ಮತ್ತು ಗಂಭೀರ ಮಾಡಿ ಹೇಳುತ್ತ ಹೋದನು. " ನನ್ನ ದೋಷಗಳೊಳಗೆ ಆ ದಿನ ಮನಸ್ಸಿನ ಸಂಕಟವನ್ನು ಮುಚ್ಚಲು ಸಾಗದೆ ಅಳುತಳುತ ಅಂದು ಬಿಟ್ಟೆ ' ರಮೆ, ನಾವೇನು ನಿನಗೆ ಅಪರಾಧ ಮಾಡಿದ್ದು, ಇಂಥಾ ವಿಪತ್ತು ನಮಗೆ ತಂದು ಹಾಕಿದೆಯಲ್ಲಾ. ಜೈಲಾಯಿತು ಅಂತ ಕೇಳಿದರೆ ಅಮ್ಮ ಒಂದೆ ಸರ್ತಿಗೆ ಪ್ರಾಣ ಕಳಕೊಳ್ಳುತ್ತಾಳೆ. ನಾವು ಅಣ್ಣತಮ್ಮಂದಿರು ಆಸ್ತಿಗೆ ಕಾದಿ ಬೂದಿ ಹೊಯ್ಕೊಳ್ಳುತ್ತೇವೆ! ಏನು ಮಾಡಲಿ ಅವನು ನನ್ನ ತಮ್ಮ! ನೀನು ಒಂದೇ ಪೆಟ್ಟಿನಿಂದ ನನ್ನ ತಮ್ಮ ನನ್ನ ತಾಯಿ ಇಬ್ಬರನ್ನೂ ಕೊಂದೆಯಲ್ಲೆ! ಆದರೇನಾಯಿತು, ನಿರ್ದೋಷಿಗಳಿಗೆ ದೇವರು ಇದ್ದಾನೆ. " ಎಂದು ಅವನು ಗಾಡಿಯ ಹೊರಗಡೆ ಆಕಾಶವನ್ನು ನಿಟ್ಟಿಸಿ ಇನ್ನೊಂದು ಸಲ ದೇವರಿಗೆ ಮರೆ ಇಟ್ಟನೇನೊ. ರಮೇಶ ಈ ದೋಷಾರೋಪಣೆಗೆ ಮನಗೊಡದೆ ಹೋದರೂ ಮನಸ್ಸುಕೊಟ್ಟು ಕೇಳುತ್ತಿದ್ದನು. ವೇಣಿ ಕೊಂಚ ತಡೆದು ಎಂದನು. " ರಮೇಶ, ರಮೆಯ ಆ ಉಗ್ರ ಮೂರ್ತಿ ಮನಸ್ಸಿಗೆ ಬಂದರೆ ಈಗಲೂ ಎದೆ ಡವಡವಗುಟ್ಟುತ್ತದೆ; ' ರಮೇಶನಪ್ಪ ನಮ್ಮಪ್ಪನ ಜೈಲಿಗಿಡಲು ಹೋಗಿರಲಿಲ್ಲವೆ? ಕೈಲಾಗಿದ್ದರೆ ಬಿಡುತ್ತಾ ಇದ್ದನೊ?' ಹೆಂಗಸಿಗೆ ಎಷ್ಟು ದರ್ಪ! ಇನ್ನು ಸಹಿಸೋಕೆ ಆಗಲ್ಲ, ರಮೇಶ. ನನಗೂ ರೇಗು ಹತ್ತಿ ಅಂದೆಬಿಟ್ಟೆ, ಒಳ್ಳೇದು, ಹಿಂದಕ್ಕೆ

ಬರಲಿ ಅವನು, ಆ ಮೇಲೆ ಇದರ ವಿಚಾರಣೆ ಆಗುತ್ತೆ!" ಎಂದು ಹಲ್ಲು ಮಸೆಯುತ್ತ ಹೇಳಿದಳು.

ಇಷ್ಟರವರೆಗೂ ವೇಣಿಯ ಮಾತುಗಳನ್ನು ರಮೇಶ ಹಿಡಿಯಲಾರದೆ ಇದ್ದನು. ಯಾವಾಗ ತನ್ನ ತಂದೆ ರಮೆಯ ತಂದೆಯನ್ನು ಜೈಲಿಗೆ ಇಡಲು ಯತ್ನಮಾಡಿದ್ದನೊ ಅದನ್ನು ಅವನರಿಯ; ಆದರೆ ಇದೆ ಮಾತೆ ಅವನು ದೇಶಕ್ಕೆ ಅಡಿಯಿಟ್ಟೊಡನೆಯೆ ರಮೆಯ ಚಿಕ್ಕಿಯ ಬಾಯಲ್ಲಿ ಕೇಳಿದ್ದು ಅವನ ನೆನಪಿಗೆ ಬಂತು. ಆಗ ಕಳೆದು ಹೋದ ಘಟನೆಗಳನ್ನು ಕೇಳುವು ದಕ್ಕೆ ಕಿವಿ ನೆಟ್ಟಗಾಗಿ ಎಚ್ಚತ್ತನು. "ಖೂನಿ ಮಾಡುವುದು ಅವಳಿಗೆ ರೂಢಿತಾನೆ! ದೊಣ್ಣೆಗಾರ ಅಕಬರನ್ನ ಕಳುಹಿಸಿದ್ದಳು, ಮನಸ್ಸಿನಲ್ಲಿ ಇಲ್ಲವೆ? ನನ್ನ ಹತ್ತಿರಂತೂ ಆ ಚಾಲಾಕು ಬೇಯಲಿಲ್ಲ, ಅದಕ್ಕೆ ಬದಲಿಗೆ ನೀನೆ ತಲೆಕೆಳಗುಮಾಡಿ ಅವನಿಗೆ ಬೆಸಿಗೆಕೊಟ್ಟೆ. ಆದರೆ ನನ್ನ ನೋಡು? ಈ ನಿತ್ರಾಣ." ಎಂದು ವೇಣಿ ಕೊಂಚ ಯೋಚನೆ ಮಾಡಿಕೊಂಡು, ತ್ರಿಪ್ಪ, ಕಾಳನ ಮಗ, ಮಾಡಿದ ಹಗರಣೆಯನ್ನು ತನ್ನ ಒಳಗಣ ಕಗ್ಗತ್ತ ಲೊಳಗಿಂದ ಹೊರಗೆ ಮಾಡಿ ತನ್ನ ಭಾಷೆಯಿಂದ ಒಂದೊಂದಾಗಿ ಮಣಿ ಗಂಟಿಕ್ಕಿ ವಿವರಿಸಿದನು. ರಮೇಶ ಉಸಿರು ಬಿಗಿಹಿಡಿದು ಕೇಳಿದನು. "ಆ ಮೇಲೆ?"

ವೇಣಿ ಕೊಳಕುಮೊಗದಿಂದ ನಸುನಕ್ಕು ಎಂದನು. "ಆ ಮೇಲೆ ಏನು ಮನಸ್ಸಿನಲ್ಲಿದೆಯಣ್ಣ! ಯಾರೊ ಹೇಗೊ ಮಾಡಿ ನನ್ನನ್ನು ಆಸ್ಪ ತ್ರೆಗೆ ಸಾಗಿಸಿಕೊಂಡು ಹೋದರು; ಅದೊಂದೂ ನಾನರಿಯೆ. ಹತ್ತು ದಿನಗಳ ಮೇಲೆ ಜ್ಞಾನ ಒಂದು ನೋಡಿದೆ, ಆಸ್ಪತ್ರೆಯಲ್ಲಿ ಬಿದ್ದಿದ್ದೇನೆ. ಈ ಯಾತ್ರೇಲಿ ಬದುಕಿಕೊಂಡದ್ದು ಕೇವಲ ನಮ್ಮಮ್ಮನ ಪುಣ್ಯ ಇಂಥಾ ತಾಯಿ ಇನ್ನೂ ಇದ್ದಾಳೆಯೆ, ರಮೇಶ?"

ರಮೇಶ ಒಂದು ಮಾತನ್ನೂ ಆಡಲಾರದೆ ಹೋದ. ಕಟ್ಟಿಗೆಯ ಗೊಂಬೆಯಂತೆ ಬಿಗಿದು ಕೂತಿದ್ದನು. ಅವನ ಕೈಗಳ ಬೆರಳುಗಳು ಹತ್ತೂ ಜಡಿತವಾಗಿ ವಜ್ರಕಠಿಣ ಮುಷ್ಟಿಯಲ್ಲಿ ಮುಗಿದುಕೊಂಡವು. ಅವನ ತಲೆ ಯಲ್ಲಿ ಕೋಪ ಹೇಯಾಳಿಕೆಗಳು ಎಂತಹ ಭೀಷಣವಾದ ಬೆಂಕಿಯನ್ನು ಎಬ್ಬಿಸಿದವೋ ಆದರ ಅಳತೆ ಸಹ ಮಾಡಲು ಅವನಿಗೆ ಸಾಧ್ಯವಿಲ್ಲದೆ

ಹೋಯಿತು. ವೇಣಿ ಮಂದಮತಿಯೆಂಬುದೇನೋ ಬಲ್ಲ. ಅವನಿಗೆ ಅಸಾಧ್ಯವಾವುದೂ ಇಲ್ಲವೆಂಬುದು ಸಹ ಅವನರಿಯದೆ ಇರಲಿಲ್ಲ. ಆದರೆ ಇಹ ಸಂಸಾರದಲ್ಲಿ ಯಾವ ಮಾನವನಾದರೂ ಹೀಗೆ ಅಂಸಂಕೋಚವಾಗಿ ಈ ಬಗೆಯಾಗಿ ತಡಬಡೆಯಿಲ್ಲದೆ ಸುಳ್ಳನ್ನು ಉಚ್ಚರಿಸಲಾಗುತ್ತೆಂಬುದನ್ನು ಕಲ್ಪಿಸಿಕೊಳ್ಳುವಷ್ಟು ಅನುಭವ ಅವನಿಗೆ ಇರಲಿಲ್ಲ. ಆದುದರಿಂದಲೆ ರಮೆಯ ಸಮಸ್ತ ಅಪರಾಧವನ್ನೂ ಸತ್ಯವೆಂದು ನಂಬಿದನು!

ಅವನು ಹಳ್ಳಿಗೆ ಹಿಂದಕ್ಕೆ ಬಂದಮೇಲೆ ಗ್ರಾಮದಲ್ಲೆಲ್ಲಾ ಉತ್ಸವವೊಂದು ಹೂಡಿ ಹೋಯಿತು. ಪ್ರತಿದಿನ ಬೆಳಗು, ಮಧ್ಯಾಹ್ನ, ರಾತ್ರಿ ವರೆಗೂ ಇಷ್ಟೊಂದು ಜನಗಳು ಬಂದು ಹೋಗುವದು, ಇಷ್ಟೊಂದು ಮಾತು ಕಥೆಗಳು, ಇಷ್ಟೊಂದು ನಮ್ಮವರ ತಮ್ಮವರ ಲಗ್ಗೆ ಲಡಾಯಿ ಕೂಡಿ ಹೋಯಿತು, ಅವನಿಗೆ ಕಾರಾವಾಸದ ಗ್ಲಾನಿಯೇನು ಕೊಂಚ ಮನಸ್ಸಿನಲ್ಲಿ ಮಿಕ್ಕಿತ್ತೊ ಅದೆಲ್ಲಾ ನೋಡುತ್ತ ನೋಡುತ್ತಲೆ ಹರಿದು ಹೋಯಿತು. ಅವನಿಲ್ಲದಾಗ ಗ್ರಾಮದಲ್ಲಿ ದೊಡ್ಡದೊಂದು ಸಾಮಾಜಿಕ ಹೊಸ ಸೀರಿನ ಹೊಳೆ ಹರಿದು ಹೋಗಿದೆ; ಆ ವಿಷಯದಲ್ಲಿ ಸಂಶಯವೇನೂ ಇಲ್ಲ. ಆದರೆ ಈ ಕೆಲ ತಿಂಗಳೊಳಗೇನೆ ಇಷ್ಟುದೊಡ್ಡ ಬದಲಾವಣೆ ಹೇಗೆ ಸಂಭವವಾಯಿತೆಂದು ವಿಚಾರಿಸಲಾಗಿ ಅವನಿಗೆ ಹೊಳೆಯಿತು; ವೇಣಿಯ ಪ್ರತಿಕೂಲತೆಯಿಂದ ಅಡಿಗಡಿಗೆ ಪೆಟ್ಟುತಿಂದು ಕೆಲಸ ಮಾಡಲಾರದೆ ಹೆಪ್ಪುಗಟ್ಟಿಕೊಂಡಿದ್ದ ಶಕ್ತಿಯೆ ಅನುಕೂಲತೆಯನ್ನು ಪಡೆದು ಕರಗಿ ಇಮ್ಮಡಿ ವೇಗದಿಂದ ಪ್ರವಹಿಸಿದೆ.' ಎಂದು ವೇಣಿಯನ್ನು ಅವನು ಇಂದು ಚನ್ನಾಗಿ ಗುರ್ತಿಸಿದನು. ಇವನನ್ನು ಈ ಬಗೆಯ ಅನಿಷ್ಟಕಾರಿಯೆಂದು ತಿಳಿದೂನೂ ಹಳ್ಳಿಗರೆಲ್ಲಾ ಅವನಿಗೆ ಎಷ್ಟು ದೂರದವರೆಗೆ ಬಾಧ್ಯರೆಂಬುದು ಇಂದು ಅವನ ಕಣ್ಣಿಗೆ ಗೋಚರಿಸಿದಷ್ಟುಮಟ್ಟಿಗೆ ಹಿಂದೆಂದೂ ಆಗಿರಲಿಲ್ಲ. ಇವನ ವಿರೋಧದಿಂದ ರಕ್ಷಿತನಾಗಿ ರಮೇಶ ಮನಸ್ಸಿನಲ್ಲಿಯೆ ಸಮಾಧಾನ ಪಟ್ಟನು. ಬರಿ ಅಷ್ಟೆ ಅಲ್ಲದೆ ರಮೇಶನ ಮೇಲಿನ ಅನ್ಯಾಯದ ಅತ್ಯಾಚಾರಕ್ಕಾಗಿ ಗ್ರಾಮದವರೆಲ್ಲಾ ಮರ್ಮಾಹತರಾಗಿ ಮರುಗುತಲಿದ್ದಾರೆ; ಈ ಮಾತನ್ನು ಒಬ್ಬೊಬ್ಬರಾಗಿ ಗ್ರಾಮದವರೆಲ್ಲಾ ತಿಳುಹಿಸಿ ಹೋಗಿದ್ದಾರೆ. ಇವರ ಒಟ್ಟುಗೂಡಿದ ಸಹಾನು

ಭೂತಿಯನ್ನು ಪಡೆದು ಮತ್ತು ವೇಣಿಯನ್ನು ಸ್ವಪಕ್ಷದಲ್ಲಿ ಕಂಡು ಆನಂದೋತ್ಸಾಹದಿಂದ ಅವನ ಎದೆಯುಬ್ಬಿತು. ಆರು ತಿಂಗಳ ಮುಂಚೆ ಕೈಗೊಂಡು ನಡುವೆ ಕೈಬಿಟ್ಟು ಹೋಗಿದ್ದ ಕೆಲಸಗಳನ್ನೆಲ್ಲಾ ತಿರಗೂ ಪೂರಾ ದರ್ಪದಿಂದ ಹಿಡಿಯಲು ಗೊತ್ತುಮಾಡಿಕೊಂಡು, ರಮೇಶ ಕೊಂಚ ದಿನಗಳವರೆಟ್ಟಿಗೆ ತಾನೂ ಸಹ ಆಮೋದ ಆಹ್ಲಾದಗಳಿಗೆ ಮೈಗೊಟ್ಟು, ಸರ್ವತ್ರ, ಚಿಕ್ಕವರು ದೊಡ್ಡವರೆನ್ನದೆ ಎಲ್ಲರಲ್ಲೂ ಎಲ್ಲಾ ವಿಷಯಗಳ ಶೋಧನೆ ವಿಚಾರಗಳನ್ನು ಮಾಡುತ್ತಾ ಕಾಲಕಳೆಯುತ್ತಿದನು. ಒಂದು ವಿಷಯದಿಂದ ಮಾತ್ರ ಸರ್ವ ಪ್ರಯತ್ನದಿಂದಲೂ ತನ್ನನ್ನೂ ವಾರಿಯಾಗಿಟ್ಟುಕೊಳ್ಳುತ್ತಿದ್ದನು. ಅದು ರಮೆಯ ಪ್ರಸಂಗ. ಅವಳು ರೋಗದಿಂದ ಪೀಡಿತಳು; ಇದನ್ನು ಅವನು ಹಾದಿಯಲ್ಲೆ ಕೇಳಿದ್ದನು. ಆದರೆ ಆ ರೋಗ ಈಗ ಎಲ್ಲಿಯವರೆಗೆ ಬಂದಿದೆ ಅದರ ಯಾವ ವರ್ತಮಾನವನ್ನೂ ಅವನು ತಿಗೆದುಕೊಳ್ಳಲು ಅವನಿಗೆ ಬೇಕಿಲ್ಲ. ಅವಳ ಸಮಸ್ತ ಸಂಬಂಧದಿಂದ ಎಂದೆಂದಿಗೂ ತನ್ನನ್ನು ಕತ್ತರಿಸಿಕೊಂಡಿದ್ದಾನೆಂತ ಅವನ ಧೋರಣೆ. ಹಳ್ಳಿಗೆ ಬಂದೊಡನೆಯೆ ಬಾಯಿ ಬಾಯಿಂದ ಕೇಳಿದ್ದನು. 'ಈ ರಮೆಯೊಬ್ಬಳೆ ತನ್ನ ದುಃಖಕ್ಕೆಲ್ಲಾ ಮೂಲ,' ಎಂದು ಇದನ್ನು ಎಲ್ಲರೂ ಬಲ್ಲರು. ಸುತರಾಂ ಇಲ್ಲಿ ವೇಣಿ ಸುಳ್ಳುಮಾತು ಹೇಳಿಲ್ಲ; ಅದರಲ್ಲಿ ಅವನಿಗೆ ಇನ್ನು ಸಂದೇಹವಿರಲಿಲ್ಲ! ಐದಾರು ದಿನಗಳ ಮೇಲೆ ವೇಣಿ ಬಂದು ರಮೇಶನಲ್ಲಿ ಹಟವಿಡಿದು ಕೂತನು. ಪೀರಪುರದ ಒಂದು ದೊಡ್ಡ ಆಸ್ತಿಯ ಭಾಗದ ಬಾಬಿನಲ್ಲಿ, ಬಲು ದಿನದಿಂದಲೂ ರಮೆಯೊಡನೆ ಅವನಿಗೆ ಮುಚ್ಚುಮರೆಯಾಗಿ ಮನಸ್ಸಿನಲ್ಲಿ ವಿವಾದವಿತ್ತು. ಈ ಸಂಯೋಗದಲ್ಲಿ ಅದನ್ನು ಕೈವಶ ಮಾಡಿಕೊಳ್ಳುವುದೆ ಅವನ ಉದ್ದೇಶ್ಯ. ವೇಣಿ ಹೊರಗೆ ಬೇಕಾದದ್ದೆನಲಿ ಅವನು ಮನಸ್ಸಿನಲ್ಲಿ ರಮೆಗೆ ಭಯಪಡುತ್ತಿದ್ದನು. ಈಗ ಅವಳು ಹಾಸಿಗೆ ಹತ್ತಿಬಿದ್ದಿದ್ದಾಳೆ, ವ್ಯಾಜ್ಯ, ಕದನ ಮಾಡಲಾರಳು. ಇದರ ಮೇಲೆ ಅವರ ಮುಸಲಮಾನ ರೈತರು ರಮೇಶನ ಮಾತನ್ನು ತಳ್ಳಿಹಾಕರು. ಬೇಕಾದ್ದು ಮುಂದಕ್ಕೆ ಆಗಬಹುದು, ಸಧ್ಯದಲ್ಲಿ ಕಸಿದುಕೊಳ್ಳುವುದಕ್ಕೆ ಇಂತಹ ಅನುಕೂಲವಾದ ಸಮಯ ಇನ್ನು ದೊರೆಯದು, ಎಂದು ಅವನು ಒಂದೆ ಪಟ್ಟಿಗೆ ಜಡ್ಡು ಹಿಡಿದು ಕೂತನು.

ರಮೇಶ ಬೇರೆಗಾಗಿ ಅಸ್ವೀಕಾರ ಮಾಡುತಲೆ ವೇಣಿ ಬಹು ಬಗೆಯ ಯುಕ್ತಿಗಳನ್ನು ಹೂಡಿ ಕೊನೆಗೆಂದನು. "ಆಗವಲ್ಲದೇಕೆ? ನಿನ್ನ ಜುಟ್ಟು ಅವಳ ಕೈಗೆ ಸಿಕ್ಕಿದಾಗ ನಿನ್ನನ್ನು ಬಿಟ್ಟುಕೊಟ್ಟಳೆ, ಈಗ ನೀನು ಅವಳು ಕಾಯಿಲೆ ಎಂತ ಯೋಚಿಸಲಿಕ್ಕೆ, ನಿನ್ನನ್ನು ಅವಳು ಜೈಲಿಗಿಟ್ಟಳಲ್ಲಾ ಆಗ ನಿನಗೆ ತಾನೆ ಕಾಯಿಲೆ ಕಮ್ಮಿಯಾಗಿತ್ತೆ, ತಮ್ಮ!"

ಮಾತು ನಿಜ; ರಮೇಶ ಅಲ್ಲವೆನ್ನಲಾರದೆ ಇದ್ದ. ಆದರೂ ಅವನ ಮನಸ್ಸು ಅವಳಿಗೆ ಕೆಡಕು ಮಾಡಲೊಲ್ಲದು. ವೇಣಿ ಸಾವಿರಾರು ಕಹಿ ಮಾತುಗಳನ್ನು ಶಣಿಸಿದರೂ ರಮೆ ಅಸಹಾಯಳಾಗಿ ರೋಗಪೀಡಿತಳಾಗಿರುವುದು ಮನಸ್ಸಿಗೆ ಬಂದೊಡನೆಯೆ ಅವನ ಸಮಸ್ತ ವಿರುದ್ಧ ಶಕ್ತಿ ಸಂಕುಚಿತವಾಗಿ ತುಂಡುತುಂಡಾಗಿ ಬಿದ್ದು ಹೋಗುತ್ತಿತ್ತು. ಇದಕ್ಕೆ ಸ್ಪಷ್ಟವಾದ ಕಾರಣವನ್ನು ಅವನು ಹುಡಿಕಿಯೂ ಪಡೆಯದೆ ಇದ್ದನು. ರಮೇಶ ಮಾತನಾಡಲಿಲ್ಲ. ವೇಣಿ ಕೆಲಸ ನಡೆಯುತ್ತಿದೆಯೆಂದು ತಿಳಿದರೆ ಧೈರ್ಯವನ್ನು ಅವಲಂಬಿಸಲು ಬಲ್ಲನು. ಅವನು ಆಗಿನ ಮಟ್ಟಿಗೆ ಪೀಡಿಸುವುದನ್ನು ನಿಲ್ಲಿಸಿ ಹೊರಟು ಹೋದನು. ಈಸಲ ಇನ್ನೊಂದು ವಿಷಯ ರಮೇಶನ ದೊಡ್ಡ ದೃಷ್ಟಿಯನ್ನು ಸೆಳೆಯಿತು. ವಿಶ್ವೇಶ್ವರಿಗೆ ಯಾವಾಗಲೂ ಸಂಸಾರದಲ್ಲಿ ವಿಶೇಷ ಆಸಕ್ತಿ ಇರಲಿಲ್ಲ; ಅದು ಅವನಿಗೆ ಮೊದಲೆ ತಿಳಿದಿದ್ದಿತು; ಆದರೆ ಈಸಲ ಹಿಂದಿರುಗಿ ನೋಡಿದಾಗ ಆ ಅನಾಸಕ್ತಿ ಬೇಸರಕ್ಕೆ ಇಟ್ಟುಕೊಂಡಿದೆ ಎಂತ ಅವನಿಗೆ ತೋಚಿತು. ಕಾರಾಗಾರದಿಂದ ಬಿಡುಗಡೆಹೊಂದಿ ವೇಣಿಯ ಜೊತೆಯಲ್ಲಿ ಆದಿನ ಆ ಮನೆಯನ್ನು ಹೊಕ್ಕಿದ್ದನು. ಅಂದು ವಿಶ್ವೇಶ್ವರಿ ಆನಂದವನ್ನು ತೋರಿದ್ದಳು; ಗದ್ಗದ ಕಂಠದಿಂದ ಬಾರಿಬಾರಿಗೂ ಅಸಂಖ್ಯ ಆಶೀರ್ವಾದಗಳನ್ನು ಮಾಡಿದ್ದಳು; ಆದರೂ ಅದರಲ್ಲಿ ಏನೋ ಇತ್ತು; ಅದರಿಂದ ಅವಳು ವ್ಯಥೆಯನ್ನೆ ಪಟ್ಟಿದ್ದಳು. ಇವತ್ತು ಹಠಾತ್ತಾಗಿ ಮಾತುಮಾತಿನಲ್ಲಿ ಕಿವಿಗೆ ಬಿತ್ತು ವಿಶ್ವೇಶ್ವರಿ ಕಾಶೀವಾಸವನ್ನು ಸಂಕಲ್ಪಿಸಿ ಯಾತ್ರೆ ಹೊರಟಿದ್ದಾಳೆ, ಇನ್ನು ಹಿಂದಕ್ಕೆ ಬಾರಳು. ಕೇಳಿ ಅವನು ಬೆಚ್ಚಿಬಿದ್ದನು. ಅವನಿಗೇನೂ ತಿಳಿಯದಲ್ಲಾ. ಹಲವು ಕೆಲಸಗಳಿಂದ ಈ ಐದಾರು ದಿನಗಳೊಳಗೆ ಅವಳೊಡನೆ ಭೆಟ್ಟಿಯಾಗಲಿಲ್ಲ; ಆದರೆ ಭೆಟ್ಟಿಯಾದ ದಿನ ಅವಳು ಯಾವ ಮಾತನ್ನೂ

ಹೇಳಿರಲಿಲ್ಲ, ತನಗೆ ಅವಳ ಸ್ವಂತ ವಿಷಯವಾಗಲಿ ಅಥವಾ ಇತರರ ವಿಷಯವಾಗಲಿ ಹೇಳುವುದಕ್ಕೆ ಬೇಕಿಲ್ಲವೆಂಬುದನ್ನು ಅವನು ಬಲ್ಲನು. ಆದರೆ ಇವತ್ತಿನ ವಾರ್ತೆಯನ್ನು ಅವತ್ತಿನ ನಡತೆಯೊಡನೆ ಹೋಲಿಸಿ ನೋಡಲು ಆಸ್ತಿಯ ವಿಷಯ ಅವಳಿಗೆ ಬೇಸರವಾಗಿದ್ದುದರ ಅರ್ಥ ತಿಳಿಯಿತು. ಇನ್ನು ಅವನಿಗೆ ಲೇಶವೂ ಸಂಶಯವಿರಲಿಲ್ಲ; ದೊಡ್ಡಮ್ಮನು ಬೀಳಕೊಳ್ಳುತ್ತಾಳೆ! ಇದೇನು, ಅವಳು ಹೋಗುವುದನ್ನು ಮನಸ್ಸಿನಲ್ಲಿ ಮಾಚಿಕೊಂಡೊಡನೆಯೆ ಅವನೆರಡು ಕಣ್ಣುಗಳೂ ಕಂಬನಿದುಂಬಿದವು. ಇನ್ನು ಗಳಿಗೆ ಸಹ ತಡಮಾಡದೆ ಅವನು ಆ ಮನೆಗೆ ಬಂದು ನಿಂತನು; ಹೊತ್ತು ಆಗ ಒಂಬತ್ತುಹತ್ತು. ಕೋಣೆಯೊಳಹೊಗುತ್ತಿರಲು ದಾಸಿ ತಿಳುಹಿದಳು, ಅವಳು ಕಳ್ಳಂಬಿಯವರ ಮನೆಗೆ ಹೋಗಿದ್ದಾಳೆಂದು. ರಮೇಶ ಅಚ್ಚರಿಗೊಂಡು ಕೇಳಿದನು: "ಇಂತಹ ಹೊತ್ತಲ್ಲದ ಹೊತ್ತಿನಲ್ಲಿಯೆ?"

ಈ ದಾಸಿಯು ಬಹು ದಿನದ ಹಳಬಳು. ಅವಳು ಮೃದುವಾಗಿ ನಕ್ಕು ಹೇಳಿದಳು. ಅಮ್ಮಾವರಿಗೆ ಇನ್ನು ಹೊತ್ತು ಗೊತ್ತು ಬೇರೆಯೆ. ಅದಲ್ಲದಾ ಇವತ್ತು ಅವರ ಪುಟ್ಟರಾಯರಿಗೆ ಮುಂಜಿ ತಾನೆ."

ಜಯನ ಉಪನಯನ. ರಮೇಶನಿಗೆ ಇನ್ನೂ ಆಶ್ಚರ್ಯವಾಯಿತು. "ಎಲ್ಲಿ ಈ ಮಾತು ಯಾರಿಗೂ ತಿಳಿಯದು!"

ದಾಸಿ ಎಂದಳು, "ಅವರು ಯಾರನ್ನೂ ಕರೆಯಲಿಲ್ಲ. ಕರೆದರೂ ಯಾರೂ ಹೋಗಿ ಉಂಬೊಕಿಲ್ಲ, ರಮೆಯಕ್ಕನಿಗೆ ಮಠದ ಅಯ್ನೋರು ಗಳು ಹೊರಚ್ಚು ಮಾಡುವರಷ್ಟೆ!"

ರಮೇಶನ ವಿಸ್ಮಯಕ್ಕೆ ಪಾರವಿಲ್ಲ. ಕೊಂಚ ಸುಮ್ಮನಿದ್ದು, ಕಾರಣವನ್ನು ಕೇಳುತ್ತಲೆ, ದಾಸಿ ನಾಚಿಕೆಯಿಂದ ಕೊರಳನ್ನು ಕೊಂಕಿಸಿ ತಿರುಗಿಸಿಕೊಂಡು ಎಂದಳು, "ನಾವೇನು ಬಲ್ಲೆವು, ಚಿಕ್ಕರಾಯರೆ, ರಮೆಯಕ್ಕಾವರ ಮೇಲೆ ಏನೇನೊ ಕೆಟ್ಟಾಬಟ್ಟೆ ಹೆಸರು ಎದ್ದೈತೆ ತಾನೆ–ನಾವು ಬಡವರು, ಅದೆಲ್ಲಾ ನಮಗೆ ತಿಳಿದಾತೆ, ಚಿಕ್ಕರಾಯರೆ," ಹೇಳಹೇಳುತ್ತ ಅವಳು ಸರಿದು ಕೊಂಡಳು.

ಕೊಂಚ ಹೊತ್ತು ಸುಮ್ಮನೆ ನಿಂತಿದ್ದು ರಮೇಶ ಮನೆಗೆ ಹಿಂದಕ್ಕೆ

ಬಂದನು. ಇದು ವೇಣಿಯ ಕೋಪದ ಆಟವಿರಬೇಕೆಂದು ಅವನು ಕೇಳದೆಯೆ ಅರಿತುಕೊಂಡನು. ಆದರೆ ಕ್ರೋಧವೇತಕ್ಕೆ ಮತ್ತು ಈ ಆಟವೇತಕ್ಕೆ ಅಪೇಕ್ಷೆ ಮಾಡಿ ಅವನು ಯಾವುದೊ ವಿಶೇಷ ಹೇಸಿಗೆಯ ಧಾರೆಗೆ ರಮೆಯವೋಲಿಸ ಸಿಂದೆಯನ್ನು ತಿರುಗಿಸಿದಾನಾದೀತು, ಇದನ್ನೆಲ್ಲಾ ಸರಿಯಾಗಿ ಊಹಿಸುವದು ಸಹ ಅವನ ಮೂಲಕ ಸಂಭವವಿರಲಿಲ್ಲ.

## ೧೯

ಅಂದು ಮಧ್ಯಾಹ್ನದ ಮೇಲೆ ಅಚಿಂತನೀಯ ಘಟನೆ ನಡೆಯಿತು. ಅದಾಲತ್ತಿನ ವಿಚಾರಣೆಯನ್ನು ಉಪೇಕ್ಷಿಸಿ ಹಜಾಮ ಕೈಲಾಸ ಮತ್ತು ಷೇಕ್‌ಮೊಹಮ್ಮದ್ ಸಾಕ್ಷಿಗಳೊಡನೆ ರಮೇಶನಲ್ಲಿ ಮೊರೆ ಇಟ್ಟರು. ರಮೇಶ ಅಕೃತ್ರಿಮ ವಿಸ್ಮಯದೊಡನೆ ಕೇಳಿದನು. “ನನ್ನ ವಿಚಾರಣೆಯನ್ನು ನೀವೇಕೆ ಮನ್ನಿಸುತ್ತೀರಯ್ಯಾ?”

ವಾದಿಪ್ರತಿವಾದಿಗಳಿಬ್ಬರೂ ಉತ್ತರವಿತ್ತರು. “ಏಕೆ ಮನ್ನಿಸಬಾರದು, ರಾಯರೆ. ಆಫೀಸರಿಗಿಂತ ನೀವೇನು ಕಡಮೆ ವಿದ್ಯಾಬುದ್ಧೀಲಿ? ಇನ್ನೂ, ಹುಜೂರು, ಆಫೀಸರು, ಸಾಹೇಬರು, ಇನ್ನೇನುಂಟೊ ಅವರೆಲ್ಲಾರು ನಿಮ್ಮಂತವರಷ್ಟೆ; ನಾಲ್ಕಾರು ಜನ ದೊಡ್ಡ ಮನುಷ್ಯರು! ನಾಳೆ ನೀವು ಸರಕಾರಿ ಚಾಕರಿ ತಕೊಂಡು ಆಫೀಸರಾಗಿ ಕೂತು ವಿಚಾರಣೆ ಮಾಡಿದರೆ ಅದನ್ನ ನಾವು ತಲೆಗೊಟ್ಟು ಹೊತ್ತಕೊಬೇಕು ಆವಾಗ ಇಲ್ಲ ಅಂದರೆ ನಡೀತೈತಾ?” ಮಾತು ಕೇಳಿ ರಮೇಶನ ಎದೆ ಗರ್ವದಿಂದ ಆನಂದದಿಂದ ಉಬ್ಬಿತು. ಕೈಲಾಸನೆಂದನು. “ನಿಮಗಾದರೆ ನಾವಿಬ್ಬರೂ ಎರಡು ಮಾತು ತಿಳಿಯೊಹಂಗೆ ಹೇಳಬಹುದು. ಅದಾಲತ್ತಿನಲ್ಲಿ ಆದಾದೀತೆ? ಅದಲ್ಲದೆ ಬುತ್ತಿಗಂಟು ಕಟ್ಟಿಕೊಂಡು ಕೈತುಂಬ ಹಣ ವಕೀಲರಿಗೆ ಸುರೀದಾ ಹೋದರೆ ಬೇಕಾದ್ದು ಮಾಡಿ, ಕೆಲಸ ಸರಿ ಹೋಗಾಕಿಲ್ಲ, ರಾಯರೆ. ಇಲ್ಲಿ ಒಂದು ಕಾಸೂ ಖರ್ಚಿಲ್ಲ. ವಕೀಲರಿಗೆ ಕುಸಿ ಮಾಡಬೇಕಿಲ್ಲ, ದಾರಿ ನಡೆನಡೆದು ಸತ್ತು ಸುಣ್ಣ ಆಗಬೇಕಿಲ್ಲ. ಇಲ್ಲ ರಾಯರೆ, ನೀವೇನ ಹುಕ್ಕೂಂ ಮಾಡತೀರೊ, ಒಳ್ಳೇದಾಗಲಿ ಕೆಟ್ಟದ್ದಾಗಲಿ ನಾವು ಅದಕ್ಕೇನೆ ರಾಜಿ ಆಗತೇವೆ; ನಿಮ್ಮ ಪಾದ ನಮ್ಮ ತಲೆ ಮೇಲೆ ಇಟ್ಟು

ಕೊಂಡು, ಮನೆಗೆ ಹಿಂದಕ್ಕೆ ಹೋಗತೇವೆ; ದೇವರು ಒಳ್ಳೆ ಬುದ್ಧಿ ಕೊಟ್ಟ; ನಾವಿಬ್ಬರು ಹಂಗೆಂತ ಕೋರ್ಟಿಂದ ಹಿಂದೇಟಾಕಿ ಸಿಮ್ಮಲ್ಲಿಗೆ ಬಂದು ಪಾಡಕ್ಕೆ ಮರೆಬಿದ್ದಿದ್ದೀವಿ.''

ಸಣ್ಣದೊಂದು ನಾಲೆಯನ್ನು ಕುರಿತು ಇಬ್ಬರಿಗೂ ವಿವಾದ. ದಲೀಲುಪತ್ರ ಮುಂತಾದವೇನುಂಟೋ ಅವನ್ನು ರಮೇಶನ ಕೈಲಿಟ್ಟು ನಾಳೆ ಬೆಳಿಗ್ಗೆ ಬರುತ್ತೇವೆಂತ ಹೇಳಿ ಇಬ್ಬರೂ ಜನಗಳನ್ನು ಕರೆದುಕೊಂಡು ಹೋದ ಮೇಲೆ ರಮೇಶ ದಿಟ್ಟನಾಗಿ ಕೂತಿದ್ದನು. ಇದು ಅವನ ಕಲ್ಪನೆಗೆ ಮೀರಿದುದು. ಬಹುದೂರದ ಭವಿಷ್ಯತ್ತಿನಲ್ಲಿಯೂ ಯಾವಾಗಲೂ ಅವನು ಇಷ್ಟುದೊಡ್ಡ ಆಶೆಗೆ ರಾವನ್ನು ಕೊಟ್ಟಿರಲಿಲ್ಲ. ಅವನ ತೀರ್ಪನ್ನು ಇವರು ಆ ಮೇಲೆ ಗ್ರಹಿಸಲಿ ಅಥವಾ ಬಿಡಲಿ, ಇವತ್ತಾದರೆ ಸರಕಾರಿ ಕೋರ್ಟಿನ ಹೊರಗೆ ವಿವಾದ ನಿಷ್ಪತ್ತಿ ಮಾಡಿಕೊಳ್ಳುವ ಅಭಿಪ್ರಾಯದ ಮೇಲೆ ದಾರಿಯಿಂದ ಹಿಂದಿರುಗಿ ಅವನ ಹತ್ತಿರ ಬಂದಿದ್ದಾರೆ; ಇದೇಯೆ ಅವನ ಎದೆದುಂಬಿ ಆನಂದದ ಹೊಳೆಯನ್ನು ಹರಿಸಿತು. ಇದು ಅಷ್ಟೇನೂ ಅಲ್ಲ, ಇಬ್ಬರು ಹಳ್ಳಿಗರ ಬಲು ಸಣ್ಣ ವಿವಾದದ ಮಾತು; ಆದರೆ ಇದೆ ಸಣ್ಣ ಮಾತಿನ ಸೂತ್ರವನ್ನು ಹಿಡಿದು ಅವನ ಚಿತ್ತದೊಳಗೆ ಅನಂತ ಸಂಭವಗಳ ಆಕಾಶ ಕುಸುಮಗಳು ಅರಳುತ್ತಿದ್ದವು. ಅವನ ಈ ದುರ್ಭಾಗ್ಯಳಾದ ಜನ್ಮಭೂಮಿಗೋಸ್ಕರ ಭವಿಷ್ಯತ್ತಿನಲ್ಲಿ ಏನು ತಾನೆ ಮಾಡಲಾರನು! ಅವನಿಗೆ ಎಲ್ಲಿಯೂ ಲೆಕ್ಕಪಕ್ಕ ಕೊನೆ ಮೊದಲು ಯಾವುವೂ ಇನ್ನು ಉಳಿಯಲಿಲ್ಲ. ಹೊರಗೆ ವಸಂತದ ಬೆಳದಿಂಗಳಲ್ಲಿ ಆಕಾಶವು ತೇಲಿ ಹೋಗುತ್ತಿತ್ತು; ಅತ್ತಲೆ ನೋಡುತ್ತಾ ಹಠಾತ್ತು ರಮೆ ಮನಸ್ಸಿಗೆ ಬಂದಳು. ಮತ್ತಾವ ದಿನವಾದರೂ ಆಗಿದ್ದರೆ ಒಡನೆಯೆ ಅವನ ಅಂಗಗಳೆಲ್ಲಾ ಕಿಣಿ ಕಿಣಿಯಾಗಿಬಿಡುತ್ತಿದ್ದವು. ಆದರೆ ಇವತ್ತು ಬಿಸಿಯಾಗುವುದು ದೂರದ ಮಾತು; ಕಿಡಿಯೊಂದಾದರೂ ಉಳಿದಿರುವಂತೆಯೂ ಅವನ ಅನುಭವಕ್ಕೆ ಬರಲಿಲ್ಲ. ಮನಸ್ಸಿನಲ್ಲೆ ನಸುನಕ್ಕು ಅವಳನ್ನು ಕುರಿತು ಎಂದನು. ''ನಿನ್ನ ಕೈಮೂಲಕ ನನ್ನನ್ನು ಭಗವಂತನು ಹೀಗೆ ಸಾರ್ಥಕ ಮಾಡ ಎತ್ತಿಡುವನು; ನಿನ್ನ ಕೈನ ವಿಷ ನನ್ನ ಅದೃಷ್ಟದಲ್ಲಿ ಹೀಗೆ ಅಮೃತವಾಗುವುದು; ರಮೆ, ಇದನ್ನು ನೀನರಿತಿದ್ದರೆ ನನ್ನ

ಜೈಲಿಗೆ ಎಂದಿಗಾದರೂ ಕಳುಹಿಸಲು ಯತ್ನ ಮಾಡುತ್ತಿದ್ದೆಯಾ? ಇಲ್ಲವೆ ಇಲ್ಲ.... "ಯಾರೊ?"

"ನಾನು ರಾಧೆ, ಚಿಕ್ಕರಾಯರೆ! ರಮುಕ್ಕನವರು ಬಹಳ ಜರೂರಿಯಂತೆ, ಒಂದು ಸಲ ದರ್ಶನ ಕೊಡಬೇಕೆಂತ ಹೇಳಿ ಕಳುಹಿಸವರೆ."

ರಮೆ ಎದುರಿಗೆ ನೋಡಬೇಕೆಂತ ದಾಸಿಯನ್ನು ಅಟ್ಟಿದ್ದಾಳೆಯೆ! ರಮೇಶ ಮಂಕಾಗಿ ನಿಟ್ಟಿಸಿ ನೋಡುತ್ತಿದ್ದನು! ಇವತ್ತು ಅದಾವುದೊ ಬುದ್ಧಿಯಿಲ್ಲದ ದೇವತೆ ಅವನೊಡನೆ ಎಲ್ಲ ಬಗೆಯ ಹುಟ್ಟಿಗೆ ಹೊರಚ್ಚಾದ ಕೌತುಕಗಳನ್ನೆ ಮಾಡುತ್ತಿದ್ದಾಳೆ. ದಾಸಿಯೆಂದಳು, "ಒಂದು ಸಲ ದಯೆ ತೋರಬೇಕು, ಚಿಕ್ಕರಾಯರೆ."

"ಆಕೆ ಎಲ್ಲಿ?"

"ಮನೇಲಿ ಬಿದ್ದವರೆ," ಕೊಂಚ ನಿಂತು ಹೇಳಿದಳು. "ಹೊತ್ತಾರೆ ಹೊತ್ತಿರಾಕಿಲ್ಲ; ಅದಕ್ಕೇನೆ ಈಗಳೆ ಒಂದು ತಡವೆ—"

"ಒಳ್ಳೇದು, ನಡಿ ಬಂದೆ." ಎಂದು ರಮೇಶ ಎದ್ದು ನಿಂತನು.

ಕರೆಕಳುಹಿ ಒಂದು ಬಗೆಯಾಗಿ ಚಕಿತಳಾಗಿ ಹಾಸಿಗೆಯಲ್ಲಿ ರಮೆ ಬಿದ್ದಿದ್ದಳು. ದಾಸಿ ತೋರಿದಂತೆ ರಮೇಶ ಕೋಣೆಯನ್ನು ಹೊಕ್ಕು, ಚೌಕಿಯೊಂದನ್ನು ಎಳೆದುಕೊಂಡು ಕೂಡುತ್ತಲೆ, ಅವಳು ಶುದ್ಧ ಮಾತ್ರ ಮನಸ್ಸಿನಿಂದಲೆ ತನ್ನನ್ನು ತಾನು ಎಳೆದುಕೊಂಡು ಬಂದು ಅವನ ಅಡಿಗಳ ಹತ್ತಿರ ಹಾಕಿದಳು. ಕೋಣೆಯ ಮೂಲೆಯಲ್ಲಿ ಮಿಂಟಮಿಂಟನೆ ಹಣತೆಯೊಂದು ಉರಿಯುತ್ತಿತ್ತು. ಅದರ ಮಂದ ಬೆಳಕಿನಲ್ಲಿ ರಮೇಶನ ಮಸುಕ ಮಸುಕಾದ ಆಕಾರದಿಂದ ರಮೆಯನ್ನು ನೋಡಿದ ಮಟ್ಟಿನಲ್ಲಿ ಅವಳ ದೇಹಸ್ಥಿತಿ ಏನೂ ತಿಳಿಯದೆ ಹೋಯಿತು. ಈಗ ತಾನೆ ದಾರಿಯಲ್ಲಿ ಬರುತ್ತಾ ಅವನು ಮಾಡಿಕೊಂಡಿದ್ದ ಸಂಕಲ್ಪಗಳೆಲ್ಲಾ ಅವಳೆದುರಲ್ಲಿ ಕೂತೊಡನೆ ಒಂದೂ ಸರಿಯಲ್ಲವಾದವು. ತುಸು ಸುಮ್ಮನಿದ್ದು ಅವನು ಕೋಮಲ ದನಿಯಲ್ಲಿ ವಿಚಾರಿಸಿದನು. "ಈಗ ಹೇಗಿದೆಯೆ ರಾಣಿ?"

ರಮೆ ಅವನ ಅಡಿಗಳ ಕೊನೆಯಿಂದ ಕೊಂಚ ಸರಿದು ಕೂತು ಎಂದಳು, "ನನ್ನನ್ನು ತಾವು ರಮೆಯಂತಲೆ ಕರೆಯೋಣವಾಗಲಿ—"

ರಮೇಶನ ಬೆನ್ನಮೇಲೆ ಯಾರೊ ಚಾಟಿಯಿಂದ ಹೊಡೆದಂತೆ

ಯಾಯಿತು. ಅವನು ಕ್ಷಣಮಾತ್ರದಲ್ಲಿ ಕಠಿಣನಾಗಿ ಹೋದನು,—
"ಒಳ್ಳೇದು, ಹಾಗಿಯೆ ಆಗಲಿ. ಕೇಳಿದ್ದೆ ನೀನು ಕಾಯಿಲೆಯಂತ. ಈಗ ಹೇಗಿದ್ದಿಯೆ, ಅದೆ ಕೇಳುತ್ತಿದ್ದೆ; ಇಲ್ಲವಾದರೆ, ನಿನ್ನ ಹೆಸರು ಯಾವು ದಾದರೂ ಆಗಲಿ ಅದನ್ನು ಎತ್ತಿ ಕರೆಯಲು ನನಗೆ ಇಚ್ಛೆಯೂ ಇಲ್ಲ, ಅವಶ್ಯಕವೂ ಆಗೋಲ್ಲ."

ರಮೆ ಎಲ್ಲವನ್ನೂ ಅರಿತಳು. ಕೊಂಚ ಸ್ಥಿರಳಾಗಿದ್ದು ಮೆಲ್ಲನೆಂದಳು, "ಈಗ ನಾನು ಚನ್ನಾಗಿಯೆ ಇದ್ದೇನೆ; ನಾನು ಕರೆಕಳುಹಿದೆನೆಂದು ತಾವು ಬಹಳ ಆಶ್ಚರ್ಯಗೊಂಡಿದ್ದೀರಿ, ಆದರೆ—"

ರಮೇಶ ಮಾತಿನ ನಡುವೆ ತೀವ್ರ ದನಿಯಲ್ಲಿ ಹೇಳಿದನು. "ಇಲ್ಲ, ಆಗಲಿಲ್ಲ; ನಿನ್ನ ಯಾವ ಕೆಲಸದಲ್ಲಿಯೂ ನಾನು ಆಶ್ಚರ್ಯಪಡುವ ದಿನ ಕಳೆದು ಹೋಯಿತು. ಆದರೆ ಕರೆಕಳುಹಿದ್ದೇತಕ್ಕೆ?" ಮಾತು ರಮೆಯ ಎದೆಯಲ್ಲಿ ಎಷ್ಟು ದೊಡ್ಡ ಬರ್ಚಿ ಚುಚ್ಚಿದಂತೆ ಬಡಿಯಿತೆಂಬುದನ್ನು ರಮೇಶ ಅರಿಯಲಾರದೆ ಹೋದ.

"ರಮೇಶಣ್ಣಾ, ಇವತ್ತು ಎರಡು ಕೆಲಸಗಳಿಗಾಗಿ ನಿನ್ನನ್ನು ಕರೆ ಕಳುಹಿಸಿದೆ. ನಿನ್ನಲ್ಲಿ ಅಪರಾಧಗಳನ್ನೆಷ್ಟುತನಕ ಮಾಡಿದ್ದೇನೆಂಬುದನ್ನು ನಾನು ಬಲ್ಲೆ. ಆದರೂ ಹಾಗಿದ್ದರೂ ನಾನು ನಿಶ್ಚಯವಾಗಿ ಅರಿತಿದ್ದೆ, ನೀನು ಬರುವಿ ಮತ್ತು ನನ್ನ ಈ ಎರಡು ಕೊನೆಯ ಮನವಿಗಳಿಗೆ ಒಪ್ಪಿಗೆಯನ್ನು ಕೊಡದೆ ಇರಲಾರಿ" ಎಂಬುದನ್ನು— ಕಣ್ಣೀರಿನ ಭಾರ ದಿಂದ ಆವಳ ದನಿ ಒಡೆದು ಹೋಯಿತು. ಅದು ಚೊಕ್ಕವಾಗಿ ರಮೇಶನಿಗೆ ತಿಳಿಯಿತು. ಕಣ್ಣು ಮಿಟುಕಿಸುವುದರಲ್ಲಿ ಅವನ ಪೂರ್ವಸ್ನೇಹ ಉಕ್ಕಿ ಸ್ಫುರಿಯಿತು. ಪೆಟ್ಟಿಗೆಪೆಟ್ಟು ಇಷ್ಟುಸಲ ತಿಂದರೂ ಆ ಸ್ನೇಹ ಇವತ್ತೂ ಸತ್ತಿಲ್ಲವಲ್ಲಾ, ನಿತ್ರಾಣವಾಗಿ ಸುಮ್ಮನೆ ಮೂರ್ಛೆಗೊಂಡಂತೆಯೆ ಬಿದ್ದಿದೆ; ಇದನ್ನು ಖಂಡಿತವಾಗಿ ಅನುಭವಿಸಿ ತನ್ನಲ್ಲಿ ತಾನೆ ವಿಸ್ಮಯ ಗೊಂಡು ಕ್ಷಣಹೊತ್ತು ಸುಮ್ಮನಿದ್ದು ಕೊನೆಗೆಂದನು. "ನಿನ್ನ ಮನವಿ ಗಳಾವುವು?"

ರಮೆ ಚಕಿತಳಂತೆ ಮೊಗವನ್ನೆತ್ತಿ ಒಡನೆಯೆ ತಗ್ಗಿಸಿ ಎಂದಳು,

"ದೊಡ್ಡಣ್ಣನವರು ನಿನ್ನ ಸಹಾಯದಿಂದ ಕಸಿದುಕೊಳ್ಳಬೇಕೆಂತಿರುವ ಆಸ್ತಿ ನನ್ನ ಸ್ವಂತದ್ದು, ಅಂದರೆ ನನ್ನದು ಹದಿನೈದು ಆಣೆಪಾಲು, ನಿಮ್ಮದು ಒಂದಾಣೆ: ಅದನ್ನ ನಾನು ನಿನಗೆ ಕೊಟ್ಟು ಹೋಗಬೇಕೆಂತ ಮನಸ್ಸು ಮಾಡಿದ್ದೇನೆ.'

ರಮೇಶ ತಿರುಗೂ ಬಿಸಿಯಾಗಿ ಹೇಳಿದನು. "ನೀನು ಭಯಪಡ ಬೇಕಾದ್ದು ಇಲ್ಲ. ನಾನು ಕಳವಿಗೆ ಯಾರಿಗೂ ಹಿಂದೆ ನೆರವಾಗಲಿಲ್ಲ, ಈಗಲೂ ಆಗಲಾರೆ; ದಾನಮಾಡಬೇಕೆನ್ನುವುದಾದರೆ— ಅದಕ್ಕೆ ಜನ ರಿದ್ದಾರೆ— ನಾನು ದಾನ ಹಿಡಿಯೆ."

ಹಿಂದಿನ ದಿನಗಳಾಗಿದ್ದರೆ ತಕ್ಷಣ ಒದರಿ ಬಿಡುತ್ತಿದ್ದಳು. "ಕಳ್ಳಂಬಿ ಯವರ ಕೈಯದಾನ ಹಿಡಿಯುವುದರಲ್ಲಿ ಘೋಷಗೇರಿಗಳಿಗೆ ಅಪಮಾನ ವಿಲ್ಲ" ವೆಂತ.

ಇವತ್ತಾದರೆ ಈ ಮಾತು ಅವಳ ಬಾಯಿಂದ ಹೊರಬೀಳಲಿಲ್ಲ. ವಿನೀತಳಾಗಿ ಎಂದಳು. "ನಾನು ಬಲ್ಲೆ, ರಮೇಶಣ್ಣ, ನೀನು ಕಳ್ಳತನಕ್ಕೆ ನೆರವಾಗುವುದಿಲ್ಲವೆನ್ನುವದನ್ನು ಮತ್ತು ತೆಗೆದುಕೊಂಡರೂ ನೀನು ನಿನ ಗೋಸ್ಕರ ತೆಗದುಕೊಳ್ಳಲಾರೆ ಎಂತಲೂ ಬಲ್ಲೆ. ಆದರೆ ಅದಲ್ಲ. ತಪ್ಪು ಮಾಡಿದರೆ ಶಾಸ್ತಿಯುಂಟಷ್ಟೆ. ನಾನು ಮಾಡಿರುವ ತಪ್ಪುಗಳಿಗೆ ಇದು ದಂಡವೆಂದು ತೆಗದುಕೊಳ್ಳಲಾಗದೆ ? "

ರಮೇಶ ಕ್ಷಣಕಾಲ ಸುಮ್ಮನಿದ್ದು ಎಂದನು. "ನಿನ್ನ ಎರಡನೆಯ ಮನವೆ ? "

ರಮೆಯೆಂದಳು. "ನಮ್ಮ ಜಯನನ್ನು ನಿನ್ನ ಕೈಲಿಟ್ಟು ನಾನು ಹೊರಟೆ. ಅವನನ್ನು ನಿನ್ನಂತೆಯೆ ಮನುಷ್ಯನಾಗುವಂತೆ ಮಾಡು; ದೊಡ್ಡವನಾಗಿ ಅವನು ನಿನ್ನಂತೆಯೆ ನಗೆಮೊಗದಿಂದ ಸ್ವಾರ್ಥತ್ಯಾಗಿಯಾ ಗಲಿ." ರಮೇಶನ ಚಿತ್ತದಲ್ಲಿನ ಕಠೋರತೆಯೆಲ್ಲಾ ಕರಗಿ ಹೋಯಿತು. ರಮೆ ಸೆರಗಿನ ಕೊನೆಯಿಂದ ಕಣ್ಣೊರಸಿಕೊಂಡು ಎಂದಳು. "ಇದನ್ನು ನನ್ನ ಕಂಗಳಿಂದ ನೋಡಿ ಹೋಗಲಿಕ್ಕೆ ಸಮಯವಿಲ್ಲ; ಆದರೆ ನಾನು ನಿಜ ವಾಗಿ ಬಲ್ಲೆ, ಜಯನ ದೇಹದಲ್ಲಿ ಅವನ ಹಿರಿಯರ ರಕ್ತವಿದೆ. ತ್ಯಾಗಕ್ಕೆ

ಬೇಕಾಗುವ ಶಕ್ತಿ ಅವನ ಮೂಳೆಮಾಂಸಗಳಲ್ಲಿ ಬೆರೆತಿದೆ, ಕಲಿಸಿದರೆ ಒಂದು ದಿನ ನಿನ್ನಂತೆಯೇ ತಲೆಯನ್ನೆತ್ತಿ ನಿಲ್ಲುವನು.''

ರಮೇಶ ತಕ್ಷಣ ಉತ್ತರವೇನನ್ನೂ ಹೇಳಲಿಲ್ಲ. ಕಿಟಕಿಯ ಹೊರಗೆ ಬೆಳದಿಂಗಳಿಂದ ತುಂಬಿ ಹರಿಯುತ್ತಿರುವ ಆಕಾಶದ ಕಡೆಗೆ ನಿಟ್ಟಿಸಿ ನೋಡುತ್ತಿದ್ದನು. ಎಂದೂ ಕಾಣದಂತಹದಾವುದೋ ಒಂದು ವ್ಯಥೆ ಅವನ ಮನಸ್ಸಿನ ತುಂಬಾತುಂಬಿಕೊಳ್ಳುತ್ತಿತ್ತು. ಮಾತಿಲ್ಲದೆ ಕೆಲಹೊತ್ತು ಕಳೆದ ಮೇಲೆ, ರಮೇಶ ಮೊಗವನ್ನು ತಿರುಗಿಸಿ ಎಂದನು. ''ನೋಡು ಇದಕ್ಕೆಲ್ಲಾ ನನ್ನನ್ನು ತಿರಗೂ ಸಿಲುಕಿಸಬೇಡ. ನಾನು ಬಲು ದುಃಖ ಕಷ್ಟಗಳನ್ನು ಅನುಭವಿಸಿ ಸಣ್ಣನೆಯದೊಂದು ದೀವಿಗೆ ಹತ್ತಿಸಬಲ್ಲವ ನಾದೆ; ಅದಕ್ಕೇಯೆ ನನಗ ಕೇವಲ ಭಯಹತ್ತಿದೆ, ಅಲ್ಪಸ್ವಲ್ಪದರಿಂದಲೆ ಇದೆಲ್ಲಿ ಆರಿ ಹೋಗಿ ಬಿಟ್ಟೀತೋ ಎಂತ.''

ರಮೆಯೆಂದಳು. ''ಇನ್ನು ಭಯವಿಲ್ಲ, ರಮೇಶಣ್ಣಾ. ನಿನ್ನ ಈ ಬೆಳಕು ಇನ್ನು ಆರುವುದಿಲ್ಲ. ದೊಡ್ಡಮ್ಮ ಎಂದಿದ್ದಳು, ನೀನು ದೂರ ದಿಂದ ಬಂದು ಬಲು ಎತ್ತರದಲ್ಲಿ ಕೂತು ಕೆಲಸ ಮಾಡತೊಡಗಿದ್ದೆಯಂತಲೆ ಇಷ್ಟು ಕಡೆ ವಿಘ್ನಗಳನ್ನು ಪಡೆದೆ. ನಾವುಗಳು ನಮ್ಮ ಸ್ವಂತ ಕೆಟ್ಟ ಕೆಲಸಗಳಿಂದ ನಿನ್ನನ್ನು ಇಳಿಬಡಿದು ತಂದು ಈಗ ಸರಿಯಾದ ತಾವಿನಲ್ಲಿ ಪ್ರತಿಷ್ಠೆಮಾಡಿದ್ದೇವೆ. ಈಗ ನೀನು ನಮ್ಮಲ್ಲಿ ಬಂದು ನಿಂತಿದ್ದೀ ಎಂತಲೆ ನಿನಗೆ ಭಯವಾಗುತ್ತಿದೆ; ಮೊದಲಾಗಿದ್ದರೆ ಈ ಶಂಕೆಗೆ ನಿನ್ನ ಮನಸ್ಸಿನಲ್ಲಿ ತಾವೇ ಇರುತ್ತಿರಲಿಲ್ಲ. ಆಗ ನೀನು ಹಳ್ಳಿಯ ಸಮಾಜಕ್ಕೆ ಮೀರಿದ್ದೆ; ಈಗ ನೀನೂ ಅದರಲ್ಲಿಯೇ ಒಬ್ಬನು. ಆದ್ದರಿಂದ ಈ ನಿನ್ನ ಬೆಳಕು ಇನ್ನು ಮಸಕಾಗದು, ಇನ್ನು ದಿನ ದಿನವೂ ಹೆಚ್ಚು ಹೆಚ್ಚು ಪ್ರಕಾಶಮಾನ ವಾಗುವುದು.''

ಥಟ್ಟನೆ ದೊಡ್ಡಮ್ಮನ ಹೆಸರಿನಿಂದ ರಮೇಶ ಕಾಂತಿಗೊಂಡೆದ್ದು ಉದ್ದೀಪ್ತನಾಗಿ ಎಂದನು. ''ಚೆನ್ನಾಗಿ ಬಲ್ಲೆಯಾ ರಮೆ, ಈ ನನ್ನ ಬೆಳಕು ಆರುವುದಿಲ್ಲವೋ ?''

ರಮೆ ದೃಢಕಂಠದಿಂದ ಹೇಳಿದಳು. ''ಚೆನ್ನಾಗಿ ಬಲ್ಲೆ, ಎಲ್ಲವನ್ನೂ

ಅರಿತಿರುವ ದೊಡ್ಡಮ್ಮನ ಮಾತೇ ಇದು. ಈ ಕೆಲಸ ನಿನ್ನದು. ನನ್ನ ಜಯನನ್ನು ನೀನು ಕೈಹಿಡಿದು ನನ್ನೆಲ್ಲಾ ಅಪರಾಧಗಳನ್ನೂ ಕ್ಷಮಿಸಿ ಇವತ್ತು ಆಶೀರ್ವಾದ ಮಾಡಿ ನನ್ನನ್ನು ಬೀಳ್ಕೊಡು, ರಮೇಶಣ್ಣ, ನಾನು ನಿಶ್ಚಿಂತೆಯಾಗಿ ನನ್ನ ಗಂಡನಲ್ಲಿಗೆ ಹೋಗುವಂತೆ ನಡೆಯಿಸಿಕೊಡು.''

ಹೊಟ್ಟೆಯಲ್ಲಿ ಸಿಡಿಲು ಹೊತ್ತ ಮೋಡದಂತೆ ರಮೇಶನ ಎದೆಯೊಳಗು ಕ್ಷಣ ಕ್ಷಣಕ್ಕೂ ಚಮಕುತ್ತಿತ್ತು: ಆದರೆ ಅವನು ತಲೆಯನ್ನು ಬಗ್ಗಿಸಿ ಬೆಂಡಾಗಿ ಕುಳಿತಿದ್ದನು. ರಮೆಯೆಂದಳು, ''ನನ್ನ ಇನ್ನೊಂದು ಮಾತನ್ನು ನೀನು ಮನ್ನಿಸಬೇಕು. ಹೇಳು, ಮನ್ನಿಸುವಿಯಾ?''

ರಮೇಶ ಮೃದುದನಿಯಲ್ಲಿ ಎಂದನು. ''ಏನು ಮಾತು?'' ರಮೆಯೆಂದಳು. ''ನನ್ನ ಮಾತೆತ್ತಿ ದೊಡ್ಡಣ್ಣನೊಡನೆ ನೀನು ಎಂದಿಗೂ ಹೋರಾಡಬೇಡ.''

ರಮೇಶನಿಗೆ ಅರ್ಥವಾಗದೆ ಪ್ರಶ್ನೆ ಮಾಡಿದನು. ''ಹಾಗೆಂದರೆ?''

ರಮೆಯೆಂದಳು. ''ಎಂದರೆ, ಎಂದಾದರೂ ಕಿವಿಗೆ ಬಿದ್ದರೆ, ಅಂದು ಬರಿ ಈ ಮಾತನ್ನು ನೆನಪಿಗೆ ತಂದುಕೊ, ನಾನು ಹೇಗೆ ಸದ್ದುಮಾಡದೆ ಸಹಿಸಿಕೊಂಡು ಹೊರಟು ಹೋದೆ–ಒಂದು ಮಾತಿಗೂ ಎದುರೆನ್ನಲಿಲ್ಲ. ಸಹಿಸಲಾರದೆ ಹೋಗಿದ್ದಾಗ ಒಂದು ದಿನ ದೊಡ್ಡಮ್ಮ ಬಂದು ಹೇಳಿದ್ದಳು. ''ಅಮ್ಮಾ ಸುಳ್ಳನ್ನು ಕೆಣಕಿ ಬಾರಿಸಿ ಎಚ್ಚರಿಸಿದರೇನೆ ಅದರ ಪರಮಾಯುಸ್ಸು ಹೆಚ್ಚಿಕೊಳ್ಳುತ್ತೆ. ಸ್ವಂತ ಅಸಹನೆಯಿಂದ ಅದರ ಆಯುಸ್ಸನ್ನು ಹೆಚ್ಚಿಸಿ ಎತ್ತಿಡುವಂಥಹ ಪಾಪಕ್ಕೆ ಸಮಾನ ಇನ್ನು ಸ್ವಲ್ಪವೆ ಇರುವುವು.'' ಅವಳ ಈ ಉಪದೇಶವನ್ನು ಮನದಲ್ಲಿಟ್ಟುಕೊಂಡು ನಾನು ಎಲ್ಲಾ ದುಃಖದುರ್ಭಾಗ್ಯಗಳನ್ನು ಕಳೆದಿದ್ದೇನೆ—ಇದನ್ನು ನೀನೂ ಎಂದಿಗೂ ಮರೆಯಬೇಡ, ರಮೇಶಣ್ಣ.'' ರಮೇಶ ಮಾತಿಲ್ಲದೆ ಅವಳ ಮೊಗದ ಕಡೆಯೆ ನೋಡುತ್ತಿದ್ದನು. ರಮೆ ಕ್ಷಣ ಹೊತ್ತಾದ ಮೇಲೆಂದಳು. ''ಇವತ್ತು ನನ್ನನ್ನು ಕ್ಷಮಿಸಲು ಸಾಗದೆಂದು ಮನಸ್ಸಿನಲ್ಲಿ ಅಂದುಕೊಂಡು ದುಃಖಿಸಬೇಡ, ರಮೇಶಣ್ಣ. ನಾನು ನಿಜವಾಗಿ ಬಲ್ಲೆ, ಇವತ್ತು ಕಠಿಣವೆಂದು ಮನಸ್ಸಿಗೆ ಹೊಳೆಯುವುದೆ ಒಂದು ದಿನ

ತಾನೆಯೆ ನೇರವಾಗುವುದು. ಆ ದಿನ ನನ್ನ ಅಪರಾಧಗಳನ್ನೆಲ್ಲಾ ನೀನು ಸಹಜವಾಗಿ ಕ್ಷಮಿಸುತ್ತಿ ಎಂದು ತಿಳಿದು ನನ್ನ ಮನದಲ್ಲಿ ಕ್ಲೇಶವೇನೂ ಇಲ್ಲ. ನಾಳೆ ನಾನು ಹೋಗುತ್ತೇನೆ."

"ನಾಳೆ?" ರಮೇಶ ವಿಸ್ಮಿತನಾಗಿ ಕೇಳಿದನು. "ನಾಳೆ ಹೋಗುವುದೆಲ್ಲಿಗೆ?"

ರಮೆಯೆಂದಳು. "ದೊಡ್ಡಮ್ಮ ಎಲ್ಲಿಗೆ ಕರೆದೊಯ್ಯುವಳೊ, ಅಲ್ಲಿಗೆ ನಾನು ಹೋಗುತ್ತೇನೆ."

ರಮೇಶ ಎಂದನು. "ಅವಳಂತೂ ಇನ್ನು ಹಿಂದಿರುಗುವುದಿಲ್ಲವೆಂತ ಕೇಳಿದೆ."

ರಮೆ ಮೆಲ್ಲನೆಂದಳು. "ನಾನೂ ಇಲ್ಲ. ನಾನು ನಿಮ್ಮ ಪಾದಗಳಿಂದ ಜನ್ಮಾವಧಿ ಬೀಳ್ಕೊಳ್ಳುತ್ತೇನೆ." ಎಂದು ಅವಳು ಬಾಗಿ ನೆಲಕ್ಕೆ ತಲೆ ಮುಟ್ಟಿಸಿದಳು. ರಮೇಶ ಗಳಿಗೆ ಹೊತ್ತು ಚಿಂತಿಸಿ ನಿಟ್ಟುಸಿರನ್ನು ಬಿಟ್ಟು ಎದ್ದು ನಿಂತನು. "ಒಳ್ಳೆಯದು, ಹೋಗು. ಆದರೆ ನನ್ನಿಂದೇಕೆ ಬೀಳ್ಕೊಳ್ಳಬೇಕು, ಅದನ್ನೂ ತಿಳಿಯಲಾಗದೊ?" ಎಂದು ಕೇಳಿದನು.

ರಮೆ ಮೌನಳಾಗಿದ್ದಳು. ರಮೇಶ ತಿರಗೂ ಕೇಳಿದನು. "ನಿನ್ನೆಲ್ಲಾ ವಿಷಯವನ್ನು ಮರೆಮಾಚಿ ಹೊರಟು ಹೋಗಲೇಕೊ ನೀನೇ ಬಲ್ಲೆ. ನಾನಂತೂ ಕಾಯಮನಗಳಿಂದ ಭಗವಂತನಲ್ಲಿ ಪ್ರಾರ್ಥಿಸುತ್ತೇನೆ, ಒಂದಾನೊಂದು ದಿನ ಸರ್ವಾಂತಃಕರಣದಿಂದ ನಿನ್ನನ್ನು ಕ್ಷಮಿಸಲು ನನಗೆ ಸಾಮರ್ಥ್ಯಕೊಡಲೆಂತ. ನಿನ್ನನ್ನು ಕ್ಷಮಿಸಲಾರದಿರುವುದರಿಂದ ನನಗೆಂಥಹ ವ್ಯಥೆಯಾಗುತ್ತಿದೆಯೊ ಅದನ್ನು ನನ್ನ ಅಂತರ್ಯಾಮಿಯೊಬ್ಬನೇ ಬಲ್ಲ."

ರಮೆಯ ಎರಡು ಕಂಗಳೂ ತುಂಬಿ ನೀರು ಹರಿಯಿತು. ಆದರೆ ಆ ಅತ್ಯಂತ ಮಂದವಾದ ಬೆಳಕಿನಲ್ಲಿ ಅದು ರಮೇಶನ ಕಂಗಳಿಗೆ ಬೀಳಲಿಲ್ಲ.

ರಮೆ ಸದ್ದಿಲ್ಲದಂತೆ ದೂರದಿಂದ ಅವನಿಗೆ ಇನ್ನೊಂದು ಸಲ ನಮಸ್ಕಾರ ಮಾಡಿದಳು. ಪರಕ್ಷಣವೆ ರಮೇಶ ಮನೆಯ ಹೊರಕ್ಕೆ ಹೊರಟು

ಹೋದನು. ಹಾದಿಯಲ್ಲಿ ನಡೆನಡೆಯುತ್ತಾ, ಅವನ ಭವಿಷ್ಯತ್ತು, ಅವನ ಸಮಸ್ತ ಕೆಲಸಕಾರ್ಯಗಳಲ್ಲಿನ ಉತ್ಸಾಹವೆಲ್ಲಾ ಒಂದು ನಿಮಿಷದಲ್ಲಿ ಈ ಬೆಳದಿಂಗಳಂತೆಯೆ ಮುಸಕುನೆಳಲಿಂದ ಕವಿದಿರುವಂತೆ ಮನಸ್ಸಿಗೆ ಹೊಳೆಯಿತು.

ಮರುದಿವಸ ಬೆಳಗ್ಗೆ ರಮೇಶ ಆ ಮನೆಗೆ ಬಂದು ನಿಂತಾಗ ವಿಶ್ವೇಶ್ವರಿ ಯಾತ್ರೆಗೆ ಹೊರಟು ಪಲ್ಲಕ್ಕಿಯಲ್ಲಿ ಕುಳಿತಿದ್ದಾಳೆ. ರಮೇಶ ಬಾಗಿಲ ಬಳಿ ಮೊಗವನ್ನಿಟ್ಟು ಕಂಬನಿಯಿಂದ ಕಳವಳಿಸುವ ದನಿಯಲ್ಲಿ ಎಂದನು. "ಏನು ತಪ್ಪುಕಂಡು ನಮ್ಮನ್ನು ಇಷ್ಟು ಬೇಗನೆಬಿಟ್ಟು ಹೊರಟೆ ದೊಡ್ಡಮ್ಮ ?"

ವಿಶ್ವೇಶ್ವರಿ ಬಲಗೈಯನ್ನು ನೀಡಿ ರಮೇಶನ ತಲೆಯಮೇಲಿಟ್ಟು ಎಂದಳು. "ತಪ್ಪುಗಳ ಮಾತೆತ್ತಿದರೆ ಕೊನೆಯಿಲ್ಲ ಮಗು ! ಅದು ಕೆಲಸ ವಿಲ್ಲ." ಆ ಮೇಲೆಂದಳು. "ಇಲ್ಲಿ ಸತ್ತುಗಿತ್ತರೆ, ರಮೇಶು, ವೇಣಿ ನನ್ನ ಮುಖಕ್ಕೆ ಬೆಂಕಿ ಹಚ್ಚುತ್ತಾನೆ. ಅದಾದರಂತೂ ನನಗೆ ಯಾವ ಬಗೆಯಲ್ಲೂ ಮುಕ್ತಿದೊರೆಯದು, ಇಹಕಾಲವಂತೂ ಬೆಂಕಿ ಬಿಟ್ಟು ಹೋಯಿತು, ಮಗು, ಇನ್ನು ಪರಕಾಲವನ್ನೂ ಹೀಗೆಯೆ ಸುಟ್ಟು ಸತ್ತೇನು ಎಂಬ ಭಯದಿಂದಲೆ ಓಡಿ ಹೋಗುತ್ತಿದ್ದೇನೆ, ರಮೇಶು."

ರಮೇಶ ಶಿಡಿಲು ಬಡಿದವನಂತೆ ಸ್ತಂಭಿತನಾದನು. ಇವತ್ತು ಈ ಒಂದೆ ಮಾತಿನಿಂದ ಅವನು ದೊಡ್ಡಮ್ಮನ ಹೊಟ್ಟೆಯೊಳಗಿನ ತಾಯುರಿಯನ್ನು ಕಂಡುಕೊಂಡಂತೆ ಇನ್ನೆಂದೂ ಕಾಣಲಿಲ್ಲ. ಕೊಂಚ ಹೊತ್ತು ಸ್ಥಿರನಾಗಿದ್ದು ಎಂದನು. "ರಮೆ ಏಕೆ ಹೋಗುತ್ತಾಳೆ, ದೊಡ್ಡಮ್ಮ !"

ವಿಶ್ವೇಶ್ವರಿ ಪ್ರಬಲವಾದೊಂದು ಕಂಬನಿಯ ಉಬ್ಬಳಿಕೆಯನ್ನು ತಡೆದುಕೊಂಡಳು. ಆಮೇಲೆ ಗಂಟಲನ್ನು ಗಡಸುಮಾಡಿ ಹೇಳಿದಳು. "ಸಂಸಾರದಲ್ಲಿಯಂತೂ ಅವಳಿಗೆ ತಾವಿಲ್ಲ, ಮಗು, ಅದಕ್ಕೆ ಅವಳನ್ನು ಭಗವಂತನ ಅಡಿಗಳ ಕೆಳಕ್ಕೆ ಕರೆದೊಯ್ಯುತ್ತೇನೆ. ಅಲ್ಲಿ ಹೋದರೂ ಅವಳು ಬದುಕುವಳೊ ಇಲ್ಲವೊ ತಿಳಿಯದು. ಬದುಕಿದ್ದ ಆದರೆ, ಜೀವವಿರುವ ಪರ್ಯಂತ ಈ ಅತ್ಯಂತ ಕಠಿಣವಾದ ಪ್ರಶ್ನೆಯ ವಿಮಾಮಾಂಸವನ್ನು

ಮಾಡಲು ಬಲವಂತ ಮಾಡುತ್ತೇನೆ; ಭಗವಂತನೇಕೆ ಅವಳಿಗೆ ಇಷ್ಟು ರೂಪು, ಇಷ್ಟು ಗುಣ ಇಷ್ಟು ದೊಡ್ಡದೊಂದು ಪ್ರಾಣವನ್ನಿತ್ತು ಸಂಸಾರ ದಲ್ಲಿ ಕಳುಹಿಸನು; ಆದರೂ ಏತಕ್ಕೋಸ್ಕರ ದೋಷವಿಲ್ಲದೆಯೆ ಈ ದುಃಖದ ಹೊರೆಯನ್ನು ತಲೆಯಮೇಲೆ ಎತ್ತಿಟ್ಟು ತಿರಗೂ ಸಂಸಾರದ ಹೊರಗಡೆ ಎಸೆದು ಬಿಟ್ಟನು? ಇದೇನು ಅರ್ಥಪೂರ್ಣವಾದ ಮಂಗಳಾಭಿಪ್ರಾಯವೊ ಅವನದು, ಅಲ್ಲದೆ ನಮ್ಮಗಳ ಸಮಾಜದ ಬರಿ ಕಯಾಲಿನ ಆಟವೊ! ರಮೇಶ, ಅವಳಂತಹ ದುಃಖಿನಿ ಇನ್ನು ಪೃಥ್ವಿಯಲ್ಲಿರುವಂತೆ ಇಲ್ಲ.'' ಹೇಳಹೇಳುತ್ತ ಅವಳ ಗಂಟಲು ಒಡೆದು ಹೋಯಿತು. ಅವಳಿಷ್ಟು ವ್ಯಾಕುಲವನ್ನು ತೋರಿದ್ದು ಯಾರೂ ಯಾವಾಗಲೂ ಕಂಡದ್ದಿಲ್ಲ. ರಮೇಶನು ಬೆಂಡಾಗಿ ಕೂತಿದ್ದನು. ವಿಶ್ವೇಶ್ವರಿ ಕೊಂಚ ಹೊತ್ತಾದ ಮೇಲೆಂದಳು. ''ಆದರೆ ನಿನ್ನಮೇಲೆ ನನ್ನ ಅಪ್ಪಣೆ ಇದೆ, ರಮೇಶ, ಅವಳನ್ನು ನೀನು ತಪ್ಪು ತಿಳಿಯಬೇಡ. ಹೊರಡುವ ಸಮಯದಲ್ಲಿ ನಾನು ಯಾರ ವಿರುದ್ಧವಾಗಿಯೂ ದೂರ ಹೇಳ ಹೋಗಲೊಲ್ಲೆ; ಬರಿ ಈ ಮಾತನ್ನು ಅವಿಶ್ವಾಸ ಮಾಡದಿರು; ಅನಃಗಂತ ಹೆಚ್ಚಿಗೆ ನಿನ್ನ ಮಂಗಳವನ್ನು ಕೋರುವವಳು ನಿನಗಿನ್ನಾರೂ ಇಲ್ಲ.''

ರಮೇಶ ಹೇಳ ಹೋದನು, ಆದರೆ, ದೊಡ್ಡಮ್ಮ—''

''ಇದರೊಳಗೆ ಯಾವ ಆದರವೂ ಇಲ್ಲ, ರಮೇಶ, ನೀನು ಕೇಳಿ ಯುಂಟಲ್ಲಾ, ಅದೆಲ್ಲಾ ಸುಳ್ಳು; ನೀನು ತಿಳಿದುಕೊಂಡಿರುವುದೆಲ್ಲಾ ತಪ್ಪು. ಆದರೆ ಈ ದೋಷಾರೋಪಣೆಗಳೆಲ್ಲಾ ಇಲ್ಲಿಗೇನೆ ಮುಕ್ತಾಯ ವಾಗಲಿ. ನಿನ್ನ ಕೆಲಸ ಎಲ್ಲಾ ಅನ್ಯಾಯ, ಎಲ್ಲಾ ಬಗೆಯ ಹಿಂಸೆ ದ್ವೇಷ ಗಳನ್ನು ಪೂರ್ತಿಯಾಗಿ ತುಚ್ಛಮಾಡಿ ಬಹುಕಾಲ ಹೀಗೆಯೆ ಪ್ರಬಲನಾಗಿ ಹರಿದು ಹೋಗಲು ಸಮರ್ಥನಾಗಿರುವುದೆ, ಇದೇಯೆ ನಿನ್ನ ಮೇಲೆ ಅವಳ ಕೊನೆಯ ಪ್ರಾರ್ಥನೆ ಇದಕ್ಕಾಗಿಯೆ ಅವಳು ಬಾಯಿಮುಚ್ಚಿ ಕೊಂಡು ಎಲ್ಲವನ್ನೂ ಸಹಿಸಿಕೊಂಡಳು; ಪ್ರಾಣ ಬಿಡುತ್ತಿದ್ದಾಳೆ. ಎಲೊ ರಮೇಶ, ಆದರೂ ಮಾತಾಡಳು!''

ಕಳೆದ ರಾತ್ರಿಯಲ್ಲಿ ರಮೆಯು ಸ್ವಂತ ಬಾಯಿಂದ ಒಂದ ಒಂದೆರಡು

ಮಾತುಗಳು ರಮೇಶನಿಗೆ ಆಗ ಮನಸ್ಸಿಗೆ ಬಿದ್ದು ದುರ್ಜಯ ರೋದನದ ವೇಗ ಮೇಲ್ಮುಟ್ಟಿಯ ತನಕ ತಳ್ಳಿಕೊಂಡು ಬಂತು. ಅವನು ದಡಬಡನೆ ಮೊಗವನ್ನು ಕೆಳಗೆ ಮಾಡಿ ಜೀವವನ್ನು ಹೋಣೆ ಮಾಡಿದ ಬಲದಿಂದ ಅಂದುಬಿಟ್ಟನು. "ಅವಳಿಗೆ ಹೇಳು, ದೊಡ್ಡಮ್ಮ ಹಾಗೆ ಆಗುತ್ತದೆ." ಎಂದು ಕೈನೀಡಿ ಹೇಗೊ ಅವಳ ಪಾದಧೂಳಿಯನ್ನು ಗ್ರಹಿಸಿ ಓಡಿ ಹೊರಗಾಗಿ ಹೋದನು.

---

# ನಮ್ಮ ಸಹಾಯಕರು ಮತ್ತು ಪೋಷಕರು

ನಮ್ಮ ಗ್ರಂಥಮಾಲೆಗೆ ಪೋಷಕರಾಗಿಯೂ ಸಹಾಯಕರಾಗಿಯೂ ಈ ಪರ್ವವೂ ನೆರವಿತ್ತು ಪ್ರೋತ್ಸಾಹಿಸಿದ ಮಹನೀಯರಿಗೆ ನಾವು ತುಂಬ ಕೃತಜ್ಞರಾಗಿದ್ದೇವೆ. ಇದರಂತೆ ಕನ್ನಡಿಗರೆಲ್ಲರೂ ಸಹಾಯಕರಾಗಿಯಾಗಲಿ, ಪೋಷಕರಾಗಿಯಾಗಲಿ, ಚಂದಾದಾರರಾಗಿಯಾಗಲಿ ನಮ್ಮನ್ನು ಪ್ರೋತ್ಸಾಹಿಸಬೇಕೆಂದು ಬೇಡುತ್ತೇವೆ.

**ಪೋಷಕರು :—**

ಶ್ರೀ. ಎಚ್. ಬಿ, ಕೊಣ್ಣೂರ ಎಂ. ಎ. ಬಿಜಾಪುರ ೧೦—೦—೦

,, ಶ್ರೀನಿವಾಸರಾವ ಪೋತದಾರ ಆರ್ಟಿಸ್ಟ ಮಾಳಮಡ್ಡಿ ೧೦—೦—೦

**ಸಹಾಯಕರು :—**

೧. ಶ್ರೀ. ಗೋಕುಲದಾಸ ವಿಠ್ಠಲದಾಸ ವಾರಕರ
ವ್ಯಾಪಾರಸ್ಥರು ಗದಗ ೫—೦—೦

೨. ,, ವಲ್ಲಭದಾಸ ಪುಣೇಕರ ಸಾಹುಕಾರರು
ಗದಗ ಬೆಟಗೇರಿ ೫—೦—೦

೩. ,, ಶ್ರೀಮಂತ ವೆಂಕಟಾದ್ರಿ ಶ್ರೀನಿವಾಸ ಬಹದ್ದೂರ
ದೇಸಾಯಿ, ಸೂರಟೂರ ೫—೦—೦

೪. ,, ಮೋಹನರಾವ್ ಕರೀಕಟ್ಟಿ ಬಿ. ಎ.
ಸಬ್ ರಜಿಸ್ಟ್ರಾರರು ಗದಗ ೫—೦—೦

೫. ,, ಸಿ. ಕೆ. ವೆಂಕಟರಾಮಯ್ಯ, ಎಂ. ಎ., ಬಿ. ಎಲ್., ಗವ್ಹರ್ನ.
ಮೆಂಟ ಓರಿಯಂಟಲ್ ಟ್ರಾನ್ಸ್‌ಲೇಟರ ಬೆಂಗಳೂರು ೫—೦—೦

೬. ,, ಎಲ್. ಜಿ. ವಿಜಾಪುರ ವ್ಯಾಪಾರಿಗಳು
ಬಾಗಲಕೋಟೆ ೫—೦—೦

೭. ,, ಕಲ್ಲಪ್ಪಾ ಸೋಮಪ್ಪಾ ಗುಂಜಾಳ ಧಾರವಾಡ ೫—೦—೦

೮. ,, ಎಸ್. ಎಸ್. ಸಕ್ರಿ ಬಿ. ಎ. ಬಾಗಲಕೋಟೆ ೫—೦—೦

೯. ,, ರಾಘವೇಂದ್ರರಾವ ಮನಸಬ್ದಾರ, ಹೈದ್ರಾಬಾದ ೫-೦-೦

೧೦. ಶ್ರೀಮಂತ ಸರದಾರ ಬಾಳಾಸಾಹೇಬ
ಭೀಮಪ್ಪ ಗಿರಿಯಪ್ಪ ದೇಸಾಯಿ, ಕೌಜಲಗಿ ೫-೦-೦

೧೧. ಶ್ರೀ. ಸಿ. ಸಿ. ಅಬಕಾರ ವರ್ತಕರು, ಬನಹಟ್ಟಿ ೫-೦-೦

೧೨. ,, ಜಿ. ವಿ. ಬೇವೂರು ಆಯ್. ಸಿ. ಎಸ್.
ಡಾಯರೆಕ್ಟರ ಜನರಲ್ ಆಫ್ ಪೋಸ್ಟ್ಸ್, ದಿಲ್ಲಿ ೫-೦-೦

೧೩. ಡಾ. ಆರ್. ಎಸ್. ಗುಡಿ ಎಲ್. ಸಿ. ಪಿ. ಎಸ್.
ಬಿಜಾಪುರ ೫-೦-೦

೧೪. ಡಾ. ಎಸ್. ಸಿ. ನಂದೀಮಠ ಎಂ. ಎ. ಪಿ. ಎಚ್. ಡಿ.
ಬೆಳಗಾಂವಿ ೫-೦-೦

೧೫. ಶ್ರೀ. ವ್ಹಿ. ಎನ್. ಅಡವಿ, ಅಸಿಸ್ಟಂಟ ಅಕೌಂಟಂಟ್
ಜನರಲ್, ಮುಂಬಯಿ ೫-೦-೦

೧೬. ,, ನಾರಾಯಣರಾವ ಜೋಶಿ ಬಿ. ಎ. ಎಲೆಲ್ ಬಿ.
ಬೆಳಗಾಂವಿ ೫-೦-೦

೧೭. ,, ವಡವಡಿಗಿ ವೆಂಕಟರಾಯರು ಬಾಗಲಕೋಟೆ ೫-೦-೦

೧೮. ,, ಆರ್. ಜಿ. ದೇಶಪಾಂಡೆ ಎಂ. ಎ.
ಇನ್‌ಕಮ್ ಟ್ಯಾಕ್ಸ ಆಫೀಸರ, ಸಾತಾರಾ ೫-೦-೦

೧೯. ಅಶ್ವಥರಾವ ಮಹಿಷಿ ವಕೀಲರು, ಶಿರಹಟ್ಟಿ ೫-೦-೦

೨೦. ಡಾ. ಎಚ್. ಆರ್. ತೆರಗುಂಡಿ ಬೆಳಗಾಂವಿ ೫-೦-೦

೨೧. ಶ್ರೀ. ಎಂ. ಪಿ. ವಾಲಿ ಎಂ. ಎ. ಚೀಫ್ ಆಫೀಸರ,
ಬೆಳಗಾಂವಿ ೫-೦-೦




*The magic beauty of this Cream is its invisibility to the naked-eye and the Natural tone imparted — to the skin.*

Manufactured by the makers
of the
Famous Mysore Sandal Soap

**GOVT. SOAP FACTORY**

BANGALORE

# ಮನೋಹರ ಗ್ರಂಥಮಾಲೆಯ ಪ್ರಕಟನೆಗಳು

ವರ್ಷದಲ್ಲಿ ೧೫೦ ಪುಟಗಳುಳ್ಳ ಆರು ಸರಸ ಗ್ರಂಥಗಳು

ವಾರ್ಷಿಕ ಚಂದಾ ಅ. ವೆ. ಸೇರಿ ೩--೮--೦ ಮಾತ್ರ

| | | | | | |
|---|---|---|---|---|---|
| ೧ | ಸುದರ್ಶನ (ಕಾದಂಬರಿ) | ಆನಂದಕಂದ (ತೀರಿವೆ) | ೦ | ೧೨ | ೦ |
| ೨ | ನವಿಲುಗರಿ (ಸಣ್ಣಕತೆಗಳ ಸಂಗ್ರಹ) | ಬೇರೆ ಬೇರೆ ಕತೆಗಾರರು | ೦ | ೧೨ | ೦ |
| ೩ | ತ್ರಿಪುರದಹನ | ಎಂ. ಎ ದೊರೆಸ್ವಾಮಿ ಐಯಂಗಾರ ಎಂ. ಎ. ಬಿ. ಎಲ್. | ೦ | ೧೨ | ೦ |
| ೪ | ಜಾಳುಂ (ಕಾದಂಬರಿ) | ಪ್ರೊ. ರಂ. ಶ್ರೀ. ಮುಗಳಿ ಎಂ. ಎ ಬಿ ಟಿ. | ೦ | ೧೨ | ೦ |
| ೫ | ಬ್ರಾಹ್ಮಣರ ಹುಡುಗಿ (ಕಾದಂಬರಿ) | ಆರ್. ವ್ಯಾಸರಾವ | ೦ | ೧೨ | ೦ |
| ೬ | ವಿಶ್ವಾಮಿತ್ರನ ಸೃಷ್ಟಿ ಭಾಗ ೧ (ಕಾದಂಬರಿ) | ಶ್ರೀರಂಗ | ೦ | ೧೨ | ೦ |
| ೭ | ,, ,, ,, ೨ ,, | ,, | ೧ | ೦ | ೦ |
| ೮ | ಜೀವನ (ಸಣ್ಣಕತೆಗಳ ಸಂಗ್ರಹ) | ಕೃಷ್ಣಕುಮಾರ ಕಾಶ್ಯಪ ಎಂ. ಎ. | ೦ | ೧೨ | ೦ |
| ೯ | ಕಾಳರಾತ್ರಿ (ಆಧ್ಯಾತ್ಮಿಕ ಕಥೆ) | ಮಧುರಚೆನ್ನರು | ೦ | ೧೨ | ೦ |
| ೧೦ | ಧರ್ಮಸೆರೆ (ಕಾದಂಬರಿ) | ಜಡಭರತ | ೦ | ೧೪ | ೦ |
| ೧೧ | ರಾಜಯೋಗಿ (ಐತಿಹಾಸಿಕ ಕಾದಂಬರಿ) | ಆನಂದಕಂದ | ೦ | ೧೪ | ೦ |
| ೧೨ | ಕೋಲ್ಮಿಂಚು (ಏಕಾಂಕನಾಟಕ ಸಂಗ್ರಹ) | ಬೇರೆ ಬೇರೆಯವರು | ೧ | ೦ | ೦ |
| ೧೩ | ಇಜ್ಜೋಡು ಭಾಗ ೧ (ಕಾದಂಬರಿ) | ಪ್ರೊ. ವಿ. ಕೃ. ಗೋಕಾಕ ಎಂ ಎ. | ೦ | ೧೨ | ೦ |
| ೧೪ | ಇಜ್ಜೋಡು ಭಾಗ ೨ ( ,, ) | ,, ,, | ೦ | ೧೨ | ೦ |
| ೧೫ | ಕುರಿಹಿಂಡು (ವಿಡಂಬನೆಗಳು) | ಜಲಧರ | ೧ | ೦ | ೦ |
| ೧೬ | ಧೂಮಕೇತು (ಕಾದಂಬರಿ) | ಕಡೆಂಗೋಡ್ಲು ಶಂಕರಭಟ್ಟ | ೦ | ೧೪ | ೦ |
| ೧೭ | ಧರ್ಮಜ್ಯೋತಿ | ಮ ಅ. ದೊರೆಸ್ವಾಮಿ ಅಯ್ಯಂಗಾರ ಎಂ. ಎ. ಬಿ. ಎಲ್. | ೧ | ೦ | ೦ |
| ೧೮ | ಸೇವಾಪ್ರದೀಪ (ಐತಿಹಾಸಿಕ ನಾಟಕ) | ಪ್ರೊ. ರಂ. ಶ್ರೀ. ಮುಗಳಿ ಎಂ. ಎ. ಬಿ. ಟಿ. | ೦ | ೧೨ | ೦ |
| ೧೯ | ದಿಲ್ಲೀಶ್ವರನ ದಿನಚರಿ | ನಾ. ಕಸ್ತೂರಿ ಎಂ ಎ. ಬಿ. ಎಲ್. | ೦ | ೧೨ | ೦ |
| ೨೦ | ಪುಷ್ಪಮಾಲೆ | ಶ್ರೀ. ಸ್ವಾಮಿ ಬೆಂಗಳೂರು | ೦ | ೧೨ | ೦ |
| ೨೧ | ಸೋಲೋ ಗೆಲುವೋ | ದೇವುಡು | ೦ | ೧೨ | ೦ |
| ೨೨ | ಹಳ್ಳಿಯ ಸಮಾಜ | ಆರ್. ವ್ಯಾಸರಾವ | ೦ | ೧೪ | ೦ |

— ಬಿಡಿಮುತ್ತು —

| | | | | |
|---|---|---|---|---|
| ಸಾಹಿತ್ಯ ಮತ್ತು ವಿಮರ್ಶೆ | ಶ್ರೀ. ದ. ರಾ. ಬೇಂದ್ರೆ ಎಂ. ಎ. | ೦ | ೧೨ | ೦ |
| ಪಯಣ (ಕವನಸಂಗ್ರಹ) | ಪ್ರೊ. ವಿ. ಕೃ. ಗೋಕಾಕ ಎಂ. ಎ. | ೦ | ೧೨ | ೦ |
| ಶಿರುಪಾಣಿ (ಗೀತಪ್ರಧಾನ ನಾಟಕ) | ಮಾಸ್ತಿ ವೆಂಕಟೇಶ ಅಯ್ಯಂಗಾರ ಎಂ. ಎ. | ೦ | ೮ | ೦ |

ಮನೋಹರ ಗ್ರಂಥಮಾಲಾ, ಧಾರವಾಡ